## ಬೀದಿ ಮಕ್ಕಳು



ಚಿತ್ರ: ಚಂದ್ರನಾಥ ಆಚಾರ್ಯ    ಕೃಪೆ: ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು



# ಕಸ್ತೂರಿ

ಕನ್ನಡ ಡೈಜೆಸ್ಟ್



ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಪ್ರಧಾನ ಸಂಪಾದಕ:
ಎನ್.ವಿ. ಜೋಶಿ

ಸಹ ಸಂಪಾದಕ:
ಎ. ಗುಂಡಾಭಟ್

ಮುಖಪುಟ ಚಿತ್ರ
ಪಕ್ಷಿಲೋಕ
ಕೃಪೆ:ಸ್ಪಾನ್ ಮ್ಯಾಗಝಿನ್

'ಕಸ್ತೂರಿ' ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-580 020

2. ರೆಸಿಡೆನ್ಸಿ ರಸ್ತೆ,
ಬೆಂಗಳೂರು
ದೂರವಾಣಿ : 2214392



## ಚಿಂತನ

ಪ್ರತಿಯೊಬ್ಬನಿಗೂ ಬುದ್ಧಿ ಬೆಳೆದಂದಿನಿಂದ ಸಾಯುವವರೆಗೂ ಹಲವಾರು ಆಸೆಗಳು ಕಾಡುತ್ತವೆ. ಆಸೆಯೇ ದುಃಖಕ್ಕೆ ಮೂಲ ಕಾರಣ ಎಂದು ಗೌತಮ ಬುದ್ಧ ಉಪದೇಶಿಸಿದ್ದಾನೆ. ಆಸೆಯನ್ನು ಜಯಿಸಿದವನು ಅಧ್ಯಾತ್ಮ ಸಾಧನೆಯ ಪಥದಲ್ಲಿ ಉನ್ನತ ಹಂತಕ್ಕೆ ತಲುಪಲು ಶಕ್ತನಾಗುತ್ತಾನೆ ಎಂದು ಪ್ರಾಚೀನ ಭಾರತದ ಋಷಿಗಳು ವ್ಯಾಖ್ಯಾನಿಸುತ್ತಿದ್ದರು.

ಭಾರತೀಯರಿಗೆ ಪರಮಪೂಜ್ಯವಾದ ಭಗವದ್ಗೀತೆಯಲ್ಲಿ ಭಗವಾನ್ ಶ್ರೀಕೃಷ್ಣ ಅರ್ಜುನನಿಗೆ ಹೀಗೆ ಬೋಧಿಸಿದ್ದಾನೆ.

ಯಂ ಯಂ ವಾಪಿ ಸ್ಮರನ್ ಭಾವಂ
ತ್ಯಜತ್ಯಂತೇ ಕಲೇವರಮ್
ತಂತಮೇವೈತಿ ಕೌಂತೇಯ
ಸದಾ ತದ್ಭಾವ ಭಾವಿತಃ

ಆಯುಷ್ಯದ ಕೊನೆಯ ಕ್ಷಣಗಳಲ್ಲಿ ಮನದಲ್ಲಿ ಏನನ್ನು ಸ್ಮರಿಸುತ್ತಾ ಪ್ರಾಣತ್ಯಾಗ ಮಾಡುತ್ತಾರೋ ಅದೇ ಭಾವವನ್ನು ಹೊಂದುತ್ತಾರೆ ಎಂಬುದು ಈ ಮಾತಿನ ಅರ್ಥ. ಈ 'ಆಸೆ' ಎಂಬುದು ಜೀವಿತದ ಅಂತಿಮ ಕ್ಷಣದವರೆಗೂ ನಮ್ಮನ್ನು ನೆರಳಿನಂತೆ ಎಡಬಿಡದೆ ಹಿಂಬಾಲಿಸುತ್ತಿರುತ್ತದೆ.

ಸಾಮಾನ್ಯವಾಗಿ ವ್ಯಕ್ತಿಯ ಕೊನೆಯ ಆಸೆಯನ್ನು ಈಡೇರಿಸಬೇಕೆಂಬ ಮಾತಿದೆ. ಘೋರ ಕಾಯಿಲೆಯಿಂದಲೋ, ತೀವ್ರ ವೃದ್ಧಾಪ್ಯದಿಂದಲೋ ಸಂಪೂರ್ಣ ಅಶಕ್ತರಾಗಿ ಹಾಸಿಗೆ ಹಿಡಿದ ವ್ಯಕ್ತಿ ಬದುಕುವ ಭರವಸೆಯನ್ನೇ ಸಂಪೂರ್ಣ ಕಳೆದುಕೊಂಡಾಗ ಅವನ ಕೊನೆಯ ಆಸೆ ಏನಾದರೂ ಇದ್ದರೆ ಈಡೇರಿಸಿಬಿಡಿ ಎಂದು ಅವನಿಗೆ ಚಿಕಿತ್ಸೆ ನೀಡುವ ವೈದ್ಯರೇ ಸಲಹೆ ಮಾಡುತ್ತಾರೆ.

ಕೊನೆಯ ಆಸೆ ವ್ಯಕ್ತಿಯಲ್ಲಿ ಒಮ್ಮೆಲೇ ಉದ್ಭವಿಸುವುದಿಲ್ಲ. ಜೀವನದುದ್ದಕ್ಕೂ ಆತ ಆ ಆಸೆಯನ್ನು ಪೋಷಿಸಿಕೊಂಡು ಬಂದಿರುತ್ತಾನೆ. ನಾನು ಎಂದಾದರೊಂದು ದಿನ ಸಾಯುತ್ತೇನೆ ಎಂಬ ಸಾವಿನ ಹೆದರಿಕೆ, ಇಲ್ಲವೇ ಸತ್ತೇ ಹೋಗುತ್ತೇನೆ ಎಂಬ ತೀವ್ರ ಭಯ ಇವುಗಳ ಮಧ್ಯೆ ಕೊನೆಯ ಆಸೆ ಜೀವ ಜಲದಂತೆ ಪುಟಿದು ಬರುತ್ತದೆ. ಆದರೆ ಆಯುಷ್ಯ ಮುಗಿಯಿತು ಎಂದು ಖಾತ್ರಿಯಾದಾಗ ಜೀವ ಹೋಗುತ್ತಿದೆ ಎಂದು ನಿಶ್ಚಿತವಾದಾಗ ಕೊನೆಯ ಆಸೆ ಜೀವನ್ಮರಣಗಳ ತವಕವಿಕೆಯಲ್ಲಿ ಲೀನವಾಗಿ ಹೋಗುವ ಸಂಭವವೇ ಹೆಚ್ಚು. ಇಷ್ಟಿದ್ದರೂ ಪ್ರಾಪಂಚಿಕ ಆಸೆಗಳ ಕೊನೆಯ ಸುತ್ತು ಬಂದು ಅದು ಈಡೇರುವುದು ದೈವಚಿತ್ತ.

ಈ ಸಂಚಿಕೆಯಲ್ಲಿ 'ಅಂತಿಮ ಆಸೆಯ ಹಲವು ಮುಖಗಳು' ಎಂಬ ಲೇಖನವಿದೆ. ಮರಣೋನ್ಮುಖ ಸ್ಥಿತಿಯಲ್ಲಿರುವ ವ್ಯಕ್ತಿಗಳ ಕೊನೆಯ ಆಸೆಯ ಬಗ್ಗೆ ಅದರ ಹಿನ್ನೆಲೆಯಲ್ಲಿ ಅಡಗಿರುವ ಮಾನವೀಯ ಭಾವನೆಗಳ ಬಗ್ಗೆ ಲೇಖನ ಬೆಳಕು ಚೆಲ್ಲುತ್ತದೆ.

• ವ್ಯವಸ್ಥಾಪಕ ಸಂಪಾದಕ



# ಅಂತರಂಗ







## ಸ್ಥಿರ ಶೀರ್ಷಿಕೆಗಳು



## ಬೆಳಕಿಂಡಿ

ಧನಂಜಯ, ಆಸಕ್ತಿಯನ್ನು ಬಿಟ್ಟು ಯೋಗಸ್ಥನಾಗಿ ಸೋಲು, ಗೆಲುವುಗಳಲ್ಲಿ ಸಮಾನ ಭಾವವನ್ನಿಟ್ಟು ಕರ್ಮ ಮಾಡು. ಸಮತ್ವವೇ ಯೋಗ.

✥ ಭಗವದ್ಗೀತೆ

ಸೂರ್ಯನು ಎಲ್ಲರ ಕಣ್ಣುಗಳನ್ನು ಏಕ ಕಾಲದಲ್ಲಿ ಬೆಳಗುವಂತೆ ಆತ್ಮನು ದೇಹ, ಅಂತಃಕರಣ ಮೊದಲಾದುವೆಲ್ಲವನ್ನೂ ಏಕ ಕಾಲದಲ್ಲಿ ಬೆಳಗುತ್ತಿದ್ದಾನೆ. ಕಸ್ತೂರಿಯ ಪರಿಮಳವನ್ನು ಬೆರಳಿನಿಂದ ತೋರಿಸುವುದು ಹೇಗೆ ಅನವಶ್ಯಕವೋ ಆತ್ಮ ಚೈತನ್ಯವನ್ನು ತೋರಿಸುವುದು ಹಾಗೆಯೇ.

✥ ಮಹಲಿಂಗರಂಗನ 'ಅನುಭವಾಮೃತ'

ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ

✥ ಶ್ರೀ ಪುರಂದರದಾಸರು

ಅಲ್ಲಾಹನ ಮಾರ್ಗದಲ್ಲಿ ತಮ್ಮ ಸಂಪತ್ತನ್ನು ಖರ್ಚು ಮಾಡುವವರ, ಖರ್ಚು ಮಾಡಿದುದನ್ನು ಆಡಿಕೊಳ್ಳದವರ ಮತ್ತು ಪರಪೀಡನೆಗೈಯದವರ ಪ್ರತಿಫಲವು ಅವರ ಪ್ರಭುವಿನ ಬಳಿ ಇದೆ. ಇವರಿಗೆ ಯಾವ ಭಯ ಮತ್ತು ವ್ಯಥೆಯು ಸಂಭವವಿಲ್ಲ.

ದಾನ ಧರ್ಮಗಳು ಪಾಪಕರ್ಮಗಳನ್ನು ಅಳಿಸಿಬಿಡುತ್ತವೆ. ನೀರು ಬೆಂಕಿಯನ್ನು ಅಳಿಸಿಬಿಡುವಂತೆ.

✥ ಇಸ್ಲಾಮಿನ ಸೂಕ್ತಿ

## ಪುಸ್ತಕ ವಿಭಾಗ

(ಮೂರನೇಯ ಪುಟದಿಂದ)

## ಆಸ್ಮಾ ಪೀಡಿತರಿಗೆ ದಾರಿ ದೀಪ

ಸಿ.ಎಂ ಶಾಸ್ತ್ರಿ ಅವರು ಬರೆದಿರುವ ಆರೋಗ್ಯದಂಗಳ ಲೇಖನ "ಆಸ್ಮಾಯಣ" (ಕಸ್ತೂರಿ ಫೆಬ್ರುವರಿ) ಒಂದೇ ಉಸುರಿಗೆ ಓದಿದೆ. ಲೇಖನದ ಧಾಟಿ ನೋಡಿ ನಗು ಬಂತು. (ದಿ. ಪಾ.ವೆಂ.ರವರ "ನಾನು ಆಸ್ಮಾದ ಷಷ್ಠ್ಯಬ್ಧಿ ಆಚರಿಸಿದೆ "ಓದಿ ನೋಡಿರಿ). ಜೊತೆಗೆ ಅನುಕಂಪವೂ ಉಂಟಾಯಿತು. ವೈದ್ಯಕೀಯ ವಿಜ್ಞಾನ ಎಷ್ಟೆಲ್ಲಾ ಮುಂದುವರಿದಿದ್ದರೂ ಇಂತಹ 'ಗೆಳೆಯನಿಗೋ ಬೇತಾಳನಿಗೊ' ವಿದಾಯ ಹೇಳಲು ಸಾಧ್ಯವಾಗಲಿಲ್ಲ ಎಂದು ಬೇಸರವೂ ಆಯಿತು.

ಬಹುಶಃ ಹುಟ್ಟಿನಿಂದ ಬಂದ ಅಂಗ ವೈಕಲ್ಯಗಳಂತೆ ಆಸ್ಮಾ ಜುವೆನೈಲ್ ಡಯಾಬಿಟೀಸ್, ರ್‍ಯುಮಾಟಿಸಂ ಮುಂತಾದ ಗುಣಪಡಿಸಲಾರದ ಕಾಯಿಲೆಗಳನ್ನು ಇಟ್ಟುಕೊಂಡೇ ಮನುಷ್ಯ ಬದುಕಲು ನಿಮ್ಮಂತೆ ಕಲಿಯಬೇಕೇನೊ. ಅದರ ಚಟ ತೆಗೆಯಬೇಕೆಂದು ಪ್ರಯತ್ನಿಸುವುದು ವ್ಯರ್ಥ. ಆದರೆ ರೋಗಿಗಳಿಗೆ ಅದು ಅರ್ಥವಾಗುವ ಹೊತ್ತಿಗೆ ಶಾಸ್ತ್ರಿಗಳಂತೆ ಬಹುವರ್ಷ ಕಳೆದಿರುತ್ತದೆ.

ಏನೇ ಆದರೂ ಮಾಸ್ತರು ಬೇತಾಳನನ್ನು ಕಟ್ಟಿಕೊಂಡೇ ಅಧ್ಯಾಪಕಗಿರಿ ಮುಗಿಸಿದ್ದು, ತನ್ನ ಆತ್ಮ ಕಥನವನ್ನು ಪ್ರಕಟಪಡಿಸಿದ್ದು, ಇತರ ಯುವ ಆಸ್ಮಾ ಪೀಡಿತರಿಗೆ ದಾರಿದೀಪವಾಗಬಲ್ಲುದು.

ತಮ್ಮ ಬರಹಕ್ಕೆ ಬಂದ ಪ್ರತಿಕ್ರಿಯೆಗಳನ್ನು ಓದುವ ವರೆಗಾದರೂ ಶ್ರೀಯುತರು ದೇವರ ದಯದಿಂದ ಬದುಕಿರಲೆಂದು ಹಾರೈಸುತ್ತೇನೆ.

❖ ನೇ.ಗೋ.ಭ
ಕುಕ್ಕೆಸುಬ್ರಹ್ಮಣ್ಯ

ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: 45 ಏಪ್ರಿಲ್ 2001 ಸಂಚಿಕೆ: 8

# ಭಗವಂತನ ಒಲುಮೆ

"ಅಪಮಾನವಾದರೆ ಒಳಿತು. ಅಪರೂಪ ಹರಿ ನಾಮ ಜಪಿಸುವ ಮನುಜಗೆ" ಎಂದು ಹಾಡಿದ ದಾಸಾಗ್ರಣಿ ಪುರಂದರದಾಸರ ತರುವಾಯ ಧಾಸಪಂಥ ದಲ್ಲಿ ಎದ್ದು ಕಾಣುವ ವ್ಯಕ್ತಿ ಶ್ರೀ ವಿಜಯದಾಸರು. ಭಗವಂತನ ಸರ್ವೋತ್ತಮತ್ವವನ್ನು ಎತ್ತಿ ತೋರಿಸುವಲ್ಲಿ ಆ ದೇವೋತ್ತಮನ ವಕ್ಷಸ್ಥಳಕ್ಕೆ ಒದ್ದು ಪ್ರಸಿದ್ಧಿ ಪಡೆದ ಭೃಗು ಋಷಿಯ ಅಂಶ ಸಂಭೂತರೆಂದೇ ಖ್ಯಾತರಾದ ದಾಸರಿವರು. ಇವರು ತಮ್ಮ ಜೀವನದ ಬಾಲ್ಯ ಯೌವನಗಳನ್ನು ಕಿತ್ತುತಿನ್ನುವ ಬಡತನದಿಂದಾಗಿ ಕಡುಕಷ್ಟದಲ್ಲೆ ಕಳೆದರು.

ಅವರೂರಲ್ಲಿ ಒಮ್ಮೆ ಒಬ್ಬ ಶ್ರೀಮಂತರ ಮನೆಯಲ್ಲಿ ಅನ್ನಸಂತರ್ಪಣೆಯಿತ್ತು. ಒಂದು ತುತ್ತು ಅನ್ನಕ್ಕೆ ಕೈಒಡ್ಡುವ ಕಾಲ ದಾಸರದು. ಅಲ್ಲಿ ಅನಾಯಾಸ ಸುಗ್ರಾಸ ಭೋಜನ ದೊರಕುವುದೆಂದು ದಾಸರು ಅಲ್ಲಿಗೆ ಹೋದಾಗ ಆ ಸಿರಿವಂತ ಇವರನ್ನು ಬಿಟ್ಟೀ ಆಳಾಗಿ ಬೆಳಗಿನಿಂದ ಬೈಗಿನವರೆಗೂ ದುಡಿಸಿಕೊಂಡು ಅನ್ನ ಹಾಕದೆ ಅವಮಾನಿಸಿ ಕಳಿಸಿದ.

ವಿಜಯದಾಸರು ಆ ಅವಮಾನದಿಂದ ತುಂಬ ದುಃಖಿತರಾಗಿ, ಸಾತ್ವಿಕ ಸಂತಾಪದ ತಳಮಳದಿಂದ ತತ್ತರಿಸಿ ಹೋದರು. ತಮ್ಮ ವೃದ್ಧ ತಾಯಿಯೊಂದಿಗೆ, ತಮ್ಮ ತಂಗಿಯರನ್ನು ಕರೆದುಕೊಂಡು ದುಸ್ಥಿತಿಯಲ್ಲಿದ್ದ ತಮ್ಮ ಸೋದರ ಮಾವನಲ್ಲಿಗೆ ಹೋದರು. ಅಲ್ಲೂ ಅವರಿಗೆ ದೊರೆತಿದ್ದು ತಿರಸ್ಕಾರ. ತಾಯಿಯ ಅವಸಾನದ ಬಳಿಕ ಜೀವನದಲ್ಲಿ ಜಿಗುಪ್ಸೆ ತಾಳಿ ಕಾಶಿಗೆ ಹೋದರು. ಅಲ್ಲಿ ಹಲವಾರು ವರ್ಷಗಳ ಕಾಲ ಭಗವಂತನ ಚಿಂತನೆಯಲ್ಲಿ ಕಾಲಕಳೆದರು. ಒಮ್ಮೆ ಹಸಿವೆಯಿಂದ ಬಳಲಿ ಬೆಂಡಾಗಿ ಕಾಶಿಯಮಂದಿರವೊಂದರಲ್ಲಿ ಕೇವಲ ಜಲಪ್ರಾಶನ ಮಾಡಿ ಮಲಗಿದಾಗ ಸ್ವಪ್ನದಲ್ಲಿ, ಅವರ ಉದ್ಧಾರಕರಾದ ಗುರು ಪುರಂದರದಾಸರು ಬಂದು ಅವರನ್ನು ತಟ್ಟಿ ಎಬ್ಬಿಸಿದಂತಾಗಿ "ನೀನು ಜನಿಸಿದ್ದು ಭಗವನ್ಮಹಿಮೆ ಸಾರುವುದಕ್ಕಾಗಿ. ಅವನ ದಾಸನಾಗಿ ನಿನ್ನ ಜೀವನ ಪಾವನವಾಗಬೇಕು" ಎಂದು ಕಿವಿಯಲ್ಲಿ ಉಸುರಿದಂತಾಯಿತು. ಕೂಡಲೇ ಎಚ್ಚರಗೊಂಡರು. ದೇಹಾದ್ಯಂತ ವಿದ್ಯುತ್ ಸಂಚಾರದ ಅನುಭವವಾದಂತಾಯಿತು. ಎದ್ದು ಪುಳಕಿತರಾಗಿ ಭಾವಪರವಶರಾಗಿ ಗುರುಗಳನ್ನು ಸ್ತೋತ್ರಮಾಡಿದರು.

ಕಾಲಕ್ರಮೇಣ ಅವರಿಗೆ ಭಗವದೊಲುಮೆ ಸಿದ್ಧಿಸಿತು. ಮರಳಿ ತಮ್ಮೂರಿಗೆ ಬಂದಾಗ ಅವಮಾನಿಸಿದವರೇ ಅವರ ಕೃಪೆಗಾಗಿ ಕಾಲಿಗೆರಗಿದರು. ಅವರಲ್ಲಿ ಮೂಡಿದ ದೈವೀಕಳೆಕಂಡು ಜನ ಅವರನ್ನು ಗೌರವಿಸಿದರು. ಧನಧಾನ್ಯ ಕಾಣಿಕೆಯ ರೂಪದಲ್ಲಿ ರಾಶಿ ರಾಶಿಯಾಗಿ ಅವರ ಬಳಿ ಬಂದು ಬೀಳತೊಡಗಿತು. ಅದನ್ನೆಲ್ಲ ಭಗವಂತನ ವೈಭವೋಪೇತ ಪೂಜೆಗಾಗಿ, ಅನ್ನಸಂತರ್ಪಣೆಗಾಗಿ ವಿನಿಯೋಗಿಸಿದರು. ಅಂದು ಒಪ್ಪತ್ತು ಒಂದು ಸೌಟು ಗಂಜಿಗಾಗಿ ಸಂಜೆಯುವರೆಗೂ ಬಾಯ್ತೆರೆದು ಕುಳಿತ ಅವರು ಇಂದು ನಿತ್ಯ ಸಹಸ್ರಾರು ಜನರಿಗೆ ಅನ್ನದಾನ ಮಾಡುವ ತಮ್ಮ ಸ್ಥಿತಿ ಕಂಡು "ನಿನ್ನ ಒಲುಮೆ ಇರಲು, ನಿಖಿಲಜನರು ಬಂದು ಮನ್ನಿಸುವರೋ ಮಹಾರಾಯ ಎನ್ನ ಪುಣ್ಯಗಳಿಂದ ಈ ಪರಿ ಉಂಟೇನೋ? ನಿನ್ನದೇ ಸಕಲ ಸಂಪತ್ತು" ಎಂಬೊಂದು ಸುಳಾದಿ ರಚಿಸಿ, ಇದಕ್ಕೆಲ್ಲ ಭಗವಂತನ ಕಾರುಣ್ಯವೇ ಕಾರಣ ಎಂದು ಹೇಳಿಕೊಂಡಿದ್ದಾರೆ.

ನಮ್ಮ ಜೀವನದಲ್ಲೂ ನಮಗೆ "ಬೆಚ್ಚನ್ನ ಮನೆ, ಇಚ್ಛೆಯರಿವ ಸತಿಸುತರು, ವೆಚ್ಚಕ್ಕೆ ಕೈತುಂಬ ಹೊನ್ನು ಇದ್ದು ಜೊತೆಗೆ ಆರೋಗ್ಯಭಾಗ್ಯ, ಸಾಮಾಜಿಕ ಮನ್ನಣೆ, ಸೇವೆಯಲ್ಲಿನ ಅಂತಸ್ತು, ಗೌರವ, ವಾಹನ ಭಾಗ್ಯ, ಮಾನಸಿಕ ನೆಮ್ಮದಿ, ಇವೆಲ್ಲ ದೊರೆತಾಗ, ಭಗವಂತನ ಒಲುಮೆಯಿಂದ ದೊರೆತದ್ದು ಎಂಬ ವಿನೀತಭಾವ ನಮ್ಮಲ್ಲಿರಬೇಕು. ಅವನ ಸ್ಮರಣೆ ಮರಣ ಕಾಲದವರೆಗೂ, ನಮ್ಮ ನಾಲಿಗೆಯ ಮೇಲೆ ಗುಣಗುಣಿಸುತ್ತಿರಬೇಕು. ಉಂಡಿದ್ದು, ಉಟ್ಟಿದ್ದು, ತೊಟ್ಟಿದ್ದು, ಕೊಟ್ಟಿದ್ದು, ಪಡೆದದ್ದು, ಎಲ್ಲ ಅವನದೇ ಎಂಬ ಭಾವ ಸದಾ ಜಾಗೃತವಾಗಿರಬೇಕು.

ಪ್ರೊ. ಎನ್.ಜಿ. ಕೆ.

# ಪಕ್ಷಿಲೋಕದ ವಿಸ್ಮಯಗಳು

ಜಗತ್ತಿನಲ್ಲಿರುವ ಸುಮಾರು ಎಂಟೂವರೆ ಸಾವಿರಕ್ಕೂ ಅಧಿಕ ತಳಿಯ ಪಕ್ಷಿ ಜಾತಿಗಳ ಬಗ್ಗೆ ಪಕ್ಷಿ ಶಾಸ್ತ್ರಜ್ಞರು ಅಧ್ಯಯನ ಮಾಡಿದ್ದಾರೆ.

ಇವುಗಳಲ್ಲಿ ಬಹಳಷ್ಟು ಪಕ್ಷಿ ಜಾತಿಗಳು ಶತಶತಮಾನಗಳ ಹಿಂದಿನಿಂದಲೂ ಜನತೆಗೆ ಪರಿಚಯವಿದ್ದಿತು. 20ನೇ ಶತಮಾನದಲ್ಲಿ



ಇಂಡಿಗೋ ಬಂಟಿಂಗ್- ಕೆನಡಾ ಮತ್ತು
ಕೊಲ್ಲಿ ದೇಶಗಳಲ್ಲಿ ಕಂಡುಬರುವ ಪಕ್ಷಿಜಾತಿ



ಉತ್ತರ ಅಮೆರಿಕಾ ಗಿಡುಗ

ಕೆಲವೊಂದು ಹೊಸತಳಿಯ ಪಕ್ಷಿಗಳನ್ನು ಪ್ರಾಣಿಶಾಸ್ತ್ರಜ್ಞರು ಪತ್ತೆ ಹಚ್ಚಿದರು. 1938 ರಲ್ಲಿ ಎಡ್ಗಾರ್ಡೊ ಮೆಲ್ಬೊನಿ ಎಂಬ ಪ್ರಾಣಿ ಶಾಸ್ತ್ರಜ್ಞನು ಇಥಿಯೋಪಿಯಾದಲ್ಲಿ ಒಂದು ವಿಚಿತ್ರ ತಳಿಯ ಪಕ್ಷಿಯನ್ನು ಸಂಶೋಧಿಸಿದ. ಅಂದು ಅಸ್ತಿತ್ವದಲ್ಲಿದ್ದ ಯಾವುದೇ ಪಕ್ಷಿ ಜಾತಿಗೂ ಅದು ಸೇರಿರಲಿಲ್ಲ 1936 ರಲ್ಲಿ ಅಮೆರಿಕಾದ ಪಕ್ಷಿ ಶಾಸ್ತ್ರಜ್ಞ ಜೇಮ್ಸ್ ಚಾಪಿನ್ ಬೆಲ್ಜಿಯಂನಲ್ಲಿ ಪ್ರವಾಸ ಕೈಗೊಂಡಿದ್ದಾಗ ಅಲ್ಲಿನ ಮ್ಯೂಸಿಯಂ ಸ್ಟೋರ್ ರೂಮ್‌ನಲ್ಲಿ ಒಂದು ಬೀರುವಿನಲ್ಲಿ ಕೆಲವು ಪಕ್ಷಿಗಳ ಗರಿಗಳನ್ನು ಪತ್ತೆಹಚ್ಚಿದ. ಜೇಮ್ಸ್ ಚಾಪಿನ್ ಜಗತ್ತಿನಲ್ಲಿ ಹಲವಾರು ತಳಿಯ ಪಕ್ಷಿಗಳ ಬಗ್ಗೆ ಗಾಢ ಅಧ್ಯಯನ ಮಾಡಿದ್ದ. ಆತ ಬೆಲ್ಜಿಯಂ ಮ್ಯೂಸಿಯಂನಲ್ಲಿ ಕಂಡ ಪಕ್ಷಿಯ ಗರಿಗಳು ಈ ಹಿಂದೆ ಆತನಿಗೆ ಪರಿಚಯವಿದ್ದ ಯಾವುದೇ ಪಕ್ಷಿ ಜಾತಿಯದಾಗಿರಲಿಲ್ಲ.

ಮ್ಯೂಸಿಯಂನ ತಜ್ಞರನ್ನು ಚಾಪಿನ್ ವಿಚಾರಿಸಿದಾಗ ಅದು ಒಂದು ಜಾತಿಯ ಆಫ್ರಿಕನ್ ನವಿಲು ಪಕ್ಷಿಯ ತಳಿಗೆ ಸೇರಿದ್ದಾಗಿದೆ ಎಂಬುದು ಗೊತ್ತಾಯಿತು. ಆದರೆ ಆಫ್ರಿಕಾದಲ್ಲಿ ನವಿಲುಗಳು ಜೀವಿಸುತ್ತಿರಲಿಲ್ಲ. ಅದೂ ಅಲ್ಲದೆ ಬೆಲ್ಜಿಯಂ ಮ್ಯೂಸಿಯಂನಲ್ಲಿ ಸ್ಟೋರ್ ರೂಮ್‌ನಲ್ಲಿ ಕಂಡು ಬಂದ ಪಕ್ಷಿಯ ಗರಿಗಳು ಆಫ್ರಿಕಾದ ನವಿಲುಗಳ ಜಾತಿಗೆ ಸೇರಿದ ಪಕ್ಷಿಯ ಗರಿಗಳಾಗಿರಲಿಲ್ಲ.

ಡಾ. ಚಾಪಿನ್ ಈ ಗರಿಗಳ ರಹಸ್ಯ ಬೇಧಿಸುವ ಉದ್ದೇಶದಿಂದ ಆಫ್ರಿಕಾದ ಪ್ರವಾಸ ಕೈಗೊಂಡ. ಆಫ್ರಿಕಾದ ಕಾಂಗೊ ಅರಣ್ಯವಲಯದಲ್ಲಿ ಚಾಪಿನ್ ಸಂಚರಿಸುತ್ತಿದ್ದಾಗ ಒಂದು ವಿಚಿತ್ರ ಪಕ್ಷಿ ಅವನ ಗಮನಸೆಳೆಯಿತು. ಈ ಪಕ್ಷಿಗಳು ರಾತ್ರಿ ವೇಳೆ ಜೋರಾಗಿ ಕೂಗುತ್ತಿದ್ದವು. ಭಾರೀ ಸದ್ದು ಮಾಡುತ್ತಾ ಆಗಸದಲ್ಲಿ ಉನ್ನತಸ್ತರದಲ್ಲಿ ಹಾರಾಡುತ್ತಿದ್ದುವು. ಅವುಗಳ ಮಾಂಸ ಅತ್ಯಂತ ರುಚಿಕರವಾಗಿತ್ತು. ಕಾಂಗೋದಲ್ಲಿ ಕಂಡುಬಂದ ಈ ಪಕ್ಷಿಯು ಒಂದು ಜಾತಿಯ ನವಿಲು ಆಗಿದ್ದಿತು. ಆದರೆ ಅದು ಭಾರತೀಯ ನವಿಲಿಗಿಂತ ಭಿನ್ನವಾಗಿತ್ತು. ವಾಸ್ತವವಾಗಿ ಆಫ್ರಿಕಾದ ನವಿಲುಗಳು ಭಾರತೀಯ ನವಿಲುಗಳ ಪೂರ್ವಜರಾಗಿದ್ದುವು.

ಇಂದಿಗೂ ನಮ್ಮ ಈ ಭೂ ಮಂಡಲದಲ್ಲಿ ಪಕ್ಷಿ ಶಾಸ್ತ್ರಜ್ಞರು ಹಾಗೂ ಪ್ರಾಣಿಶಾಸ್ತ್ರಜ್ಞರ ಕಣ್ಣಿಗೆ ಬೀಳದಿರುವ ನೂರಕ್ಕೂ ಅಧಿಕ ಪಕ್ಷಿ ಜಾತಿಗಳಿವೆ.

ಈ ಭೂಮಂಡಲದಲ್ಲಿ ಪಕ್ಷಿ ಜಾತಿಗಳು ಅಸ್ತಿತ್ವಕ್ಕೆ ಬಂದು ನಿಖರವಾಗಿ ಎಷ್ಟು ವರ್ಷಗಳು ಕಳೆದಿರಬಹುದು? ಈ ಪ್ರಶ್ನೆಗೆ ಉತ್ತರ ಅಷ್ಟು ಸುಲಭವಲ್ಲ. ಪಕ್ಷಿಗಳಿಗೆ ಸಂಬಂಧಿಸಿದಂತೆ ಅತ್ಯಂತ ಪ್ರಾಚೀನ ಪಳೆಯುಳಿಕೆ ಆರ್ಕಿಯೊಪೆಟೆರಿಕ್ಸ್ ಲಿಥೊಗ್ರಾಫಿಕಾ. ಈ ಪಕ್ಷಿ ಜಾತಿ ಒಂದು ಪುಟ್ಟ ಪಾರಿವಾಳದ ಗಾತ್ರದಲ್ಲಿದ್ದಿತಂತೆ. ಸುಮಾರು 138ಮಿಲಿಯ ವರ್ಷಗಳ ಹಿಂದಿನ ಜುರಾಸಿಕ್ ಯುಗಕ್ಕೆ ಸೇರಿದ ಈ ಪಕ್ಷಿಯ ಜೀವ್ಯವಶೇಷಗಳು ಬವೇರಿಯಾ ಮತ್ತು ಜರ್ಮನಿಯಲ್ಲಿ ಪತ್ತೆಯಾದವು. ಆರ್ಕಿಯೊಪೆಟೆರೀಕ್ಸ್‌ನ ಮೊತ್ತ ಮೊದಲ ಅಸ್ಥಿಪಂಜರ 1861 ರಲ್ಲಿ ಪತ್ತೆಯಾಯಿತು.

ಅರವತ್ತಮೂರು ಮಿಲಿಯ ವರ್ಷಗಳ ಹಿಂದೆ ಕ್ರಿಟೇಶಿಯನ್ ಯುಗದ ಅಂತ್ಯದಲ್ಲಿ ಜೀವಿಸಿದ್ದ ಪಕ್ಷಿಗಳ ಜೀವ್ಯವಶೇಷಗಳೂ ದೊರೆತಿವೆ. ಅವು ಇಂದಿನ ನೀರು ಹಕ್ಕಿಗಳನ್ನು ಹೋಲುತ್ತವೆ.

ಚಾರಿತ್ರಿಕ ದಾಖಲೆಗಳನ್ನು ರಚಿಸುವ ಸಂಪ್ರದಾಯ ಜಾರಿಗೆ ಬಂದ ಬಳಿಕ ಪಕ್ಷಿ ಶಾಸ್ತ್ರಜ್ಞರು ಸುಮಾರು 900 ತಳಿಯ ಪಕ್ಷಿಗಳ ಹೆಸರುಗಳನ್ನು ದಾಖಲಿಸಿದ್ದಾರೆ. ಅವುಗಳಲ್ಲಿ 60 ಕ್ಕೂ ಅಧಿಕ ಪಕ್ಷಿ ಜಾತಿಗಳು ಇಂದು ಭೂಮಂಡಲದಿಂದಲೇ ಅಸ್ತಿತ್ವದಿಂದ ಅಳಿಸಿ ಹೋಗಿವೆ. ಬೇಟೆ ಹಾಗೂ ಅರಣ್ಯನಾಶವೇ ಅಪರೂಪದ ಪಕ್ಷಿ ಸಂತತಿ ನಿರ್ನಾಮವಾಗಲು ಮುಖ್ಯ ಕಾರಣವೆನ್ನಬಹುದು.

ಪಕ್ಷಿಜಾತಿಗಳು ಜಗತ್ತಿನ ಎಲ್ಲ ಖಂಡಗಳಲ್ಲಿ, ಯಾವುದೇ ಬಗೆಯ ಪರಿಸರ ವಾತಾವರಣದಲ್ಲಿ ಜೀವಿಸಬಲ್ಲವು. ದ್ವೀಪ ಪ್ರದೇಶಗಳಲ್ಲಿ, ಮರುಭೂಮಿಗಳಲ್ಲಿ ಅಂಟಾರ್ಕ್ಟಿಕಾ, ಆರ್ಕಟಿಕ್ ಮುಂತಾದ ಧ್ರುವ ಪ್ರದೇಶಗಳಲ್ಲಿ ಪಕ್ಷಿಗಳು ನೆಲಸಿವೆ.

ಪಕ್ಷಿಗಳು ಅಸಾಧಾರಣ ಹಾರಾಟ ಸಾಮರ್ಥ್ಯ ಹೊಂದಿದ್ದರೂ, ಪ್ರತಿಯೊಂದು ತಳಿಯೂ ಒಂದು ನಿರ್ದಿಷ್ಟ ಭೌಗೋಳಿಕ ವ್ಯಾಪ್ತಿಯನ್ನು ತಮ್ಮ ವಾಸ ಹಾಗೂ ಚಟುವಟಿಕೆಗಾಗಿ ಆರಿಸಿಕೊಳ್ಳುತ್ತವೆ

ಪೆರೆಗ್ರಿನ್ ಫಾಲ್ಕನ್ ಮತ್ತು ಸಾಮಾನ್ಯ ಗೂಬೆ ಅಂಟಾರ್ಕ್ಟಿಕಾ ಖಂಡ ಹೊರತುಪಡಿಸಿ ಜಗತ್ತಿನ ಉಳಿದೆಲ್ಲ ಖಂಡಗಳಲ್ಲಿ ಕಂಡು ಬರುತ್ತದೆ. ಕೆಲವು ಪಕ್ಷಿ ಜಾತಿಗಳು ಸೀಮಿತ ಭೌಗೋಲಿಕ ವ್ಯಾಪ್ತಿ ಹೊಂದಿವೆ. ದಕ್ಷಿಣ ಅಮೆರಿಕಾ, ಆಸ್ಟ್ರೇಲಿಯಾ, ಮತ್ತು ಆಫ್ರಿಕಾದಲ್ಲಿ ಕೆಲವು ವಿಶಿಷ್ಟ ಪಕ್ಷಿ ಜಾತಿಗಳಿವೆ. ಜಗತ್ತಿನ ಬೇರೆಲ್ಲೂ ಅಂಥ ಪಕ್ಷಿ ಜಾತಿಗಳನ್ನು ಕಾಣಲು ಸಾಧ್ಯವಿಲ್ಲ.

ಪಕ್ಷಿ ಜಾತಿಗಳಲ್ಲಿಯೇ ಬೃಹತ್ ಸ್ವರೂಪದ ಪಕ್ಷಿ ಎಂದರೆ ಉಷ್ಟ್ರಪಕ್ಷಿ. ಆಫ್ರಿಕಾದ ಕೆಲವೆಡೆ ಕಂಡು ಬರುವ ಉಷ್ಟ್ರಪಕ್ಷಿಗಳು ಸುಮಾರು ಒಂಬತ್ತು ಅಡಿಗಳಿಗಿಂತಲೂ ಅಧಿಕ ಎತ್ತರ ಹೊಂದಿದ್ದು 170 ಕೆ.ಜಿ. ತೂಕ ಹೊಂದಿವೆ. ಅತ್ಯಂತ ಪುಟಾಣಿ ಹಕ್ಕಿಗಳೆಂದರೆ ಹಮ್ಮಿಂಗ್ ಹಕ್ಕಿಗಳು ಹಾಗೂ ಗುಬ್ಬಿ ಹಕ್ಕಿಗಳು ಕ್ಯೂಬಾದಲ್ಲಿ ಕಂಡು ಬರುವ ಒಂದು ಜಾತಿಯ ಹಮ್ಮಿಂಗ್ ಹಕ್ಕಿ ಕೇವಲ 6.3 ಸೆ.ಮೀಟರ್ ಎತ್ತರವಿರುತ್ತದೆ. ನೀರಿನಲ್ಲಿ ಈಜಾಡುತ್ತಾ ಬೇಟೆಯನ್ನು ಬೆಂಬತ್ತುವ ಪಕ್ಷಿಗಳಿವೆ. ಈ ದಿಶೆಯಲ್ಲಿ ಪೆಂಗ್ವಿನ್‌ಗಳಿಗೆ ಸರಿಸಾಟಿಯಾದ ಬೇರೆ ಯಾವ ಪಕ್ಷಿಗಳೂ ಇಲ್ಲ. ಪೆಂಗ್ವಿನ್‌ಗಳು ತಮ್ಮ ರೆಕ್ಕೆಗಳನ್ನು ನೀರಿನಡಿಯಲ್ಲಿ ವೇಗವಾಗಿ ಈಜಲು ಸಮರ್ಥವಾಗಿ ಬಳಸಿಕೊಳ್ಳುತ್ತವೆ. ಬಾತುಕೋಳಿಗಳೂ ಈಜುವ ಪಕ್ಷಿಗಳ ವರ್ಗಕ್ಕೆ ಸೇರಿವೆ.

ಜಗತ್ತಿನ ಪೌರಾಣಿಕ ಕತೆಗಳಲ್ಲಿ ದಂತಕತೆಗಳಲ್ಲಿ, ಸಂಪ್ರದಾಯ, ಪದ್ಧತಿಗಳಲ್ಲಿ ಧಾರ್ಮಿಕ ಸಾಹಿತ್ಯದಲ್ಲಿ ಪಕ್ಷಿಗಳು ಗಮನಾರ್ಹ ಪಾತ್ರ ವಹಿಸಿದ ಉಲ್ಲೇಖಗಳಿವೆ. ಹಕ್ಕಿಯ ಗರಿಗಳನ್ನು ಎಲ್ಲ ಸಂಸ್ಕೃತಿಗಳಲ್ಲೂ, ಧಾರ್ಮಿಕ ಕ್ರಿಯಾವಿಧಿಗಳಲ್ಲೂ ಅಲಂಕಾರಿಕ ಉದ್ದೇಶಗಳಿಗೂ ಬಳಕೆಯಾಗಿವೆ. ಧ್ರುವಪ್ರದೇಶಗಳಲ್ಲಿ ನೆಲಸಿರುವ ಜನರು ಹಕ್ಕಿಯ ಚರ್ಮದಿಂದ ತಯಾರಿಸಿದ

# ಡೋಡೊ ಎಂಬ ಪಕ್ಷಿ

ಅತೀ ಪ್ರಾಚೀನ ಕಾಲದಲ್ಲಿ ಮಾರಿಷಸ್ ದ್ವೀಪ ಸಮುದಾಯದ ಸುತ್ತುಮುತ್ತಲ ಅರಣ್ಯಗಳಲ್ಲಿ ಡೋಡೊ ಎಂಬ ಪಕ್ಷಿ ಜೀವಿಸಿತ್ತು. ಹೊರನೋಟಕ್ಕೆ ಟರ್ಕಿಶ್ ಬಾತುಕೋಳಿಯ ಗಾತ್ರದಲ್ಲಿದ್ದ ಈ ಪಕ್ಷಿಗೆ ದಪ್ಪನಾದ ಕೊಕ್ಕು, ಕುಳ್ಳಗಿನ ದಪ್ಪಗಿನ ಹಳದಿ ಬಣ್ಣದ ಪಾದಗಳು ಇದ್ದುವು. 1598 ರಲ್ಲಿ ಮಾರಿಷಸ್ ದ್ವೀಪವನ್ನು ವಸಾಹತುವಾಗಿ ಮಾಡಿಕೊಂಡಿದ್ದ ಡಚ್ಚರು ಮೊದಲ ಬಾರಿ ಈ ವಿಚಿತ್ರ ಪಕ್ಷಿಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ನೆಲದ ತಗ್ಗುಗಳಲ್ಲಿ ಹುಲ್ಲು ತುಂಬಿ ಗೂಡುಕಟ್ಟಿ ಅವು ಒಂದೇ ಒಂದು ಮೊಟ್ಟೆಯನ್ನು ಇಡುತ್ತಿದ್ದವಂತೆ. ಭಾರತದಲ್ಲಿ ಮೊಘಲ್ ಬಾದಷಹ ಜಹಾಂಗೀರನ ಆಸ್ಥಾನಕ್ಕೆ ಭೇಟಿ ನೀಡಿದ ಮಾರಿಷಸ್‌ನ ಪ್ರವಾಸಿಯೊಬ್ಬ ಡೋಡೊ ಹಕ್ಕಿಯನ್ನು ಬಾದ್ಷಹನಿಗೆ ಉಡುಗೊರೆ ನೀಡಿದನೆಂದು ಉಲ್ಲೇಖವಿದೆ.

ಡೋಡೊ ಪಕ್ಷಿಗಳ ಮಾಂಸ ಅತ್ಯಂತ ರುಚಿಕರವಾಗಿರುತ್ತಿತ್ತು. ಹೀಗಾಗಿ ಶಿಕಾರಿಗಳು ಅಸಂಖ್ಯಾತ ಡೋಡೊ ಪಕ್ಷಿಗಳನ್ನು ಬೇಟೆಯಾಡಿ ಅವುಗಳ ಸಂತತಿ ನಾಶಕ್ಕೆ ಕಾರಣರಾದರು.

1681 ರಲ್ಲಿ ಕೊನೆಯ ಬಾರಿಗೆ ಈ ಡೋಡೊ ಪಕ್ಷಿಗಳು ಈ ಭೂಮಿಯ ಮೇಲೆ ಕಾಣಿಸಿಕೊಂಡುವು. ಅನಂತರ ಅವುಗಳನ್ನು ನೋಡಿದವರಿಲ್ಲ. ಅವು ಪೃಥ್ವಿಯಲ್ಲಿ ಅಸ್ತಿತ್ವದಿಂದಲೇ ಅಳಿದು ಹೋದುವು.

ಉಡುಪುಗಳನ್ನು ದೇಹವನ್ನು ಬೆಚ್ಚಗಿರಿಸಲು ಬಳಸುವುದಿದೆ. ಬುಡಕಟ್ಟು ಜನಾಂಗದ ಜನತೆ ಪಕ್ಷಿಯ ಹಾಡಿನಿಂದ ಪ್ರೇರಿತರಾಗಿ ಜಾನಪದ ಗೀತೆಗಳನ್ನು ರಚಿಸಿದ್ದಾರೆ.

## ವಲಸೆ ಪ್ರವೃತ್ತಿ

ಪಕ್ಷಿಗಳು ವಲಸೆ ಹೋಗುವ ಪ್ರವೃತ್ತಿಯೂ ವಿಲಕ್ಷಣವಾಗಿರುತ್ತದೆ. ಪಕ್ಷಿಗಳು ತಾವು ನಿತ್ಯ ವಾಸಿಸುವ ತಾಣದಿಂದ ಸಹಸ್ರಾರು ಮೈಲು ದೂರದವರೆಗೆ ವಲಸೆ ಹೋಗುತ್ತದೆ. ಕೆಲವು ಜಾತಿಯ ಪಕ್ಷಿಗಳು ರಾತ್ರಿ ವೇಳೆ ವಲಸೆ ಹೋದರೆ ಕೆಲವು ಹಗಲು ಹೊತ್ತಿನಲ್ಲಿ ವಲಸೆ ಹೋಗುತ್ತವೆ. ಕೆಲವು ಪಕ್ಷಿಗಳು ರಾತ್ರಿ ಆಗಸದಲ್ಲಿ ನಕ್ಷತ್ರಗಳು ಮಿಂಚುವ ದಾರಿಯನ್ನು ಗುರುತು ಹಿಡಿದು ಹಾರುತ್ತಾ ವಲಸೆ ಹೋದರೆ ಇನ್ನು ಕೆಲವು ಹಗಲಿನಲ್ಲಿ ಸೂರ್ಯ ಪ್ರಕಾಶದ ಕೋನವನ್ನು ಗಮನಿಸಿ ವಲಸೆ ಹೋಗುತ್ತವೆ. ಬದಲಾಗುತ್ತಿರುವ ಋತುಗಳು, ಹವೆಯ ಪರಿಸ್ಥಿತಿಯೂ ಹಕ್ಕಿಗಳ ಜೀವನ ಶೈಲಿಯ ಮೇಲೆ ಪ್ರಭಾವ ಬೀರುತ್ತದೆ. ಉದಾಹರಣೆಯಾಗಿ ಮಳೆಗಾಲ ಆರಂಭವಾದಾಗ ಹಕ್ಕಿಗಳು ಬಿರುಮಳೆಯಿಂದ ರಕ್ಷಿಸಿಕೊಳ್ಳಲು ಗೂಡುಕಟ್ಟುವ ಜಾಗವನ್ನು ಸುರಕ್ಷಿತ ಸ್ಥಳದಲ್ಲಿ ಆರಿಸಿಕೊಳ್ಳುತ್ತವೆ.

ಕೆಲವು ಜಾತಿಯ ಪಕ್ಷಿಗಳು ತೀಕ್ಷ್ಣ ವಾಸನಾ ಶಕ್ತಿ ಹೊಂದಿರುತ್ತವೆ. ಮುಖ್ಯವಾಗಿ ರಣಹದ್ದುಗಳು. ತುರ್ಕಿಯ ರಣಹದ್ದುಗಳು ನೂರಾರು ಮೈಲುದೂರದಿಂದಲೇ ಕೊಳೆತ ಹೆಣಗಳನ್ನು ಪತ್ತೆ ಹಚ್ಚಬಲ್ಲುವು.

ಹಕ್ಕಿಗಳು ಗೂಡುಕಟ್ಟುವ ಪ್ರವೃತ್ತಿಯೂ ಒಂದಕ್ಕಿಂತ ಒಂದು ಭಿನ್ನವಾಗಿರುತ್ತವೆ. ಅದರಲ್ಲೂ ನೇಕಾರ ಹಕ್ಕಿಗಳು (ವೀವರ್ಸ್ ಬರ್ಡ್) ವಿಶಾಲವಾದ ಗೂಡುಗಳನ್ನು ಕಟ್ಟುವುದರಲ್ಲಿ



ಮರಕುಟಿಗ ಹಕ್ಕಿ

ಪರಿಣತವಾಗಿರುತ್ತದೆ. ಮರದ ಕೊಂಬೆಗಳು, ಹುಲ್ಲು, ಕಸಕಡ್ಡಿ, ಸಸ್ಯದನಾರು, ಗರಿಗಳು, ಮುಂತಾದುವನ್ನೆಲ್ಲಾ ಹಕ್ಕಿಗಳು ತಮ್ಮ ಗೂಡುಗಳ ರಚನೆಗೆ ಬಳಸಿಕೊಳ್ಳುತ್ತವೆ. ಕೆಲವು ಹಕ್ಕಿಗಳು ಗೂಡುಗಳ ರಚನೆಯಲ್ಲಿ ತಮ್ಮ ಜೊಲ್ಲನ್ನು ಬಳಸಿಕೊಳ್ಳುತ್ತವೆ. ಅನೇಕರು ಪಕ್ಷಿವೀಕ್ಷಣೆಯನ್ನು ಪ್ರಿಯ ಹವ್ಯಾಸವಾಗಿ ಬೆಳೆಸಿಕೊಂಡಿದ್ದಾರೆ. ಪಕ್ಷಿಗಳ ಚಲನವಲನ, ನಡವಳಿಕೆಗಳನ್ನು ಗಮನಿಸುವುದು, ಅವುಗಳ ಇಂಚರವನ್ನು ಆಲಿಸುವುದು ಅವುಗಳ ಫೋಟೋ ಸೆರೆಹಿಡಿಯುವುದು ಪ್ರಿಯ ಹವ್ಯಾಸವಾಗಿದೆ. ಹವ್ಯಾಸಿ ಪಕ್ಷಿ ವೀಕ್ಷಕರು ವಲಸೆ ಬರುವ ಪಕ್ಷಿಗಳ ವೀಕ್ಷಣೆಗಾಗಿಯೇ ಸಾವಿರಾರು ಮೈಲು ಪ್ರಯಾಣಿಸುತ್ತಾರೆ. ಅವುಗಳ ಇಂಚರವನ್ನು ಧ್ವನಿಮುದ್ರಿಸಿಕೊಳ್ಳುವವರೂ ಇದ್ದಾರೆ. ಒರಿಂತೋಲಜಿ ಅಥವಾ ಪಕ್ಷಿಗಳ ನಡವಳಿಕೆ, ಪ್ರವೃತ್ತಿ ಚಟುವಟಿಕೆ, ಜೀವನಶೈಲಿಯನ್ನು ಅಧ್ಯಯನ ಮಾಡುವ ವಿಜ್ಞಾನ ಈಚೆಗೆ ಹೆಚ್ಚು ಜನಪ್ರಿಯವಾಗುತ್ತಿದೆ.

• ಚಂದ್ರುಮತಿ

# ಗಾಂಧೀಜಿ-ಟಾಗೋರ್-ನಾರಾಯಣಗುರು: ಒಂದು ಅಪೂರ್ವ ಭೇಟಿ

ಮಹಾತ್ಮ ಗಾಂಧಿ ಮತ್ತು ರವೀಂದ್ರನಾಥ ಟಾಗೋರರು ಆಧುನಿಕ ರಾಷ್ಟ್ರೀಯತೆಯ ಪ್ರಜ್ಞೆಯನ್ನು ಭಾರತದ ಜನತೆಯಲ್ಲಿ ಜಾಗೃತಗೊಳಿಸಿದ ಮಹಾಪುರುಷರು. ಕೇರಳದ ನಾರಾಯಣ ಗುರು ಅವರಿಬ್ಬರಿಗೂ ಸಮಕಾಲೀನರಾಗಿದ್ದರು. ಗಾಂಧೀಜಿ - ಟಾಗೋರ್ - ನಾರಾಯಣ ಗುರು ಈ ಮೂವರು ಮಹಾಪುರುಷರ ಜೀವನದಲ್ಲಿ ನಿಕಟವಾದ ಕೆಲವು ಹೋಲಿಕೆಗಳು ಕಂಡು ಬರುತ್ತವೆ. ಮಹಾತ್ಮ ಗಾಂಧೀಜಿ 1869 ರಲ್ಲಿಯೂ ಟಾಗೋರರು 1861 ರಲ್ಲಿಯೂ ನಾರಾಯಣ ಗುರು 1854 ರಲ್ಲಿಯೂ ಜನಿಸಿದರು. ಗಾಂಧೀಜಿ ಮತ್ತು ಟಾಗೋರರ ಚಟುವಟಿಕೆಗಳು. ಇಡೀ ದೇಶವನ್ನು ವ್ಯಾಪಿಸಿದರೆ ನಾರಾಯಣ ಗುರುವಿನ ಚಟುವಟಿಕೆಗಳು ದಕ್ಷಿಣ ಭಾರತಕ್ಕೆ ಅದರಲ್ಲೂ ಮುಖ್ಯವಾಗಿ ಕೇರಳಕ್ಕೆ ಸೀಮಿತವಾಗಿದ್ದುವು.

1951 ರಲ್ಲಿ ಪ್ರಪ್ರಥಮ ಬಾರಿ ಗಾಂಧೀಜಿ - ಟಾಗೋರ್ ಶಾಂತಿನಿಕೇತನದಲ್ಲಿ ಭೇಟಿಯಾದರು. ಈ ಭೇಟಿ ಮತ್ತು ಆತ್ಮೀಯ ಸ್ನೇಹ ಟಾಗೋರರ ಬದುಕಿನ ಅಂತಿಮ ದಿನದ (1941) ವರೆಗೂ ಮುಂದುವರಿಯಿತು.

ನಾರಾಯಣ ಗುರು ಮಹಾಶಿವಭಕ್ತರಾಗಿದ್ದರು. ಕೇರಳದ



ವರ್ಕಳದಲ್ಲಿ (ಶಿವಗಿರಿ) ಅವರು ಶಿವನಿಗಾಗಿ ಒಂದು ದೇವಾಲಯವನ್ನು ಕಟ್ಟಿಸಿದ್ದರು (1908 ರಲ್ಲಿ). ನಾಲ್ಕು ವರ್ಷಗಳ ಬಳಿಕ ಅದೇ ದೇವಾಲಯದಲ್ಲಿ ಶಾರದಾಮಾತೆಯ ಮೂರ್ತಿ

ಪ್ರತಿಷ್ಠಾಪನೆಯೂ ನಡೆಯಿತು. 'ಶಿವಗಿರಿ' ದಕ್ಷಿಣ ಭಾರತದ ಕಾಶಿ ಎನಿಸಿತು. ಗಾಂಧೀಜಿ ಮತ್ತು ಟಾಗೋರ್ ಶಿವಗಿರಿಗೆ ಭೇಟಿ ನೀಡಿದ್ದರು.

1922 ನವೆಂಬರ್ 22 ರಂದು ಗುರುದೇವ ರವೀಂದ್ರನಾಥ ಟಾಗೋರರು ಶಿವಗಿರಿಗೆ ಭೇಟಿ ನೀಡಿದ್ದರು. ಶಿವಗಿರಿಯಲ್ಲಿರುವ ನಾರಾಯಣ ಗುರುಗಳ ಆಶ್ರಮಕ್ಕೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಕೇರಳದ ಖ್ಯಾತಕವಿ ಕುಮಾರನ್ ಆಶಾನ್ ಅಲ್ಲಿದ್ದರು. ಆಗ ಒಂದು ವಿಲಕ್ಷಣ ಘಟನೆ ನಡೆಯಿತು. ನಾರಾಯಣ ಗುರು ಮಹಾ ತಪಸ್ವಿಯೂ ಆಗಿದ್ದರು. ಕವಿವರ್ಯ ಟಾಗೋರರು ಆಶ್ರಮಕ್ಕೆ ಭೇಟಿ ನೀಡಲಿರುವ ನಿಖರವಾದ ಸಮಯವನ್ನು ಮೊದಲೇ ಸ್ವಾಮೀಜಿಯವರಿಗೆ ತಿಳಿಸಲಾಗಿತ್ತು. ಆದರೂ ನಾರಾಯಣ ಗುರು ಆಶ್ರಮದಲ್ಲಿ ಒಂದು ಕೊಠಡಿಯಲ್ಲಿ ಗಾಢವಾದ ಧ್ಯಾನದಲ್ಲಿ ಮಗ್ನರಾಗಿದ್ದರು.

ಗಾಂಧೀಜಿ ಟಾಗೋರರನ್ನು ಮೂಲತಃ ಮಹಾನ್ ಕವಿ ಎಂದು ಪರಿಗಣಿಸಿದ್ದರು. ಆದರೆ ಟಾಗೋರರ ಭೇಟಿಯಾದ ಬಳಿಕ ಮಹಾತ್ಮರು ತಮ್ಮ ಅಭಿಪ್ರಾಯ ಬದಲಾಯಿಸಿಕೊಂಡರು. ಟಾಗೋರರನ್ನು ಅತ್ಯಂತ ಗೌರವ ಭಾವನೆಯಿಂದ 'ಗುರುದೇವ' ಎಂದು ಸಂಬೋಧಿಸ ತೊಡಗಿದರು. ಇದಕ್ಕೆ ಪ್ರತಿಯಾಗಿ ಟಾಗೋರರು ಗಾಂಧೀಜಿಯನ್ನು ರಾಜಕೀಯ ನೇತಾರನಿಗಿಂತಲೂ ಮಿಗಿಲಾಗಿ ಅಧ್ಯಾತ್ಮಿಕ ನಾಯಕನೆಂದು ಪರಿಗಣಿಸಿದ್ದರು.

ಗಾಂಧೀಜಿ ಮತ್ತು ಟಾಗೋರರನ್ನು ದಕ್ಷಿಣ ಭಾರತದತ್ತ ಸೆಳೆದವರು ನಾರಾಯಣ ಗುರುಗಳು. 20ನೇ ಶತಮಾನದ ಆರಂಭದ ಕಾಲಘಟ್ಟದಲ್ಲಿ ನಾರಾಯಣ ಗುರು ಮಹಾನ್ ಸಮಾಜ ಸುಧಾರಕನೆಂದು ಕೇರಳದಲ್ಲಿ ಖ್ಯಾತರಾಗಿದ್ದರು. ಅವರು ದಲಿತ ಜನ ಸಮುದಾಯದ 'ಉದ್ಧಾರಕ್ಕೆ ಶ್ರಮಿಸಿದರು'. ಸಮಾಜದಲ್ಲಿ ಮೇಲುವರ್ಗದ , ಮೇಲ್ಜಾತಿಯ ಹಿಂದೂಗಳಿಂದ ಅಮಾನುಷ ಶೋಷಣೆಗಳಿಗೆ ಗುರಿಯಾಗುತ್ತಿರುವ ದಲಿತರನ್ನು ಉದ್ಧರಿಸುವ ಮಹಾನ್ ಕಾರ್ಯಭಾರವನ್ನು ಜೀವನದಲ್ಲಿ ಪರಮ ವ್ರತದಂತೆ ಪಾಲಿಸಿಕೊಂಡು ಬಂದರು.

ಟಾಗೋರರು ಆಶ್ರಮಕ್ಕೆ ಭೇಟಿ ನೀಡುವ ದಿನದಂದು ಮುಂಜಾನೆಯೇ ನಾರಾಯಣ ಗುರುಗಳು ಆಶ್ರಮದ ಕೊಠಡಿಯಲ್ಲಿ ಬಾಗಿಲು ಹಾಕಿ ಧ್ಯಾನಮಗ್ನರಾಗಿದ್ದರು.

ಅವರಿಗೆ ತೊಂದರೆ ಉಂಟುಮಾಡಲು



ಯಾರೂ ಬಯಸಲಿಲ್ಲ. ಆಗ ಯಾರೋ ಸುದ್ದಿ ಮುಟ್ಟಿಸಿದರು. ಇನ್ನು ಕೇವಲ 30 ನಿಮಿಷಗಳಲ್ಲಿ ಟಾಗೋರರು ಆಶ್ರಮಕ್ಕೆ ತಲುಪಲಿದ್ದಾರೆ. ತಕ್ಷಣ ನಾರಾಯಣ ಗುರು ಧ್ಯಾನಸ್ಥಿತಿಯಿಂದ ಎಚ್ಚತ್ತು ಕೊಠಡಿಯ ಬಾಗಿಲು ತೆರೆದು ಹೊರಬಂದು ಟಾಗೋರರನ್ನು ಸ್ವಾಗತಿಸಿದರು. ಆಶ್ರಮಕ್ಕೆ ತಲುಪುವ ಸಮಯವನ್ನು ಮುಂಚಿತವಾಗಿಯೇ ಊಹಿಸಿದ್ದರು.

ಇಬ್ಬರು ಮಹಾಪುರುಷರು ದೀರ್ಘಕಾಲ ಸಾಮಾಜಿಕ ಹಾಗೂ ದಾರ್ಶನಿಕ ವಿಚಾರಗಳ

ಬಗ್ಗೆ ಚರ್ಚಿಸಿದರು, ಆಶ್ರಮದಿಂದ ನಿರ್ಗಮಿಸುವ ಮೊದಲು ಟಾಗೋರರು ತಮ್ಮ ಈ ಭೇಟಿಯ ಬಗ್ಗೆ ಹೀಗೆ ಬರೆದರು. "ನಾನು ಈ ಜಗತ್ತಿನಲ್ಲಿ ಅನೇಕ ಸ್ಥಳಗಳಿಗೆ ಪ್ರಯಾಣಮಾಡಿದ್ದೇನೆ. ಸಂತರನ್ನು, ಸಿದ್ಧಪುರುಷರನ್ನು, ಆಧ್ಯಾತ್ಮ ಸಾಧಕರನ್ನು ಭೇಟಿ ಮಾಡಿದ್ದೇನೆ. ಆದರೆ ನಾರಾಯಣ ಗುರುಗಳ ಮಹಾನ್ ವ್ಯಕ್ತಿತ್ವ, ಅವರ ಅಗಾಧ ಸಂತತನಕ್ಕೆ ಸರಿಸಾಟಿಯಾಗುವವರನ್ನು ನಾನು ಇನ್ನೂ ಭೇಟಿಯಾಗಿಲ್ಲ. ಅನಂತತೆಯತ್ತ ಈ ಮಹಾನ್ ಯೋಗಿಯ ದೃಷ್ಟಿ ಅವರ ವ್ಯಕ್ತಿತ್ವದ ಸುತ್ತ ಆವರಿಸಿದ ದೈವಿಕ ಪ್ರಭೆ, ಅವರ ಅಲೌಕಿಕ ಶಕ್ತಿ. ನನ್ನ ಮನಸ್ಸಿನ ಮೇಲೆ ಗಾಢ ಪ್ರಭಾವ ಬೀರಿತು. ಈ ನೆನಪುಗಳನ್ನು ನಾನು ಸದಾ ಕಾಪಾಡಿಕೊಳ್ಳುತ್ತೇನೆ".

1925 ರಲ್ಲಿ ಮಹಾತ್ಮರು ನಾರಾಯಣ ಗುರುಗಳನ್ನು ಭೇಟಿಯಾದರು. ಈ ಭೇಟಿ ಸಾಮಾಜಿಕವಾಗಿ ಪ್ರಚಂಡ ಪ್ರಭಾವ ಬೀರಿತು. ಸುಪ್ರಸಿದ್ಧ 'ವೈಕಂ ಸತ್ಯಾಗ್ರಹ'ದ ದಿನಗಳಲ್ಲಿ ಮಹಾತ್ಮರು ತಿರುವಾಂಕೂರಿಗೂ ಭೇಟಿ ನೀಡಿದರು. ವೈಕಂ ಸತ್ಯಾಗ್ರಹದ ಸ್ಫೂರ್ತಿಯಿಂದಲೇ ಮಹಾನ್ ಸಮಾಜ ಸುಧಾರಕರೆನಿಸಿದ ಇ.ವಿ.ಆರ್. (ಪೆರಿಯಾರ್) ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದರು. ಮಹಾತ್ಮರು ತಿರುವಾಂಕೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿಯೇ ಎರಡು ಪ್ರಧಾನ ಘಟನೆಗಳು ಸಂಭವಿಸಿದುವು.

ಒಂದು ಅಸ್ಪೃಶ್ಯತೆ ನಿವಾರಣೆಗಾಗಿ ಚಳುವಳಿ. ಇನ್ನೊಂದು ದೇವಾಲಯಗಳಿಗೆ ಹರಿಜನರ ಪ್ರವೇಶ. ವೈಕಂ ಸತ್ಯಾಗ್ರಹದಲ್ಲಿ ಭಾಗವಹಿಸಿದ ಬಳಿಕ ಮಹಾತ್ಮರು ನಾರಾಯಣ ಗುರುಗಳ ಜತೆಯಲ್ಲಿಯೇ ಇದ್ದರು. ಅಸ್ಪೃಶ್ಯತೆ ನಿವಾರಣೆ, ದೇವಾಲಯಕ್ಕೆ ಹರಿಜನರ ಪ್ರವೇಶ, ಹರಿಜನೋದ್ಧಾರ, ಸಾಮಾಜಿಕ ಅಸಮಾನತೆ ನಿವಾರಣೆ - ಇವೇ ಮುಂತಾದ ಸಮಸ್ಯೆಗಳ ಬಗ್ಗೆ ಇಬ್ಬರು ಮಹಾಪುರುಷರು ಚರ್ಚಿಸಿದರು. ಆಶ್ರಮದಲ್ಲಿರುವ ಹರಿಜನ ಬಾಲಕರು ನಾರಾಯಣ ಗುರುಗಳ 'ದೈವ ದಶಕಂ' ಪ್ರಾರ್ಥನಾ ಸ್ತೋತ್ರವನ್ನು ಗಾಂಧೀಜಿಯ ಸಮ್ಮುಖದಲ್ಲಿ ಸುಶ್ರಾವ್ಯವಾಗಿ ಹಾಡಿದರು.



ಮಲೆಯಾಳಂ ಭಾಷೆಯಲ್ಲಿ ರಚನೆಯಾದ, ಸರಳವಾದ ಭಕ್ತಿಭಾವ ತುಂಬಿದ ಪ್ರಾರ್ಥನಾ ಗೀತೆ ಇದಾಗಿದೆ. ಅದ್ವೈತ ವೇದಾಂತದ ಗಹನ ಸತ್ಯಗಳು ಅದರಲ್ಲಿ ಒಳಗೊಂಡಿವೆ.

"ದಕ್ಷಿಣ ಭಾರತಕ್ಕೆ ತಾವು ನೀಡಿದ ಭೇಟಿ ನಾರಾಯಣ ಗುರುಗಳ ದರ್ಶನದಿಂದ ಸಾರ್ಥಕವಾಯಿತು" ಎಂದು ಗಾಂಧೀಜಿ ಅನಂತರ ಹೇಳಿದರು. ಅನಂತರ ಗಾಂಧೀಜಿ ಶಿವಗಿರಿಯಲ್ಲಿ ಹಾಗೂ ತಿರುವನಂತಪುರದಲ್ಲಿ ನಡೆದ ಸಾರ್ವಜನಿಕ ಸಭೆಗಳಲ್ಲೂ ಭಾಗವಹಿಸಿದರು.

(ಸಾಧಾರ: ಭವಾನ್ಸ್ ಜರ್ನಲ್)

# ನಾನೂ ಹೆಣ್ಣಲ್ಲವೇ?



ಹಿಂದಿದೆಲ್ಲ ನಾನೂ ಹೇಳುತ್ತಿದ್ದೆ ಎಲ್ಲ ಕವಿಗಳ ಹಾಗೆ,
ಈ ಹುಡುಗಿಯರೇ ಹೀಗೆ,
ಹೇಳುವುದಿಲ್ಲ ಯಾರಿಗೂ ತಮ್ಮೆದೆಯ ಬೇಗೆ
ಮನವ ನೀಡುತ್ತಾರೆ ಯಾರದೋ ಪ್ರೀತಿಗೆ
ಮದುವೆಯಾಗುತ್ತಾರೆ ಇನ್ಯಾರದೋ ಜೊತೆಗೆ
ಸೇರಿ ಹೋಗುತ್ತಾರೆ ಕಟ್ಟುಬಿಡದ ಒಲೆಯ ಒಳಗೆ
ಹೋಲಿಸಿಕೊಳ್ಳುತ್ತಾರೆ ತಮ್ಮ ನೋವನ್ನು ಒಲೆಯ ಮೇಲಿನ ಕಲೆಗೆ
ಕಟ್ಟು ಹಾಕುವುದಿಲ್ಲ ಹರಿಯುವ ಕಣ್ಣೀರ ಧಾರೆಗೆ,
ನಲ್ಲನಲ್ಲದ ಪತಿ ಬಂದು "ಏನಾಯ್ತೇ?" ಎಂದು ಕೇಳುತ್ತಿದ್ದ ಹಾಗೆ
ಉತ್ತರಿಸುತ್ತಾರೆ "ಏನಿಲ್ಲ! ಹೆಚ್ಚುತ್ತಿದ್ದೇನೆ ನೀರುಳ್ಳಿಯನ್ನು ಸಾರಿಗೆ"
ಇದೆಲ್ಲ ನಡೆಯುತ್ತಲೇ ಇರುತ್ತದೆ ಅವರ ಕೊನೆಯುಸಿರಿರುವವರೆಗೆ
ನಂತರ ಮಾಸಿಹೋಗುತ್ತದೆ ಅವರ 'ಬರೆಯದ ಕತೆ' ಅವರ
ಬದುಕಿನೊಂದಿಗೆ
ಆದರೆ ಕಾರಣ ಅದಲ್ಲ ನನ್ನ ಚಿಂತೆಗೆ
ನಾ ಭಯಪಡುತ್ತಿದ್ದೇನೆ ನನ್ನಷ್ಟಕ್ಕೆ, ನನ್ನೆದೆಯ ಒಳಗೆ,
'ನಿಧಾನ'ವಾಗಿ ನಾನೂ ಸೇರುತ್ತಿದ್ದೇನೆ 'ಇವರ' ಸಾಲಿಗೆ?!

• ಬಿ.ಎ.ಗ್ರೀಷ್ಮಾ

ಇಲ್ಲಿ ಕತ್ತರಿಸಿ

ಸಂಭಾವ್ಯ ಉತ್ತರಗಳನ್ನು ಹೊಂದಿರುವ 10 ಪ್ರಶ್ನೆಗಳು ಈ ಅಂಕಣದಲ್ಲಿ ಇರುತ್ತವೆ. ಸರಿಯಾದ ಉತ್ತರದ ಮುಂದೆ ✓ ಗುರುತು ಹಾಕಿ **31-3-2001** ರ ಒಳಗೆ ನಮಗೆ ಕಳುಹಿಸತಕ್ಕದ್ದು. ಬಂದ ಸರಿ ಉತ್ತರಗಳನ್ನೆಲ್ಲ ಸೇರಿಸಿ ಲಾಟರಿ ಎತ್ತಿ ಮೂರು ಬಹುಮಾನಗಳನ್ನು ನಿರ್ಧರಿಸಲಾಗುವುದು.

ಏಪ್ರಿಲ್ 30-4-01

· ಲೋಕಶಿಕ್ಷಣ ಟ್ರಸ್ಟ್‌ನ ನೌಕರರು ಈ ಸ್ಪರ್ಧೆಯಲ್ಲಿ ಪಾಲ್ಗೊಳ್ಳಲು ಅವಕಾಶವಿಲ್ಲ.




**1) ಸಾವೊ ಟೋಮ್ ಮತ್ತು ಪ್ರಿನ್ಸಿಪೆ ಎಂದರೇನು?**

(1) ಒಂದು ದೇಶದ ಹೆಸರು (2) ಗ್ರೀಕ್ ಪುರಾಣಗಳಲ್ಲಿ ಉಲ್ಲೇಖವಾದ ಪಕ್ಷಿ (3) ದಕ್ಷಿಣ ಅಮೆರಿಕಾದ ಖನಿಜ ವಲಯಗಳು (4) ಒಂದು ಸಸ್ಯಜಾತಿ

**2) 'ಪದ್ಯಂ ವಧ್ಯಂ ಗದ್ಯಂ ಹೃದ್ಯಂ' ಪ್ರಸಿದ್ಧವಾದ ಕನ್ನಡದ ವಾಕ್ಯ ರಚಿಸಿದ ಕವಿ**

(1) ತೊರವೆ ನರಹರಿ (2) ಕುಮಾರವ್ಯಾಸ (3) ನಂದಳಿಕೆ ಲಕ್ಷ್ಮೀನಾರಣಪ್ಪ (4) ಪಂಪ

**3) ಜಯಚಾಮರಾಜ ಒಡೆಯರ್ ಮೈಸೂರಿನ ಮಹಾರಾಜರಾದದ್ದು**

(1) 1940 (2) 1951 (3)1939 (4) 1942

**4) 'ಭೂಲೋಕಮಲ್ಲ' ಬಿರುದಾಂಕಿತನಾಗಿದ್ದ ಈ ರಾಜ ಮಹಾವಿದ್ವಾಂಸ**

(1) 6ನೇ ವಿಕ್ರಮಾದಿತ್ಯ (2) ಮುಮ್ಮಡಿ ಸೋಮೇಶ್ವರ (3) ಬಿಜ್ಜಳ (4) ಇಮ್ಮಡಿ ಸೋಮೇಶ್ವರ

**5) ಬಾದಷಹ ಜಹಾಂಗೀರನ ಆಸ್ಥಾನಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿ ಈತ**

(1) ಥಾಮಸ್ ಮನ್ರೋ (2) ಆಲ್ಬೂಕರ್ಕ (3) ಡೊಮಿಂಗೊ ಪಾಯಸ್ (4) ಸರ್ ಥಾಮಸ್ ರೋ.

**6) ಕ್ಲೋರೋಫಿಲ್ – ಹೀಗಂದರೇನು ?**

(1) ಪ್ರಾಣಿ ಅಂಗಾಂಶ (2) ಮಾನವ ಮೂಳೆಯ ಒಳಗಿನ ಘಟಕ (3) ಸಸ್ಯಗಳಲ್ಲಿರುವ ಹಸಿರು ಅಂಗಾಂಶ (4) ಖನಿಜ ಪದಾರ್ಥ

**7) ಈ ನಗರ ಕೆಳದಿ ಅರಸರ ರಾಜಧಾನಿಯಾಗಿತ್ತು**

(1) ಬಿದನೂರು (2) ಇಕ್ಕೇರಿ (3) ಶಿವಮೊಗ್ಗ (4) ಇಟಗಿ

**8) 'ಕೇಪ್ ಆಫ್ ಗುಡ್ ಹೋಪ್' ಅನ್ನು ಈ ಸಂಶೋಧಕ ಅನ್ವೇಷಿಸಿದ**

(1) ಡೇವಿಡ್ ಲಿವಿಂಗಸ್ಟನ್ (2) ಬಾರ್ತಲೋಮ್ಯು ಡಿಯಾಜ್ (3) ವಾಸ್ಕೋಡಗಾಮ (4) ಕೊಲಂಬಸ್

**9) ಮುಂಬೈ ಎಷ್ಟು ಬಾರಿ ರಣಜಿ ಟ್ರೋಫಿ ಗೆದ್ದುಕೊಂಡಿದೆ**

(1) 15 (2) 22 (3) 20 (4) 34

**10) ಟೆಸ್ಟ್ ಕ್ರಿಕೆಟ್ ಪಂದ್ಯಗಳಾಗುವ ಇಕ್ಬಾಲ್ ಸ್ಟೇಡಿಯಂ ಈ ದೇಶದಲ್ಲಿದೆ.**

(1) ಶಾರ್ಜಾದಲ್ಲಿ (2) ದುಬೈನಲ್ಲಿ (3) ಪಾಕಿಸ್ತಾನ (4) ಲಿಬಿಯಾ

**(ಉತ್ತರಗಳಿಗಾಗಿ ಮುಂದಿನ ಸಂಚಿಕೆ ನೋಡಿ)**

ಪ್ರಶ್ನೆಗಳಿಗೆ ಉತ್ತರಗಳನ್ನು ಈಗಲೇ ಯೋಚಿಸಿ, ಕೂಡಲೇ ಗುರುತಿಸಿ, ನಾಳೆಯೇ ಅಂಚೆಯಲ್ಲಿ ನಮಗೆ ಕಳುಹಿಸಿ. ನಿಮ್ಮ ಉತ್ತರಗಳು ಕಸ್ತೂರಿಯ 'ರಸಪ್ರಶ್ನೆ' ಅಂಕಣದ ಪುಟದಲ್ಲಿಯೇ ಇರಲಿ. ಕೈಬರಹದ ಉತ್ತರಗಳನ್ನು ಪರಿಗಣಿಸಲಾಗುವುದಿಲ್ಲ.

**100/ ರೂ.ಗಳಎರಡು ಬಹುಮಾನಗಳು! ಜತೆಗೆ ಸಮಾಧಾನಕರ ಬಹುಮಾನ ರೂಪದಲ್ಲಿ ಒಂದು ವರ್ಷ 'ಕಸ್ತೂರಿ' ಸಂಚಿಕೆಗಳು ಉಚಿತ!**

**ಹೆಸರು :** ........................................

**ವಿಳಾಸ :** ........................................

........................................

........................................ **ಪಿನ್ ಕ್ರಮಾಂಕ**

## ವಿಲಕ್ಷಣ ವಿದ್ಯಮಾನ

# ಗುಲಾಬಿಯ ವಿಚಿತ್ರ ವ್ಯಾಧಿ

**ಈ** ಘಟನೆ ನಡೆದು ಮೂವತ್ತು ವರ್ಷಗಳೇ ಕಳೆದು ಹೋಗಿವೆ. ಭೂತಪ್ರೇತ, ಮಾಟಮಂತ್ರ, ಇವೆಲ್ಲ ಕಟ್ಟುಕತೆಗಳು, ಮೂಢನಂಬಿಕೆಗಳು ಎಂದು ಹೇಳುವವರಲ್ಲಿ ನಾನೂ ಒಬ್ಬಳಾಗಿದ್ದೆ. ಹಳ್ಳಿಯಲ್ಲೇ ಹುಟ್ಟಿ ಹಳ್ಳಿಯಲ್ಲೇ ಬೆಳೆದರೂ, ಇವೆಲ್ಲ ಅಜ್ಞಾನದ ಪರಮಾವಧಿ ಎಂದು ನಂಬಿದ್ದೆ ನಾನು. ಆದರೆ ನನ್ನ ಮನೆಯಲ್ಲೇ ಕಣ್ಣೆದುರಿನಲ್ಲಿ ನಡೆದ ಪವಾಡಸದೃಶ ಘಟನೆಯ ನಂತರ, ನಾನು

ದಿನನಿತ್ಯ ಪೇಟೆಗೆ ಹೋಗಿ ಮೀನು ತರುವುದು ಗುಲಾಬಿಯ ಬೆಳಗಿನ ಕೆಲಸವಾಗಿತ್ತು. ಆ ಹೊತ್ತಿಗೆ ನಾನು ಮಕ್ಕಳನ್ನು ಶಾಲೆಗೆ ಕಳುಹಿಸಿ, ಚಿಕ್ಕ ಮಗುವೊಂದನ್ನು ಮೀಯಿಸಿ, ಅಡಿಗೆಯ ತಯಾರಿ ನಡೆಸುವಾಗ ಅವಳು ಮೀನು, ಕಾಯಿಪಲ್ಯೆ ಹಿಡಿದುಕೊಂಡು ಬರುತ್ತಿದ್ದಳು. ಅಂದು ಕೂಡಾ ಹೊತ್ತಿಗೆ ಸರಿಯಾಗಿ ಬಂದಳು ಗುಲಾಬಿ. ಆದಿನ ಶನಿವಾರ.

ಬಂದವಳೇ ಒಗೆಯಲು ಬಟ್ಟೆಗಳನ್ನು ಸೋಪು

**ಗುಲಾಬಿ ಎಂಬ ಆ ಹೆಣ್ಣು ಮಗಳು ನೋವಿನಿಂದ ಚೀರಾಡುತ್ತಾ ಅಳುತ್ತಿದ್ದಂತೆ ಸೂಜಿಗಿಂತ ಸಪುರವಾದ ಕಡ್ಡಿಗಳು ಕಣ್ಣಿಂದ ಉದುರಿದುವು. ಅರ್ಧ ಮುಷ್ಟಿ ಯಷ್ಟು ಕಡ್ಡಿಗಳು ಸಂಗ್ರಹವಾದುವು. ಆಕೆ ಪೂರ್ತಿ ಕುರುಡಳಾದಳು. ವಿಲಕ್ಷಣ ನಡವಳಿಕೆ ಪ್ರದರ್ಶಿಸತೊಡಗಿದಳು. ಮೂವತ್ತು ವರ್ಷಗಳ ಹಿಂದೆ ಲೇಖಕಿ ಕಣ್ಣಾರೆಕಂಡ ಈ ವಿಲಕ್ಷಣ ವಿದ್ಯಮಾನಗಳನ್ನು ನಂಬುವುದೂ ಬಿಡುವುದೂ ನಿಮಗೆ ಬಿಟ್ಟದ್ದು.**

ಇವುಗಳನ್ನು ನಂಬಲೇ ಬೇಕಾಯಿತು.

ಮುಂಬಯಿಯಲ್ಲಿ ನಾನು, ನನ್ನ ಪತಿ, ಮಕ್ಕಳೊಂದಿಗೆ ಸಂಸಾರ ಹೂಡಿ 12 ವರ್ಷಗಳಾಗುತ್ತ ಬಂದಿತ್ತು. ನಾಲ್ಕು ಮಕ್ಕಳು ಚಿಕ್ಕವರು, ಮೇಲಾಗಿ ನಾನಾಗ ಏಳು ತಿಂಗಳ ಬಸುರಿ. ಮಕ್ಕಳ ಲಾಲನೆ ಪಾಲನೆ ಕಷ್ಟವಾಗಿ ಊರಿನಿಂದ ಹುಡುಗಿಯೊಬ್ಬಳನ್ನು ಮನೆ ಕೆಲಸಕ್ಕೆ ಕರೆದುಕೊಂಡು ಹೋಗಿದ್ದೆ. ಸುಮಾರು ಒಂದೂವರೆ ವರ್ಷದಿಂದ ಆಕೆ ನನ್ನೊಂದಿಗಿದ್ದಳು. ಒಳ್ಳೇ ಕೆಲಸ ಮಾಡುವ, ವಿಧೇಯ ಬುದ್ಧಿಯ ಆರೋಗ್ಯವಂತ ಹುಡುಗಿ. ವಯಸ್ಸು 13-14ರ ಒಳಗೆ. ಹೆಸರು. ಗುಲಾಬಿ.

ನೀರಲ್ಲಿ ನೆನಸಿಡುವಾಗ, ನನ್ನ ಕಿರಿಯ ಮಗಳು ಎರಡು ವರ್ಷದ ಸುಜಾತ, ಕೈಯಲ್ಲೊಂದು ಬೆತ್ತ ಹಿಡಿದುಕೊಂಡು ಅವಳ ಹತ್ತಿರ ಬಂದಳು. ಗುಲಾಬಿ ಬಗ್ಗಿ ಬಟ್ಟೆ ನೆನಸಿ, ಎದ್ದು ನಿಲ್ಲುವಾಗ,

ಶೀಲಾ ಕೆ. ಶೆಟ್ಟಿ

ಮಗುವಿನ ಕೈಯಲ್ಲಿದ್ದ ಬೆತ್ತದ ತುದಿ ಕೊಂಚ ಅವಳ ಕಣ್ಣಿಗೆ ತಾಗಿತು. ಅವಳಿಗೆ ನೋವೇನೂ ಆಗಲಿಲ್ಲವಾದರೂ ಕಣ್ಣಿನಲ್ಲಿ 2-3 ತೊಟ್ಟು ರಕ್ತ ಬಂತು. ರಕ್ತ ಕಂಡು ನಾನು ಗಾಬರಿಯಾಗಿ, ಕಣ್ಣಿಗೆ ಔಷಧಿ ಹಾಕಿದೆ. ಎಲ್ಲವೂ ಸರಿ ಹೋಯಿತು. ಗುಲಾಬಿ ಮೊದಲಿನಂತೆ ಕೆಲಸ

ಮಾಡಿಕೊಂಡಿದ್ದಳು.

## ವಿಲಕ್ಷಣ ವರ್ತನೆ

ಆದರೆ ಮುಂದಿನ ಶನಿವಾರ ಅದೇ ಹೊತ್ತಿಗೆ ಗುಲಾಬಿ ವಿಚಿತ್ರವಾಗಿ ವರ್ತಿಸತೊಡಗಿದಳು. ಇದ್ದಕ್ಕಿದ್ದಂತೆ ಧಡಾರನೆ ನೆಲದ ಮೇಲೆ ಬೀಳುವುದು. ಕಾಲುಗಳನ್ನು ಕೈಗಳನ್ನು ನೆಲಕ್ಕೆ ಊರಿ, ಸರ್ಕಸ್ಸಿನವರು ಮಾಡುವಂತೆ, ದೇಹವನ್ನು ಬಿಲ್ಲಿನಂತೆ ಬಾಗಿಸಿ, ಕಿರುಚುತ್ತಿದ್ದಳು. ಆ ಹೊತ್ತಿಗೆ ಅವಳನ್ನು ನೆಟ್ಟಗೆ ನಿಲ್ಲಿಸುವ ನಮ್ಮ ಪ್ರಯತ್ನ ವ್ಯರ್ಥವಾಗುತ್ತಿತ್ತು. ಯಾಕೆಂದರೆ ಅವಳಿಗೆ ಅತಿಮಾನುಷ ಶಕ್ತಿ ಇರುವಂತೆ ನಮಗೆ ಭಾಸವಾಗುತ್ತಿತ್ತು. ಮತ್ತೊಮ್ಮೆ ನೆಲದ ಮೇಲೆ ಬಿದ್ದು ಕೈಕಾಲು ಬಡಿದು ಕಿರುಚುತ್ತಾ, ಕಣ್ಣುಕೆರಳಿಸಿ ಎಲ್ಲರನ್ನೂ ನೋಡುತ್ತಾ ಆದೇಶ ಬಂದವರಂತೆ ನಡುಗುತ್ತಿದ್ದಳು. ಮಾತು ಕಥೆ ಏನೂ ಇಲ್ಲ. ಇಂತಹ ಆವೇಶ ಭರಿತ ಕಿರುಚಾಟ, ದಿನಕ್ಕೆ 10-12 ಸಲ ನಡೆದು, ಗುಲಾಬಿ ಕೊನೆಗೆ ತೀವ್ರ ಬಳಲಿ, ಅರೆ ಪ್ರಜ್ಞಾವಸ್ಥೆಗೆ ತಲುಪುತ್ತಿದ್ದಳು. ಅವಳನ್ನು ಹಿಡಿದಿಡುವ ಕೆಲಸ ನನ್ನಿಂದ ಅಸಾಧ್ಯವಾಗಿ, ನಮ್ಮಣ್ಣ ಬಂದು ಮನೆಯಲ್ಲೇ ನಿಲ್ಲಬೇಕಾಯಿತು. ಯಾಕೆಂದರೆ ನನ್ನ ಪತಿ ವ್ಯಾಪಾರಕ್ಕಾಗಿ ಅಂಗಡಿಗೆ ಹೋಗುತ್ತಿದ್ದರು. ಬೆಳಿಗ್ಗೆ ಹೋದರೆ ಬರುವುದು ರಾತ್ರಿ 12ಕ್ಕೆ. ಗುಲಾಬಿಯ ಈ ವಿಚಿತ್ರ ವರ್ತನೆ ಸುಮಾರು ಐದು ದಿನಗಳ ಕಾಲ ಅವ್ಯಾಹತವಾಗಿ ನಡೆಯಿತು. ನಾವು ತಿಳಿದ ದೇವರಿಗೆಲ್ಲಾ ಹರಕೆ ಹೊತ್ತೆವು. ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ನಮ್ಮಣ್ಣ ಯಾರೋ ಅವನ ಗೆಳೆಯರ ಸಲಹೆಯಂತೆ ದಹಿಸರ್‌ನಲ್ಲಿರುವ ಒಬ್ಬ ಮಂತ್ರವಾದಿಯ ಬಳಿ ಹೋದ.

## ಮಂತ್ರವಾದಿಯ ಸಮ್ಮುಖದಲ್ಲಿ

"ಗುಲಾಬಿ ಬಜಾರಿಗೆ ಹೋಗುವಾಗ ಯಾರಿಗೋ ಮಾಡಿಟ್ಟ ಮಾಟದ ಪರಿಕರಗಳನ್ನು ದಾಟಿ ಬಂದಿದ್ದಾಳೆ. ಅದರಲ್ಲಿ ಸುಪ್ತವಾಗಿ ಅಡಗಿದ್ದ ನೀಚದೈವ ಅವಳ ಮೈಯಲ್ಲಿ ಹೊಕ್ಕಿದೆ. ಅದರ



ಉಚ್ಚಾಟನೆಯಾಗದೆ ಅವಳು ಸರಿಯಾಗುವುದಿಲ್ಲ ಬರುವ ಅಮವಾಸ್ಯೆ ನಡುರಾತ್ರಿಗೆ ಈ ಕೆಲಸ ನಡೆಯಬೇಕು. ನಾನು ಅಲ್ಲಿಗೆ ಸಾಮಗ್ರಿಯೊಡನೆ ಬರುತ್ತೇನೆ. ಅಲ್ಲಿವರೆಗೆ ಮಂತ್ರಿಸಿದ ತಾಯಿತವನ್ನು ಕೊಡುತ್ತೇನೆ. ಅವಳ ಬಲತೋಳಿಗೆ ಕಟ್ಟಿರಿ. ತುಂಬಾ ಜಾಗ್ರತೆ. ಅವಳು ತಾಯಿತವನ್ನು ಕಿತ್ತೆಸೆಯುವ ಪ್ರಯತ್ನ ಮಾಡುತ್ತಾಳೆ. ಹಾಗೆ ಮಾಡಲು ಬಿಡಬೇಡಿ. ರಾತ್ರಿ ಹೊತ್ತು ಮಕ್ಕಳ ಮೇಲೆ ಆಕ್ರಮಣ ಮಾಡಲೂ ಬಹುದು ಎಚ್ಚರದಿಂದಿರುವುದು ಒಳ್ಳೆಯದು. ಅದೂ ಅಲ್ಲದೆ ಅವಳು ಕಕ್ಕಸಿಗೆ ಹೋಗುವಾಗ ಯಾರಾದರೂ ಅವಳ ಜೊತೆಗಿರಬೇಕು. ಅವಳೊಬ್ಬಳೇ ಹೋದರೆ,ಅಲ್ಲಿ ತಾಯಿತ ಕಿತ್ತೆಸೆಯುವ ಪ್ರಯತ್ನ ಮಾಡುತ್ತಾಳೆ. ಯಾಕೆಂದರೆ ಅಂಥಹ ಅಶುದ್ಧ ಸ್ಥಳದಲ್ಲಿ ಈ ದುಷ್ಟ ಶಕ್ತಿಗಳ ಪ್ರಭಾವ ಹೆಚ್ಚಾಗಿರುತ್ತದೆ." ಇಷ್ಟು ಎಚ್ಚರಿಕೆ ಹೇಳಿ, ಮಂತ್ರವಾದಿ ಮಂತ್ರಿಸಿದ ತಾಯಿತವನ್ನೂ, ಕುಂಕುಮವನ್ನೂ ಕೊಟ್ಟು ಅಣ್ಣನನ್ನು ಕಳುಹಿಸಿದ.

ಮಂತ್ರವಾದಿಯ ಎಚ್ಚರಿಕೆ ಮಾತುಗಳನ್ನು ಕೇಳಿ ನಮಗೆ ಆಕಾಶವೇ ತಲೆ ಮೇಲೆ ಕಳಚಿ ಬಿದ್ದಂತಾಯ್ತು. ಅಮಾವಾಸ್ಯೆಗೆ ಇನ್ನೂ ಎಂಟು ದಿನಗಳಿವೆ. ಅಷ್ಟರವರೆಗೆ ಇವಳನ್ನು ತಡೆಯುವುದು ಯಾರು? ಸಣ್ಣ ಮಕ್ಕಳಿರುವ ಮನೆಯಲ್ಲಿ ಬಸುರಿ ಹೆಂಗಸಾದ ನಾನು, ರಾತ್ರಿ ಎಚ್ಚರದಿಂದಿರುವ ಬಗೆ ಎಂತು? ಮನೆಕೆಲಸದ ಜೊತೆಗೆ, ಇವೆಲ್ಲ ಹೇಗೆ ಮಾಡಲಿ? ಯೋಚಿಸಿ ಯೋಚಿಸಿ, ಸುಸ್ತಾದೆ.

ಗುಲಾಬಿ ಮಾನಸಿಕವಾಗಿ ಸಮಸ್ಥಿತಿಯಲ್ಲಿರುವಾಗ, ನಾವು ವಹಿಸುವ ಜಾಗ್ರತೆಗಳನ್ನು ಅಚ್ಚರಿಯಿಂದ ನೋಡುತ್ತಿದ್ದಳು. ಕಕ್ಕಸಿಗೆ ಅವಳ ಜೊತೆ ನಾನು ಹೋದಾಗ, ನಾಚಿಕೆ ಹಾಗೂ ಮುಜುಗರದಿಂದ, "ನೀವ್ಯಾಕೆ ಬರುತ್ತೀರಮ್ಮ? ನನಗೇನಾಗಿದೆ ಸರಿಯಾಗಿದ್ದೇನಲ್ಲ?" ಎಂದು ಬಾರದಂತೆ ತಡೆಯುವ ಪ್ರಯತ್ನ ಮಾಡುತ್ತಿದ್ದಳು. ಆದರೆ ಆವೇಶ ಬಂದಾಗ ತಾಯಿತವನ್ನು ಕಿತ್ತೆಸೆಯುವ ಅವಳ ಪ್ರಯತ್ನ, ಅವಳ ಭೀಮಶಕ್ತಿಯೊಂದಿಗೆ ವಿಜೃಂಭಿಸುತ್ತಿತ್ತು. ನಮ್ಮಣ್ಣ ಮನೆಯಲ್ಲೇ ಇದ್ದು ಅವಳನ್ನು ಕಾಯುತ್ತಿದ್ದ ಮಲಗಿದ್ದಲ್ಲೇ ಬಲ ತೋಳಿನಲ್ಲಿದ್ದ ತಾಯಿತವನ್ನು ಎಡಗೈಯಿಂದ ಕೀಳುವ ಪ್ರಯತ್ನ ಮಾಡುವುದು, ತಾಯಿತಕ್ಕೆ ಕೈಸೋಕಿದಾಗ, ಬೆಂಕಿ ತುಳಿದವರಂತೆ, ಧೊಪ್ಪನೆ ಆ ಎಡಗೈಯನ್ನು ನೆಲಕ್ಕಪ್ಪಳಿಸುವುದು, ಇವು ಮಲಗಿದಲ್ಲೇ ಆಕೆ ನಡೆಸುತ್ತಿದ್ದ ಸತತದಲೇ ಪ್ರಯತ್ನವಾಗಿತ್ತು. ಆಕೆ ತನ್ನ ಕೈಯನ್ನು ನೆಲಕ್ಕೆ ಬಡಿದೂ, ಬಡಿದೂ ಕೈ ಬಾತುಕೊಂಡಿತು. ಅಣ್ಣ ಇದನ್ನು ನೋಡಲಾರದೆ ತಾಯಿತದ ಮೇಲೆ ಎಂಟು ಮೊಳದ ವೇಷ್ಟಿ ಸುತ್ತಿ ಸೂಜಿನೂಲಿನಿಂದ ಅದನ್ನು ಹೊಲಿದು, ತಾಯಿತ ಕಾಣದಂತೆ ಮಾಡಿದ.ಕೈ ಪ್ಲಾಸ್ಟರ್ ಹಾಕಿದಂತೆ ಕಾಣುತ್ತಿತ್ತು. ಆದರೂ ಗುಲಾಬಿ ಇದನ್ನು ನಗುನಗುತ್ತಾ ನೋಡುತ್ತಿದ್ದಳು. ತನ್ನ ಪ್ರಯತ್ನ ಮುಂದುವರಿಸುತ್ತಲೇ ಇದ್ದಳು. ಅವಳ ಕೈ ನೆಲಕ್ಕೆ ತಾಗುವ ಜಾಗದಲ್ಲಿ ನಾವು ದಿಂಬುಗಳನ್ನಿಟ್ಟು, ಆದಷ್ಟು ಪೆಟ್ಟಾಗದಂತೆ ಜಾಗ್ರತೆ ವಹಿಸುತ್ತಿದ್ದೆವು. ಏನಿದ್ದರೂ, ದಿನವಿಡೀ ನಾವು ಅವಳ ಹತ್ತಿರ ಕುಳಿತಿರಬೇಕಿತ್ತು. ಏನಾದರೂ ಸ್ವಲ್ಪ ಹೊಟ್ಟೆಗೂ ಕೊಡಬೇಕಿತ್ತು. ಈ ನಡುವೆ ಅವಳ ಆರ್ಭಟ, ಕಿರುಚಾಟ, ಕುಸ್ತಿ ಮಾಡುವವರಂತೆ ಮೇಲೆ ಬಾಗುವುದು,ಮಕ್ಕಳನ್ನು ನುಂಗುವಂತೆ ನೋಡುವುದು, ಇವೆಲ್ಲಾ ರಾತ್ರಿ-ಹಗಲು ನಿರಂತರ ನಡೆಯುತ್ತಲೇ ಇತ್ತು. ಹುಡುಗಿ ಸೊರಗಿ ಕಡ್ಡಿಯಂತಾಗಿದ್ದಳು. ಈ ಎಲ್ಲಾ ಆರ್ಭಟ ರಂಪಾಟ ನಡೆಯುವಾಗ, ಅವಳ ತಲೆಯ ಮೇಲ್ಭಾಗದಲ್ಲಿ ಗೋಡೆಯ ಮೇಲಿದ್ದ ಧರ್ಮಸ್ಥಳದ ಮಂಜುನಾಥ ಸ್ವಾಮಿಯ ಫೋಟೋ ನೋಡಿದರೆ, ಆಕೆ ಕೂಡಲೇ ಅಳುತ್ತಾ ಕಿರುಚುತ್ತಾ ಅದನ್ನು ಅಲ್ಲಿಂದ ತೆಗೆಯಿರಿ ಎಂದು ಗೋಳಿಡುತ್ತಿದ್ದಳು. ನಾವಂತೂ, ಯಾವುದೂ ಅರ್ಥವಾಗದೆ, ಈ ದಾರುಣ ಸನ್ನಿವೇಶದೊಂದಿಗೇ ಎಂಟು ದಿನ ಕಳೆದೆವು. ರಾತ್ರಿ-ಹಗಲು ನಮಗೆ ಒಂದೇ ಆಗಿತ್ತು. ಮಕ್ಕಳಿಗೆ ಶಾಲೆ ಇಲ್ಲ, ಸರಿಯಾದ ಅಡಿಗೆ ಇಲ್ಲ ನಾನಂತೂ ಈಗಲೋ ಆಗಲೋ ಹಾಸಿಗೆ ಹಿಡಿಯುವ

ಹಂತದಲ್ಲಿದ್ದೆ. ನಮ್ಮ ಯಜಮಾನರಿಗೆ ದೇವರನ್ನು ಪ್ರಾರ್ಥಿಸುವುದೆ ಕೆಲಸವಾಗಿತ್ತು. ಅಣ್ಣನಿಗೆ ಗುಲಾಬಿಯ ಪಕ್ಕ ಬಿಟ್ಟು ಏಳುವಂತಿರಲಿಲ್ಲ. ಅವಳನ್ನು ತಡೆದು ಮಲಗಿಸುವ ಸಾಮರ್ಥ್ಯ ಅವನಿಗೆ ಮಾತ್ರವಿತ್ತು. ಈ ಹೊತ್ತಿನಲ್ಲಿ ಅವನು ನನ್ನೊಂದಿಗಿದ್ದುದು ನನ್ನ ಭಾಗ್ಯವಾಗಿತ್ತು.

ಅಂದು ಅಮಾವಾಸ್ಯೆ, ರಾತ್ರಿ 12 ಗಂಟೆಗೆ ಸರಿಯಾಗಿ ನಮ್ಮ ಮನೆಯಲ್ಲಿ ಮಂತ್ರವಾದಿ ಪೂಜೆ ಆರಂಭಿಸಿದ. ಗುಲಾಬಿಯನ್ನು ಎದುರು ಕುಳ್ಳಿರಿಸಿಕೊಂಡು ಮಂತ್ರ ಹಾಕಿದ. ಸೊಪ್ಪಿನಿಂದ ಬಡಿದ. ಹುಡುಗಿ ಅವನೊಂದಿಗೆ ಕಣ್ಣುಕೆರಳಿಸಿ, ಕೈ ತಿರುಗಿಸಿ, ಸನ್ನೆಯ ಮೂಲಕ, ಆರ್ಭಟದ ಮೂಲಕ ತನ್ನ ವಿರೋಧವನ್ನು ವ್ಯಕ್ತಪಡಿಸುತ್ತಿದ್ದಳು. ಕೊನೆಗೆ ಮಂತ್ರವಾದಿ ಮೆಣಸನ್ನು ಅಗ್ನಿಗೆ ಸಮರ್ಪಿಸಿದ. ಒಂದಿನಿತೂ ಘಾಟುಗೊತ್ತಾಗಲಿಲ್ಲ ನಮಗೆ. ಒಂದೇ ಒಂದು ಕೆಮ್ಮು ಅಥವಾಸೀನು ಯಾರಿಗೂ ಬರಲಿಲ್ಲ. ಹುಡುಗಿ ಕೊನೆಗೆ ಸುಮ್ಮನಾಗಿ, ಶಾಂತ ಸ್ಥಿತಿಗೆ ಬಂದಳು. ಮಂತ್ರವಾದಿ ನಮ್ಮಿಂದ ಬೇಕಾದಷ್ಟು ಹಣ ವಸೂಲಿ ಮಾಡಿ ಹೋದ. ಬೆಳಗಾಯಿತು.

## ಗುಲಾಬಿಯ ಕಣ್ಣಿನಿಂದ ಕಡ್ಡಿಗಳು

ಗುಲಾಬಿಯ ವಿಚಿತ್ರವ್ಯಾಧಿ ಶುರುವಾಗಿ ಅಂದಿಗೆ 14ನೇ ದಿನ. ಇನ್ನು ನಮ್ಮ ಗ್ರಹಚಾರ ಬಿಡುಗಡೆಯಾಯಿತು ಎಂದು ನಾವು ಭಾವಿಸಿದ್ದೆವು. ಆದರೆ...?

ಅಂದಿನ ಮುಂಜಾನೆ ಗುಲಾಬಿ, ಹಾಸಿಗೆಯಿಂದ ಏಳುವಾಗಲೇ ಅಂಧಳಾಗಿದ್ದಳು. ಕಣ್ಣಿದ್ದೂ ದೃಷ್ಟಿ ಇಲ್ಲದ ಕುರುಡಿಯಾಗಿದ್ದಳು. ಇದು ಒಂದೇ ದಿನ ಹೀಗಾಗಿತ್ತು. ಮರುದಿನ ಅದಕ್ಕಿಂತಲೂ, ವಿಲಕ್ಷಣವಾದ ನಾವೆಂದೂ ನೋಡದಿದ್ದ, ಕೇಳದಿದ್ದ ಅದ್ಭುತ ನಡೆಯತೊಡಗಿತು. ಗುಲಾಬಿಯ ಬಲ ಕಣ್ಣಿಂದ, ನೀರಿನೊಂದಿಗೆ ಒಂದು ಇಂಚು ಉದ್ದದ ಸೂಜಿಗಿಂತಲೂ ಸಪೂರವಾದ ಕಡ್ಡಿಗಳು ಬರತೊಡಗಿದ್ದುವು. ಒಂದೊಂದು ಕಡ್ಡಿ, ಕಣ್ಣಿಂದ ಬರುವಾಗಲೂ, ಗುಲಾಬಿ ತೀವ್ರವಾದ ನೋವನ್ನು ಅನುಭವಿಸುತ್ತಿದ್ದಳು. ಗರ್ಭಿಣಿಯರು ಅನುಭವಿಸುವ ಹೆರಿಗೆ ನೋವಿನಂತೆ. ಆದರೆ ಮೈಮೇಲೆ ಬರುತ್ತಿದ್ದ ಆವೇಶ ನಿಂತುಹೋಯಿತು. ಗುಲಾಬಿ ಸಹಜಸ್ಥಿತಿಯಲ್ಲೇ ಇರುತ್ತಿದ್ದಳು ಆದರೆ ಸುಮಾರು ಅರ್ಧ ಗಂಟೆಗೊಂದರಂತೆ ಕಡ್ಡಿಗಳು ಕಣ್ಣಿಂದ ಬರುವಾಗ ನೋವಿನ ಪರಾಕಾಷ್ಠೆ ತಲುಪುತ್ತಿದ್ದಳು. ಎಡೆ ಬಿಡದೆ ನಡೆದ ಈ ಕಡ್ಡಿ ಉದುರುವ ಕಾರ್ಯಕ್ರಮ ನಿರಂತರ ಎರಡು ದಿನ ನಡೆಯಿತು. ಮೂರನೇ ದಿನವೂ ನಡೆಯಿತು. ಮುಂಬಯಿಯಲ್ಲಿ ನೆಲಸಿದ್ದ ನಮ್ಮ ದಕ್ಷಿಣಕನ್ನಡದ ಉಡುಪಿಯ ಜನರೆಲ್ಲ ಸಾವಿರಾರು ಮಂದಿ ಬಂದು, ಈ ಕೌತುಕವನ್ನು ನೋಡಿ ಹೋದರು. ನೆರೆಹೊರೆ, ಬಂಧುಬಳಗ ಮನೆಯಲ್ಲೇ ಬೀಡು ಬಿಟ್ಟಿತ್ತು. ನಾವು ಏನೂ ತೋಚದೆ, ಮೂಕರಾಗಿ ಕುಳಿತು ಬಿಟ್ಟೆವು. ಮುಷ್ಠಿಯಲ್ಲಿ ಹಿಡಿಯಬಹುದಾದಷ್ಟು ಸುಮಾರು ಅರ್ಧಮುಷ್ಠಿ ಕಡ್ಡಿಗಳು ಜಮೆಯಾದವು. ಅದರೊಂದಿಗೆ ಅವಳ ಕಣ್ಣಿಂದ ಇಳಿದ ನೀರೆಷ್ಟೋ.

ಈ ಸಂಕಟವನ್ನು ಯಾವ ದೇವರಿಗೆ ಹೇಳಲಿ? ಭಗವಂತ ಯಾಕೆ ನಮಗೆ ಈ ರೀತಿಯ ಕಷ್ಟ ಕೊಡುತ್ತಾನೆ ಎಂಬುದನ್ನರಿಯದಾದೆವು. ಕೊನೆಗೆ ಒಬ್ಬ ಮಿತ್ರರ ಸಲಹೆಯಂತೆ, ಬಚ್ಚುಭಾಯಿ ಹಾಸ್ಪಿಟಲ್‌ನ ಕಣ್ಣಿನ ತಜ್ಞರಿಗೆ ತೋರಿಸಿದೆವು. ಅವರೇನು ಹೇಳಿದರು ಗೊತ್ತೇ...?

"ಕಣ್ಣು ಬಹಳ ಸೂಕ್ಷ್ಮವಾದ, ನಾಜೂಕಾದ ಅಂಗ. ಕಡ್ಡಿಯಿರಲಿ, ಒಂದು ಧೂಳಿನ ಕಣವನ್ನು ತನ್ನೊಳಗೆ ಇಟ್ಟುಕೊಳ್ಳಲಾರದು. ಹೀಗಿರುವಾಗ ನೀವು ಹೇಳುವುದೇನು? ಇಷ್ಟೊಂದು ಕಡ್ಡಿಗಳು ಆಕೆಯ ಕಣ್ಣಿಂದ ಬಂದದ್ದು ಎನ್ನುತ್ತೀರ? ಯಾರಾದರೂ ನಂಬಬಹುದೇ ಇದನ್ನು? ನಮ್ಮನ್ನೇನು ಹಳ್ಳೀಮುಕ್ಕಗಳೆಂದು ತಿಳಿದಿದ್ದೀರ...? ಹೋಗಿ ಹೋಗಿ ಇಲ್ಲಿಂದ..." ಎಂದು ಗದರಿಸಿದರು.

ಆದರೂ ನಾವು ಒಂದು ದಿನ ಅವಳನ್ನು

ಅಡ್ಮಿಟ್ ಮಾಡಿಕೊಳ್ಳುವಂತೆ ಗೋಗರೆದೆವು. ಕೊನೆಗೆ ಡಾಕ್ಟರು ಒಪ್ಪಿದರು. ಆ ದಿನ ಒಂದೇ ಒಂದು ಕಡ್ಡಿ ಕಣ್ಣಿಂದ ಇಳಿಯಲಿಲ್ಲ. ಆಸ್ಪತ್ರೆಯ ವೈದ್ಯರಿಂದ ಮತ್ತೊಮ್ಮೆ ಛೀಮಾರಿ ಹಾಕಿಸಿಕೊಂಡು, ಮನೆಗೆ ಮರಳಿದೆವು. ಮರುದಿನ ಬೆಳಿಗ್ಗೆ ಏಳುವಾಗ ಗುಲಾಬಿಗೆ ಎರಡೂ ಕಣ್ಣುಗಳೂ ಕಾಣಿಸುತ್ತಿರಲಿಲ್ಲ. ಪೂರ್ತಿ ಕುರುಡಿಯಾದ ಆಕೆಯನ್ನು ಅಳುತ್ತಲೇ ನಾನು ಎರಡು ದಿನ ಸಂಭಾಳಿಸಿದೆ.ಅವಳೂ ಅಳುತ್ತಿದ್ದಳು. ಪರರ ಮನೆಯ ಹುಡುಗಿಯನ್ನು ತಂದು, ಅವರಿಗೆ ಹೇಗೆ ಮುಖತೋರಿಸಲಿ? ಎಂಬ ಭಯ, ಚಿಂತೆಯಿಂದ ಬೆಂದು ಹೋದೆವು ನಾವು. ಡಾಕ್ಟರರಿಗೆ ಪುನಃ ತೋರಿಸಿದೆವು. ಏನಿಲ್ಲ ಕಣ್ಣುಸರಿಯಾಗಿದೆ. ದೃಷ್ಟಿಯೂ ಚೆನ್ನಾಗಿದೆ ಎಂದರವರು. ಅವರು ತೋರಿಸಿದ ಅಕ್ಷರಗಳನ್ನು ಅವಳು ಓದಲಾಗಲಿಲ್ಲ. ಈ ಬಗ್ಗೆ ವಿಚಾರಿಸಿದಾಗ ಡಾಕ್ಟರರು ಹೀಗೇ ಕೆಲವು ಮಂದಿ ನಾಟಕವಾಡುತ್ತಾರೆ. ಇದೊಂದು ರೀತಿಯ ಮಾನಸಿಕ ಕಾಯಿಲೆ ಎನ್ನಬೇಕೆ? ಗುಲಾಬಿ ಎಂತಹ ಹುಡುಗಿ ಎಂಬುದು ನಮಗೆ ಗೊತ್ತು. ಈ 15 ದಿನಗಳಲ್ಲಿ ಅವಳು ಅನುಭವಿಸಿದ ಯಾತನೆಗಳನ್ನು ನೋಡಿದವರು ನಾವು. ಎರಡು ದಿನ ಮನೆಯಲ್ಲಿ ಎಡವುತ್ತಾ ಮಕ್ಕಳನ್ನು ಕೈಯಿಂದ ತಡವಿನೋಡುತ್ತಿದ್ದ, ಅಳುತ್ತಿದ್ದ, ಗುಲಾಬಿಯನ್ನು ನೋಡಲಾಗುತ್ತಿರಲಿಲ್ಲ. ಅದರಲ್ಲೂ ಯಾಕಾಗಿ ಅವಳು ಕುರುಡಿಯ ನಾಟಕವಾಡಬೇಕು? 14ರ ಹುಡುಗಿ ದೇಹ ಭಾದೆ ತೀರಿಸಲಿಕ್ಕೆ ಇನ್ನೊಬ್ಬರ ನೆರವನ್ನು ಬಯಸುವಷ್ಟು ನಾಟಕವಾಡುತ್ತಾಳೆಯೇ?

ಗುಲಾಬಿಯ ದಾರುಣ ಸ್ಥಿತಿಯನ್ನು ಯೋಚಿಸಿ, ಕಂಗಾಲಾದೆವು ನಾವು. ಕೊನೆಗೆ ಅವಳನ್ನು ಊರಿಗೆ ಅವಳ ತಾಯಿಯ ಬಳಿಗೆ ಕಳುಹಿಸುವುದೆಂದು ತೀರ್ಮಾನಿಸಿದೆವು. ಎಂದಾದರೊಂದು ದಿನ ಸತ್ಯ ಹೊರಬೀಳಲೇ ಬೇಕಲ್ಲ? ಸುದೈವಕ್ಕೆ ಅದೇ ವೇಳೆಗೆ ನಮ್ಮ ಊರಿನ ಡ್ರೈವರ್ ಒಬ್ಬರು ಮುಂಬಯಿಗೆ ಬಂದರು. ಅವರು ಹಿಂತಿರುಗುವಾಗ ಅವರ ಕಾರಿನಲ್ಲಿ, ಗುಲಾಬಿಯನ್ನು ಕಳುಹಿಸುವ ಸಿದ್ಧತೆ ಮಾಡಿದೆವು.ಗುಲಾಬಿ ಗೋಗರೆದಳು. "ಕುರುಡಿಯಾದರೂ ನನ್ನಿಂದ ಸಾಧ್ಯವಾದಷ್ಟು ಕೆಲಸ ಮಾಡುತ್ತೇನೆ. ದಯವಿಟ್ಟು ನನ್ನನ್ನು ಊರಿಗೆ ಕಳುಹಿಸಬೇಡಿ ಅಮ್ಮಾ" ಕಿತ್ತು ತಿನ್ನುವ ಬಡತನ ಅವಳಿಂದ ಆ ಮಾತಾಡಿಸಿತ್ತು. ಆದರೆ ನಾವು ನಿಸ್ಸಹಾಯಕರು, ಗುಲಾಬಿಯ ಮೇಲಿನ ಕರುಣೆ, ಅಪರಾಧೀಭಾವ,ಎಲ್ಲ ನಮ್ಮನ್ನು ಕಾಡುತ್ತಿತ್ತು. ಗುಲಾಬಿಗೆ ಬೇಕಾದ ಬಟ್ಟೆ ಬರೆ ತಿಂಡಿ ಸಾಕಷ್ಟು ಹಣ ಎಲ್ಲವನ್ನೂ ಕೊಟ್ಟು, ಅಳುತ್ತಲೇ ಕಾರು ಹತ್ತಿಸಿದೆವು. ಮುಂದೆ ಊರಿನಲ್ಲಿ ಅವಳ ತಾಯಿ ಮಾಡಬಹುದಾದ ಗಲಾಟೆ ಗದ್ದಲ ನೆನೆದರೇನೇ ನಮಗೆ ಭಯವಾಗುತ್ತಿತ್ತು.

ಕಾರು ಹೊರಟು ಸುಮಾರು ಒಂದೂವರೆ ತಾಸಿನ ಬಳಿಕ ನಮ್ಮ ಡ್ರೈವರ್ ಥಾಣಾದಿಂದ ಫೋನು ಮಾಡಿದ "ಹುಡುಗಿಯ ಕಣ್ಣಿನ ದೃಷ್ಟಿ ಸರಿಯಾಗಿದೆ. ಏನೂ ತೊಂದರೆಯಿಲ್ಲ. ಕಾರಿನಿಂದಿಳಿದು ದೂರದ ಪೊದೆಯ ಬಳಿಗೆ ಹೋಗಿ ಮೂತ್ರ ವಿಸರ್ಜನೆ ಮಾಡಿಬಂದಳು. ಕಣ್ಣು ಕಾಣಿಸಿದ ಕೂಡಲೇ ಜೋರಾಗಿ ಕಿರುಚಿ, ಕೇಕೆ ಹಾಕಿದಳು. ಥಾಣಾ ಜಿಲ್ಲೆಯ ಗಡಿದಾಟಿದ ಕೂಡಲೇ ಆಕೆಯ ದೃಷ್ಟಿ ಮರಳಿ ಬಂದಿತು. ನೀವಿನ್ನು ನಿಶ್ಚಿಂತೆಯಿಂದಿರಿ'

ಇದೇನು ಪವಾಡವೋ ನನಗೆ ಅರ್ಥವಾಗಲಿಲ್ಲ. ಗುಲಾಬಿಯ ಕಣ್ಣಿನಿಂದ ಬಂದ ಕಡ್ಡಿಗಳು, ಕೆಲವು ವರ್ಷ ನನ್ನ ಕಪಾಟಿನಲ್ಲಿತ್ತು. ಎಷ್ಟೋ ಜನರಿಗೆ ಅದನ್ನು ತೋರಿಸಿದೆ. ಆದರೆ ಯಾರೂ ನಂಬಲೇ ಇಲ್ಲ. ಆ ವಿಲಕ್ಷಣ ವಿದ್ಯಮಾನವನ್ನು ಕಣ್ಣಾರೆ ಕಂಡ ನಾನು, ನನ್ನಂತೆಯೇ ಇತರ ಕೆಲವು ಹೆಂಗಸರು ಈಗಲೂ ಅದನ್ನು ನೆನಪಿಸಿಕೊಂಡು ಸ್ತಬ್ಧರಾಗುತ್ತೇವೆ. ಗುಲಾಬಿ ಇಂದು ನಾಲ್ಕು ಮಕ್ಕಳ ತಾಯಾಗಿದ್ದಾಳೆ. ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದಾಳೆ.

# ೨೦ನೇ ಶತಮಾನದ ಮಹಾ ಸಮರಗಳು

ಸೆವಾಸ್ಟಪೊಲ್ ಕದನದಲ್ಲಿ ಜರ್ಮನ್ ಸೇನೆಯು ಕೆಂಪುಸೇನೆಯ (Red Army) ಯ ಕೈಯಲ್ಲಿ ಜರ್ಝರಿತಗೊಳ್ಳುವ ಸೋಲು ಅನುಭವಿಸಿದ ತರುವಾಯ 1942 ಜೂನ್ 28 ರಂದು ಹಿಟ್ಲರನ ನಾಝೀ ಸೇನೆ ಮತ್ತೊಮ್ಮೆ ಸೋವಿಯತ್ ಒಕ್ಕೂಟದ ನೆಲದ ಮೇಲೆ ಆಕ್ರಮಣ ಕಾರ್ಯಾಚರಣೆ ಆರಂಭಿಸಿತು.

ಜನರಲ್ ಹರ್ಮನ್ ಹೋತ್‌ನ ನೇತೃತ್ವದಲ್ಲಿ ನಾಲ್ಕನೇ ಪಂಝೀರ್ ಸೇನೆ ಕುರ್ಸ್ಕ್ ನಗರದತ್ತ ಮುನ್ನಡೆಯಿತು. ಅದೇ ಸಂದರ್ಭದಲ್ಲಿ ಫ್ರೆಡರಿಕ್ ಪೌಲೋಸ್‌ನ ನೇತೃತ್ವದಲ್ಲಿ ನಾಝೀ ಸೇನಾ ಬಲದ ಆರನೇತುಕಡಿ ನಗರದ ದಕ್ಷಿಣ ಭಾಗದತ್ತ ಮುನ್ನಡೆಯಿತು. ವೋಲ್ಗಾ ನದಿಯ ಕೆಳಪ್ರದೇಶದಲ್ಲಿರುವ ತೈಲೋದ್ಯಮ ಹಾಗೂ ಇತರ ಔದ್ಯಮಿಕ ಕೇಂದ್ರಗಳನ್ನು ವಶಪಡಿಸಿಕೊಳ್ಳುವುದು ಜರ್ಮನ್ ಸೇನೆಯ ಉದ್ದೇಶವಾಗಿತ್ತು.

## ವೋಲ್ಗಾ ನದಿ ತೀರದ ಕದನ

ಎರಡು ದಿನಗಳ ತನಕ ನಾಝೀ ಸೇನೆಗೂ ಕೆಂಪು ಸೇನೆಗೂ ಉಗ್ರ ಹೋರಾಟ ನಡೆಯಿತು. ಜನರಲ್ ಫೀಲ್ಡ್ ಮಾರ್ಷಲ್ ಸಿಗ್ಮಂಡ್ ಲಿಸ್ಟ್ ಕೆಂಪುಸೇನೆಯನ್ನು ದೊನೆತ್ಸ್ಕ್ ಹಾಗೂ ಪ್ರೊಲೆಟೆರ್‌ಸ್ಕಾಯಾ ಮತ್ತು ಕಾಕಸಸ್‌ನತ್ತ ಹೊಡೆದಟ್ಟಿದ.

ಸೋವಿಯತ್ ಸೇನೆಯ ವಿರುದ್ಧ ಬಹಳ ಸುಲಭದಲ್ಲಿ ಜಯಗಳಿಸಬಹುದು ಎಂದು ಜರ್ಮನ್ ಸೈನ್ಯ ಭಾವಿಸಿತ್ತು. ಆರಂಭದ ಹಂತದಲ್ಲಿ ನಡೆದ ಹೋರಾಟಗಳಲ್ಲಿ ಅದು ಗಳಿಸಿದ ಗೆಲುವು ಈ ಭಾವನೆಗೆ ಒತ್ತಾಸೆ ನೀಡಿತು. ಕಂಡಕಂಡಲ್ಲಿ ನಾಝಿ ಸೇನೆ ಸೋವಿಯತ್ ಸೈನ್ಯವನ್ನು ಸದೆ ಬಡಿಯಿತು. ಹೋತ್ ಮತ್ತು ಪೌಲೋಸ್‌ನ ಸೈನ್ಯ ಗಮನಾರ್ಹ ಯಶಸ್ಸು ಗಳಿಸಿತು.

1942 ಜುಲೈ 5 ರಂದು ಹೋತ್‌ನ ನೇತೃತ್ವದ 4ನೇ ಪಂಝೀರ್ ಸೇನೆ ವೊರೊನೆಝ್‌ಗೆ ತಲುಪಿತು. ಸ್ಥಳೀಯ ಕೆಂಪುಸೇನೆ ಮತ್ತು ಸೋವಿಯನ್ ಒಕ್ಕೂಟದ ಇನ್ನೊಂದು ಬಲಿಷ್ಠ ತುಕಡಿ ಸ್ಟಾವಕ (Stavka) ದಲ್ಲಿ ಭಾರೀ ಅರಾಜಕತೆ ವ್ಯಾಪಿಸಿತು. ಸೋವಿಯತ್ ದಂಡನಾಯಕ ನಿಕೋಲಾಯಿ ವಾಟುತಿನ್ ಅವರು ಪರಿಸ್ಥಿತಿಯ ಗಂಭೀರತೆಯನ್ನು ಅರ್ಥ ಮಾಡಿಕೊಂಡರು. ಜರ್ಮನ್ ಪಂಝೀರ್ ಸೇನೆಯ ಕೈಯಲ್ಲಿ ಏಟು ತಿಂದು ಛಿದ್ರ ಛಿದ್ರವಾದ ಕೆಂಪುಸೇನೆಯ ತುಕಡಿಗಳಲ್ಲಿ ಅವರು ಆತ್ಮಸ್ಥೈರ್ಯ ತುಂಬಿದರು. ಜರ್ಮನ್ ಸೇನೆಯ ಹೈಕಮಾಂಡ್ ಜಾಗೃತವಾಯಿತು. ಸ್ಟಾಲಿನ್‌ಗ್ರಾಡ್ ನಗರವನ್ನ ಸ್ವಾಧೀನಪಡಿಸಿಕೊಳ್ಳುವ ಜವಾಬ್ದಾರಿಯನ್ನು ಜನರಲ್ ಪೌಲೋಸ್ ಅವರಿಗೆ ವಹಿಸಲಾಯಿತು. ಸ್ಟಾಲಿನ್‌ಗ್ರಾಡ್ ನಗರವನ್ನು ವಶಪಡಿಸಿ ಕೊಳ್ಳುವುದಕ್ಕಿಂತಲೂ ಮಿಗಿಲಾಗಿ ಸೋವಿಯತ್ ಒಕ್ಕೂಟದ ತೈಲ ಸಮೃದ್ಧ ವಲಯಗಳನ್ನು ಸ್ವಾಧೀನ ಪಡಿಸಿಕೊಳ್ಳುವುದು ಹಿಟ್ಲರನಉದ್ದೇಶವಾಗಿತ್ತು. 'ರಶಿಯನರ ಕತೆ ಮುಗಿಯಿತು' ಎಂದು ಆತ ಹೆಮ್ಮೆಯಿಂದ ಉದ್ಗರಿಸಿದ.

ಜುಲೈ 29 ರಂದು ಇವಾಲ್ಡ್ ವೊನ್ ಕ್ಲೈಸ್ಟ್ ಹಾಗೂ ಹರ್ಮನ್ ಹೋತ್‌ನ ಪಂಝೀರ್ ಸೇನಾ ಘಟಕಗಳು ಸೋವಿಯತ್ ಒಕ್ಕೂಟದ

ಪ್ರೊಲೆಟರ್‌ಸ್ಕಾಯಾ ನಗರವನ್ನು ವಶಪಡಿಸಿಕೊಂಡರು. ಅಗಸ್ಟ್ 9 ರಂದು ಮೈಕೊಪ್ ಮತ್ತು ಸ್ತಾವ್ರೊಪೊಲ್ ನಾಝೀ ಸೇನೆಯ ವಶವಾಯಿತು. ಗ್ರೋಜ್ನಿ, ಬಾತುಮಿ ಹಾಗೂ ಬಕು ನಗರಗಳೂ ತಮ್ಮ ಕೈ ವಶವಾದುವೆಂದೇ ಜರ್ಮನರು ಹಿಗ್ಗಿದರು. ಆದರೆ ಡಾನ್ ನದಿಯ ದಕ್ಷಿಣದತ್ತ ಚಲಿಸಿದ ಪೌಲೋಸ್‌ನ ನೇತೃತ್ವದ ಜರ್ಮನ್ ಸೈನ್ಯ ಗಮನಾರ್ಹ ಮುನ್ನಡೆ ಸಾಧಿಸಲಿಲ್ಲ. ಹರ್ಮನ್ ಹೋತ್‌ನ ನೇತೃತ್ವದ ಸೇನೆಯ ಸಹಾಯ ದೊರೆತರೆ ಆದೀತೆಂದು ಆತ ಯೋಚಿಸತೊಡಗಿದ.

1942 ಅಗಸ್ಟ್ 23-24 ರಂದು ಸ್ಟಾಲಿನ್‌ಗ್ರಾಡ್ ನಗರದ ಮೇಲೆ ಜರ್ಮನ್ ವಾಯುಪಡೆಯ ಬಾಂಬ್ ಧಾಳಿ ಆರಂಭವಾಯಿತು. ಜನವಸತಿ ಪ್ರದೇಶಗಳು, ಕಾರ್ಖಾನೆಗಳು, ವ್ಯಾಪಾರ ಕೇಂದ್ರಗಳು ಬಾಂಬ್ ಧಾಳಿಗೆ ಗುರಿಯಾಗಿ ಭಾರೀ ವಿನಾಶ ಅನುಭವಿಸಿದುವು ಕೆಂಪುಸೇನೆ ತನ್ನೆಲ್ಲ ಶಕ್ತಿಯನ್ನು ಒಗ್ಗೂಡಿಸಿ ಜರ್ಮನ್ ಸೇನೆಯನ್ನು ಎದುರಿಸಲು ಸಿದ್ಧವಾಯಿತು. ವೊಲ್ಗಾ ನದಿಯತ್ತ ಜರ್ಮನ್ ಸೇನೆಯ ಮುನ್ನಡೆಯನ್ನು ಹತ್ತಿಕ್ಕಲು ಶತಪ್ರಯತ್ನ ನಡೆಸಿತು. ವೊಲ್ಗಾ ತೀರದ ನಗರಗಳ ಮೇಲೆ ಜರ್ಮನ್ ಸೇನೆಯ ಆಕ್ರಮಣಸೋವಿಯತ್ ಒಕ್ಕೂಟದ ದೇಶಾಭಿಮಾನಿ ಜನತೆಯನ್ನು ಒಗ್ಗೂಡಿಸಿತು. ಹಿಟ್ಲರ್‌ನ ನಾಝಿ ಪಡೆಗಳ ವಿರುದ್ಧ ಮರಣ ಪರ್ಯಂತ ಹೋರಾಟನಡೆಸಲು ಅವರು ನಿರ್ಧರಿಸಿದರು.

• ಸುಶೀಲಾನಂದನ

ಫ್ರಾನ್ಸ್‌ನ ಚಕ್ರವರ್ತಿಯಾಗಿದ್ದ 14 ನೇ ಲೂಯಿ ಎರಡು ದಿನಗಳಿಗೊಮ್ಮೆ ವೈನ್ ಮತ್ತು ಕ್ರೀಮ್‌ನ ಮಿಶ್ರಣ ಸಿದ್ಧಪಡಿಸಿ, ದೊಡ್ಡ ಬಾತ್‌ಟಬ್‌ನಲ್ಲಿ ಅದನ್ನು ತುಂಬಿ ಅದರಲ್ಲಿ ಸ್ನಾನ ಮಾಡುತ್ತಿದ್ದನಂತೆ.

.......

ಹದಿನೆಂಟನೇ ಶತಮಾನದಲ್ಲಿ ರೆವರೆಂಡ್ ವಿಲಿಯಂ ಡೋಡ್ ಎಂಬ ಪಾದ್ರಿಯನ್ನು ಫೋರ್ಜರಿ ಆರೋಪದ ಮೇರೆಗೆ ಬಂಧಿಸಿ ವಿಚಾರಣೆಗೆ ಗುರಿಪಡಿಸಲಾಯಿತು. "ರೆವರೆಂಡ್ ವಿಲಿಯಂ ಡೋಡ್ ಎಷ್ಟು ಕೀಳುಮಟ್ಟಕ್ಕೆ ಇಳಿದಿದ್ದಾನೆಂದರೆ ಆತ ಒಂದು ಪತ್ರಿಕೆಯ ಸಂಪಾದಕನಾಗುವ ಹಂತಕ್ಕೂ ತಲುಪಿದ" ಎಂದು ನ್ಯಾಯಾಲಯದಲ್ಲಿ ಅವನ ವಿರುದ್ಧ ವಾದಿಸಿದ ವಕೀಲರು ಹೇಳಿದರಂತೆ!

..........

1926 ರಲ್ಲಿ ಬಿಡುಗಡೆಯಾದ 'ಡಾನ್‌ಜುವಾನ್' ಆಂಗ್ಲ ಚಿತ್ರದಲ್ಲಿ ನಟ ಜಾನ್ ಬ್ಯಾರಿಮೂರ್ ಚಿತ್ರದಲ್ಲಿ ತನ್ನ ಪ್ರಿಯತಮೆಯನ್ನು 191 ಬಾರಿ ಚುಂಬಿಸಿ ದಾಖಲೆ ಸ್ಥಾಪಿಸಿದ್ದಾನೆಂದು ಹೇಳಲಾಗುತ್ತಿದೆ.

........

ಬ್ರಿಟಿಷ್ ಕೊಲಂಬಿಯಾದ ಕ್ವಾಕಿಯುಟಲ್ ಇಂಡಿಯನ್ ಜನಾಂಗದವರು ಹಣದ ತುರ್ತು ಅಗತ್ಯವಿದ್ದಾಗ ಶ್ರೀಮಂತರ ಬಳಿ ತಮ್ಮ ಹೆಸರು ಗಿರವಿ ಇರಿಸಿ ಸಾಲ ಪಡೆಯುತ್ತಿದ್ದರು. ಸಾಲ ತೀರುವ ತನಕವೂ ಅವರಿಗೆ ಹೆಸರಿರುತ್ತಿರಲಿಲ್ಲ.

# ಸಂಚಿಕೆಯಿಂದ ಸಂಚಿಕೆಗೆ / [title in decorative lettering]

## ಇಬ್ಬರು ಅವಧೂತರು

ಧರ್ಮಪ್ರಕಾಶ ಸಜ್ಜನರಾಯರ 'ಲಕ್ಷ್ಮೀನಿವಾಸ' ಮನೆ ಬೆಂಗಳೂರು ಕೋಟೆಯಲ್ಲಿ ಶ್ರೀ ವೆಂಕಟರಮಣಸ್ವಾಮಿಯ ದೇವಾಲಯದ ಈಶಾನ್ಯ ಮೂಲೆಗೆ ಎದುರಾಗಿದೆಯಷ್ಟೆ. ಆ ಮನೆಯ ಮೊಗಸಾಲೆಯಲ್ಲಿ ಕೆಲಮಂದಿ ಸಾಧು ಸಂತರ ಛಾಯಾಚಿತ್ರ (ಫೋಟೋ)ಗಳಿದ್ದವು. ಛಾಯಾಚಿತ್ರಗಳ ಪೈಕಿ ಒಂದು ಮಹಾದೇವಶಾಸ್ತ್ರಿಗಳೆಂಬ ಅವಧೂತರದು.

ಮಹಾದೇವಶಾಸ್ತ್ರಿಗಳವರನ್ನು ನಾನು ಕಂಡಿದ್ದೇನೆ. ಆದರೆ ಅವರ ಜೀವಿತ ವೃತ್ತಾಂತ ನನಗೆ ಹೆಚ್ಚಾಗಿ ತಿಳಿಯದು. ತಿಳಿದುಕೊಳ್ಳಬೇಕೆಂದು ಬಹು ಕಡೆ ವಿಚಾರಿಸಿದ್ದೇನೆ. ಹೇಳುವವರು ಯಾರೂ ನನಗೆ ದೊರೆಯಲಿಲ್ಲ. ಅವರು ತಮ್ಮ ವ್ಯಕ್ತಿಜೀವನದ ಸಂಗತಿಗಳನ್ನು ತಮ್ಮ ಸ್ವಂತಕ್ಕೇ ಇರಿಸಿಕೊಂಡಿದ್ದಂತೆ ಕಾಣುತ್ತದೆ.

**'ಪೆರಿಯವರ್'**

1908-9ರ ಸುಮಾರಿನಲ್ಲಿ ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆಯ ಪೂರ್ವದ ದೊಡ್ಡಗೇಟಿನ ಮುಂದುಗಡೆ ಇಬ್ಬರು ಮೂವರು ಕೊಳಕರು ಬೆಳಗಿನಿಂದ ಸಂಜೆಯ ವರೆಗೂ ನಿಂತಿರುತ್ತಿದ್ದರು. ಆ ಕೊಳಕರಲ್ಲಿ ಮಹಾದೇವಶಾಸ್ತ್ರಿಗಳೂ ಒಬ್ಬರು. ಕೆದರಿದ ತಲೆ, ಬೆಳೆದ ಗಡ್ಡ, ನೀರನ್ನೇ ಕಾಣದ ಬೊಂತೆ. ಇದು ಅವರ ಲಕ್ಷಣ. ಮಾತಿಲ್ಲ ಕಥೆಯಿಲ್ಲ. ಅವರನ್ನು ಯಾರೂ ಮಾತನಾಡಿಸುತ್ತಿರಲಿಲ್ಲ. ಅವರು ಯಾರ ಕಡೆಯೂ ದಿಟ್ಟಿಸಿ ನೋಡುತ್ತಿರಲಿಲ್ಲ. ಇವರನ್ನು ನಾನು ಮೊದಲು ನೋಡಿದಾಗ ಯಾರೋ ತಿರುಪೆಗಾರ ಎಂದುಕೊಂಡೆ. ವಿಕ್ಟೋರಿಯ ಆಸ್ಪತ್ರೆಯ ಕಾವಲುಗಾರನು ಗೇಟಿನ ಬಳಿಯ ಷೆಡ್ಡಿನಲ್ಲಿ ಯಾವಾಗಲೂ ಇರುತ್ತಿದ್ದ. ಅವನೂ ಇವರೊಡನೆ ಮಾತನಾಡಿದ್ದಿಲ್ಲ. ಆತನನ್ನು ಯಾರಾದರೂ "ಇವರು ಯಾರು ?" ಎಂದು ಕೇಳಿದರೆ, "ಹೋಗಿ, ಹೋಗಿ" ಎನ್ನುತ್ತಿದ್ದ. ತುಂಬ ಒತ್ತಾಯ ಮಾಡಿ ಕೇಳಿದರೆ "ಪೆರಿಯವರ್" (ಅವರು ದೊಡ್ಡವರು, ಸಾಧುಗಳು) "ಅವರ ತಂಟೆಗೆ ನೀವು ಹೋಗಬೇಡಿ. ನಿಮ್ಮಷ್ಟಕ್ಕೆ ನೀವು ಹೋಗಿ" ಎಂದು ಗದ್ದರಿಸುವನು. ಹೀಗಾಗಿ ನನಗೆ ಆಗ ಅವರ ವಿಷಯವನ್ನು ಹೆಚ್ಚಾಗಿ ಕಂಡುಕೊಳ್ಳಲು ಆಗದೆಹೋಯಿತು.

ಇನ್ನೊಂದು ಸಂಗತಿ. ಶಾಸ್ತ್ರಿಗಳು ನಿಂತಿರುತ್ತಿದ್ದ ಜಾಗದಿಂದ ಮೂರು ನಾಲ್ಕು ಗಜದಷ್ಟು ಸಮೀಪದಲ್ಲಿ ಮ್ಯುನಿಸಿಪಾಲಿಟಿಯ ಕಸದ

> **ಕೃತಿ: ಜ್ಞಾಪಕ ಚಿತ್ರಶಾಲೆ, (ಭಾಗ-7) ಹೃದಯಸಂಪನ್ನರು, ಲೇಖಕ: ಡಿ.ವಿ.ಜಿ. ಪ್ರಕಾಶಕರು: ಕಾವ್ಯಾಲಯ ಪ್ರಕಾಶಕರು, ಜಯನಗರ- ಮೈಸೂರು-4**

ತೊಟ್ಟಿ ಇರುತ್ತಿತ್ತು. ಆ ತೊಟ್ಟಿಯ ತುಂಬ ಕಸ ತುಂಬಿ ಎಂಜಲೆಲೆಯೂ ಕೊಳೆತ ಸಾಮಾನೂ ಒಂದೆರಡಡಿಯಷ್ಟು ಮೇಲಕ್ಕೆ ಕಾಣಿಸುತ್ತ ಚೆಲ್ಲಿರುತ್ತಿತ್ತು. ಈ ಕಶ್ಮಲದ ನಡುವೆ ಆ ನಾತದಲ್ಲಿ ಶಾಸ್ತ್ರಿಗಳು ಘಂಟೆಗಳ ಕಾಲ ನಿಂತಿರುತ್ತಾರಲ್ಲ ಎಂದು ನನಗೆ ಆಶ್ಚರ್ಯವಾಯಿತು.

## ಮುಕುಂದದಾಸರು

ಮತ್ತೊಂದು ಸ್ವಾರಸ್ಯ. ಆ ಕಾಲದ ಸುಮಾರಿನಲ್ಲಿ ಈಗ ಪುಟ್ಟಣ್ಣಶೆಟ್ಟಿ ಔಟ್‌ಪೇಷೆಂಟ್ಸ್ ವಾರ್ಡ್ ಇರುವ ಜಾಗದಲ್ಲಿ ಮುಕುಂದದಾಸರೆಂಬುವರು ಹರಿಕಥೆ ಮಾಡುತ್ತಿದ್ದುದನ್ನು ನಾನು ನೋಡಿದ್ದೇನೆ. ದಾಸರು ಆಕಾರದಲ್ಲಿ ಗಿಡ್ಡು. ಹಸಿರು ಶಾಲು ಹೊದ್ದಿರುತ್ತಿದ್ದರು. ಕೊರಳಿನಲ್ಲಿ ಒಂದು ಹೂವಿನ ಹಾರ ಹಾಕಿರುತ್ತಿದ್ದರು. ಅವರ ಸ್ವರೂಪವ್ಯಕ್ತಿತ್ವ ಪ್ರಭಾವಶಾಲಿಯಾದದ್ದೆಂದು ನಾನು ಹೇಳಲಾರೆ. ಅವರು ಹರಿಕಥೆ ಮಾಡುತ್ತಿದ್ದ ಭಾಷೆ ತೆಲುಗು. ಜನರ ಗುಂಪು ತಕ್ಕಮಟ್ಟಿಗೆ ಇರುತ್ತಿತ್ತು. ಸಂಜೆ ಸಂಜೆಯೂ ಅವರು ಗೊತ್ತು ಮಾಡಿಕೊಂಡಿದ್ದ ಕಾಲಕ್ಕೆ ಅಲ್ಲಿಗೆ ಬಂದು ನಿಂತು ಹರಿಕಥೆ ಮಾಡುವರು. ಜನ ಅದನ್ನು ಕೇಳಿ ಸಂತೋಷಿಸಿ ಪುನಃ ಪುನಃ ಬರುವರು. ತಮ್ಮ ಕಾಣಿಕೆ ಸಲ್ಲಿಸುವರು.

ಈಗ ಮಹಾದೇವಶಾಸ್ತ್ರಿಗಳ ಮಾತು, ಇವರ ಕುಮಾರರೊಬ್ಬರು ನಾರಾಯಣಶಾಸ್ತ್ರಿಗಳೆಂಬವರು ವಿದ್ವಾಂಸರಾಗಿದ್ದರೆಂದೂ ಅವರು ಕೆಲವು ಕಾಲ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಸಂಸ್ಕೃತ ಪಂಡಿತರಾಗಿದ್ದರೆಂದೂ ಕೇಳಿದ್ದೇನೆ.

ನಾನು ಈಗ ಹೇಳಲಿರುವ ಕಾಲದ ವೇಳೆಗೆ ಮಹಾದೇವಶಾಸ್ತ್ರಿಗಳು ವಿರಕ್ತರಾಗಿದ್ದರು. ಸಂನ್ಯಾಸಿಗಳಾಗಿರಲಿಲ್ಲ. ಸಂನ್ಯಾಸಿಯಂತೆ ಇದ್ದರು- ಮಗನ ಮನೆಯಲ್ಲಿದ್ದರು.

ಆ ಮನೆ ಅರಳೆಪೇಟೆಯ ಪಶ್ಚಿಮ ಕಡೆಯ ಬೀದಿಯಲ್ಲಿತ್ತಂತೆ- ಗುಡ್ಸ್‌ಷೆಡ್ ರೋಡಿನ ಹತ್ತಿರ ಹತ್ತಿರ, ಅದನ್ನು ನಾನು ಕಂಡವನಲ್ಲ. ನಾನು ಕಂಡಿರುವುದನ್ನು ಈಗ ಹೇಳುತ್ತೇನೆ.

ಪ್ರತಿ ದಿವಸವೂ ಬೆಳಿಗ್ಗೆ ಸುಮಾರು ಆರುಗಂಟೆಯ ವೇಳೆಗೆ ಶಾಸ್ತ್ರಿಗಳು ಅರಳೆಪೇಟೆ ಚಿಕ್ಕಪೇಟೆ ಸೇರುವ ಚೌಕದಲ್ಲಿ ಕಾಣಿಸುತ್ತಿದ್ದರು. ಮೇಲೆ ನಾನು ಹೇಳಿದಂತೆ, ಅವರ ಮೈಮೇಲೆ ಬೊಂತೆ; ಮೊಣಕಾಲಿಂದ ಮೇಲಕ್ಕೆ ಪಂಚೆ, ಅದೇ ಜಡೆಗಟ್ಟಿದ ತಲೆ. ಆದರೆ ಆಗಾಗ ಕೊಂಚ ನಗುಮುಖ. ಆಗಾಗ ಕೊಂಚ ಮುನಿಸಿನ ಮುಖ. ಯಾವಾಗಲೂ ಅವರ ಸುತ್ತಮುತ್ತ ಬೀದಿ ಹುಡುಗರ ಗುಂಪು. ಅದರಲ್ಲಿ ಹಿಂದುಗಳು, ಮುಸಲ್ಮಾನರು ಎಲ್ಲರೂ ಇರುತ್ತಿದ್ದರು. ಈ ಪೋರ ಪರಿವಾರ ಅವರನ್ನು ಬಿಟ್ಟಿದ್ದದ್ದೇ ಇಲ್ಲ.

ಶಾಸ್ತ್ರಿಗಳನ್ನು ಪೇಟೆಯ ಜನ "ಸ್ವಾಮಿಗಳು" "ಸಾಧುಗಳು" ಎಂದು ಕರೆಯುತ್ತಿದ್ದರು. ಇನ್ನು ಮುಂದೆ ನಾನೂ ಅವರನ್ನು ಸ್ವಾಮಿಗಳು ಎಂದೇ ಕರೆಯುತ್ತೇನೆ.

ಸ್ವಾಮಿಗಳವರು ಚಿಕ್ಕಪೇಟೆಯಲ್ಲಿ ಬರುತ್ತಿದ್ದಾಗ ಅಲ್ಲಲ್ಲಿ ಈ ಪಕ್ಕದಿಂದಲೂ ಆ ಪಕ್ಕದಿಂದಲೂ ಯಾವ ಯಾವ ಜನವೋ ಬಂದು ಅವರ ಕೈಗೆ ಅನಂತನ ದಾರವನ್ನೋ ಕಾಶಿಯ ದಾರವನ್ನೋ ಇನ್ನೂ ಯಾವುದೋ ವ್ರತದ ದಾರವನ್ನೋ ಸುತ್ತುತ್ತಿದ್ದರು. ಅವರು ಮುಂಗೈಯಿಂದ ಮೊಳಕೈವರೆಗೂ ಈ ಕೆಂಪು ಬಿಳಿ ಕರಿಯ ದಾರಗಳನ್ನು ಯಾವಾಗಲೂ ಹೊತ್ತಿರುತ್ತಿದ್ದರು. ಬಹುಶಃ ಅವರು ಆ ದಾರಗಳನ್ನು ಕಿತ್ತುಹಾಕುತ್ತಿರಲಿಲ್ಲ. ಅದು ತಾನಾಗಿಯೇ ಕಳಚಿ ಹೋಗುವುದು. ಅದಕ್ಕೆ ಬದಲಾಗಿ ದಿನದಿನವೂ ಹೊಸ ಹೊಸದಾಗಿ

ಬರುವುದು. ಯಾರಾದರೂ ಹೀಗೆ ದಾರ ಕಟ್ಟಲು ಬಂದಾಗ ಸ್ವಾಮಿಗಳು ಕೊಂಚ ನಕ್ಕಂತೆ ತೋರುವುದು.

ಸ್ವಾಮಿಗಳು ಅರಳೆಪೇಟೆಯ ಚೌಕದಲ್ಲಿ ಅಥವಾ ಅಲ್ಲಿಂದ ಮುಂದಕ್ಕೆ ಬಂದು ಮಸ್ತಾನ್ ಸಾಬಿಯ ಗುಡಿಯ ಬಳಿ ಬರುವಾಗ್ಗೆ ಚಿಕ್ಕಪೇಟೆಯಲ್ಲಿ ಅಂಗಡಿ ಮುಂಗಟ್ಟುಗಳನ್ನಿರಿಸಿಕೊಂಡಿದ್ದ ವರ್ತಕರು ತಮ್ಮ ಅಂಗಡಿಯ ಬೀಗಗಳನ್ನು ತೆಗೆದು, ಕದಗಳನ್ನು ತೆರೆಯದೆ, ಸ್ವಾಮಿಗಳ ದಾರಿಯನ್ನು ಎದುರು ನೋಡುತ್ತಿರುತ್ತಿದ್ದರು. ಸ್ವಾಮಿಗಳ ಸವಾರಿ ಕಾಲುನಡಿಗೆಯಲ್ಲೆಂದು ಹೇಳಬೇಕಾಗಿಲ್ಲ. ಸ್ವಾಮಿಗಳೂ ಪರಿವಾರವೂ ಅಂಗಡಿ ಅಂಗಡಿಯ ಮುಂದೆಯೂ ಒಂದೊಂದು ಸಾರಿ ಮನೆ ಮನೆಯ ಮುಂದೆಯೂ ನಿಲ್ಲಬೇಕಾಗುತ್ತಿತ್ತು.

ಈ ಮೆರವಣಿಗೆ ತಮ್ಮ ತಮ್ಮ ಅಂಗಡಿಯ ಮುಂದೆ ಬಂದಾಗ ವರ್ತಕರು ಕದ ತೆಗೆದು ಗಲ್ಲಾಪೆಟ್ಟಿಗೆಯಿಂದ ಒಂದು ಕಾಣಿಕೆಯನ್ನು ತಂದು ಸ್ವಾಮಿಗಳ ಕೈಯಲ್ಲಿಟ್ಟು "ಕೃಷ್ಣಾರ್ಪಣ" "ಶಿವಾರ್ಪಣ" ಎನ್ನುವರು. ಹೀಗೆ ಮೆರವಣಿಗೆ ಸಾಗುವುದು ಬಹು ಸಾವಕಾಶವಾಗುತ್ತಿತ್ತು. ಕಾಣಿಕೆ ಕಾಲಾಣೆಯಿಂದ ಐದು ರೂಪಾಯಿ ಹತ್ತು ರೂಪಾಯಿ ನೋಟಿನವರೆಗೂ ಇರುತ್ತಿತ್ತು. ಅವರವರ ಶಕ್ತಿಗೆ ತಕ್ಕಂತೆ ವರ್ತಕರು ಕೊಡುವರು. ಸ್ವಾಮಿಗಳ ಕೈಯಲ್ಲಿ ತಮ್ಮ ಕಾಣಿಕೆ ಮೊದಲು ಸೇರಿದ್ದಾದರೆ ಅಂದಿನ ತಮ್ಮ ವ್ಯಾಪಾರ ಒಳ್ಳೆಯದಾಗುವುದೆಂದು ವರ್ತಕರ ನಂಬಿಕೆ. ಸ್ವಾಮಿಗಳಿಗೆ ಮೊದಲು ಸಲ್ಲಿಸಬೇಕು, ಅದು ಲಾಭಕರ.

ಸ್ವಾಮಿಗಳಾದರೋ ಕಾಣಿಕೆಯನ್ನು ತಮ್ಮ ಕೈ ಮುಟ್ಟಿದ್ದೇ ತಡ; ಆ ಕ್ಷಣವೇ ಆ ನಾಣ್ಯವನ್ನೋ ನೋಟನ್ನೋ ತಮ್ಮ ಪರಿವಾರದ ಪೋರನಾವನ ಕೈಯಲ್ಲೋ ಇಡುವರು. ಇಡುತ್ತಾ "ಪ್ರಾರಬ್ಧಂ" "ಪ್ರಾರಬ್ಧಂ" ಎನ್ನುವರು. ಎಷ್ಟು ಸುಲಭವಾಗಿ ಹೇಳುತ್ತಿದ್ದಾರೆ ಎಂದು ನನಗೆ ಆಗಲೂ ಅಚ್ಚರಿ, ಈ ಹೊತ್ತಿಗೂ ಅಚ್ಚರಿ. ನಮ್ಮ ಲಾಭ ನಷ್ಟಗಳೆಲ್ಲ ಪ್ರಾರಬ್ಧವಶದಿಂದಲೇ ಅಲ್ಲವೆ?

ಆ ಹಣವನ್ನು ಸ್ಥಾನಾಂತರ ಮಾಡಿದ ಕೈ ಸ್ವಾಮಿಗಳದು, ಆ ಹಣ ಪ್ರಾರಬ್ಧದಿಂದ ಬಂದದ್ದು.

ಸ್ವಾಮಿಗಳ ಈ ಮೆರವಣಿಗೆ ಚಿಕ್ಕಪೇಟೆಯುದ್ದಕ್ಕೂ ಸಾಗಿ ಧರ್ಮರಾಯನ ದೇವಸ್ಥಾನದಿಂದಾಚೆಗೆ ಹೋಗುವ ವೇಳೆಗೆ ಮಧ್ಯಾಹ್ನ ಹನ್ನೊಂದು ಹನ್ನೆರಡು ಘಂಟೆಯೇ ಆಗುತ್ತಿತ್ತು. ಕೊನೆಕೊನೆಗೆ ಹೋದಂತೆಲ್ಲ ಪರಿವಾರ ಕರಗುತ್ತಿತ್ತು. ಅಲ್ಲಿಂದ ಮುಂದಕ್ಕೆ ಅಂಗಡಿಗಳಿಲ್ಲವಲ್ಲ. ಸ್ವಾಮಿಗಳ ಕೈ ಬರಿಗೈ.

ಚೇತಲೊ ಬೆಲ್ಲಂ ಉಂಡೇವರಕೂ
ಕಾಕ ಬಳಗಮಂಟಾ
ಚೇತಲೊ ಬೆಲ್ಲಂ ತೀರಿನಪ್ಪುಡು
ಎವರು ರಾರು ವೆಂಟಾ!

ಸ್ವಾಮಿಗಳು ಅಲ್ಲಿಂದಾಚೆಗೆ ಆ ಪ್ರಾಂತದಲ್ಲಿ ದಕ್ಷಿಣ ಕಡೆ ಇದ್ದ ಒಂದಾನೊಂದು ಮನೆಗೆ ಹೋಗುತ್ತಿದ್ದುದ್ದು ವಾಡಿಕೆ. ಆ ಮನೆಯವರು ಗಾಣಿಗರಂತೆ. ಅವರು ಸ್ವಾಮಿಗಳವರು ಅಲ್ಲಿಗೆ ಬಂದ ಕೂಡಲೆ ಒಂದು ತಂಬಿಗೆ ಹಾಲನ್ನು ಅವರಿಗೆ ಕೊಡುತ್ತಿದ್ದರಂತೆ. ಇದು ದಿನಂಪ್ರತಿಯ ಪದ್ಧತಿ. ಸ್ವಾಮಿಗಳು ಆ ಹಾಲನ್ನು ಸೇವಿಸಿ ಹೊರಟು ಹೋಗುತ್ತಿದ್ದರು. ಎಲ್ಲಿಗೆ ಹೋಗುತ್ತಿದ್ದರೋ ಯಾರಿಗೂ ತಿಳಿಯದು. ಮಾರನೆಯ ದಿನ ಬೆಳಗ್ಗೆ ಯಥಾಪ್ರಕಾರದ ಚಿಕ್ಕಪೇಟೆಯ ಮೆರವಣಿಗೆಯವರೆಗೂ ಅವರು ಯಾರ ಕೈಗೂ ದೊರಕುತ್ತಿರಲಿಲ್ಲ.

ನಾನು ಒಂದು ಊಹೆ ಮಾಡಿದ್ದೇನೆ.

## ಗವಿಮಠ

ಬೆಂಗಳೂರು ರೈಲ್ವೆ ಸ್ಟೇಷನ್ನಿನ ವಾಯುವ್ಯ ದಿಕ್ಕಿನಲ್ಲಿ ಒಂದು ನೀರಿನ ಹಳ್ಳವೂ ಒಂದು ಬಸವಣ್ಣನ ಗುಡಿಯೂ ಹಿಂದೆ ಇದ್ದವು. ನಾನೂ ಮೋಕ್ಷಗುಂಡಂ ಕೃಷ್ಣಮೂರ್ತಿಯೂ ಎಷ್ಟೋ ಸಾರಿ ಆ ಪ್ರಾಂತದಲ್ಲೆಲ್ಲ ಸುತ್ತಾಡಿದ್ದೇವೆ. ಆಗ್ಗೆ ಆ ಪ್ರಾಂತ ಬಯಲಾಗಿತ್ತು. ಮನೆಗಳಾಗಿರಲಿಲ್ಲ. ಅಲ್ಲೆಲ್ಲೋ ಒಂದು ಕಡೆ ಒಂದು ನೆಲಮಾಳಿಗೆ ಇತ್ತು. ಅದು ನೆಲಮಾಳಿಗೆಯೋ ಗವಿಯೋ ಈಗ ನನ್ನ ಜ್ಞಾಪಕ ಮಾಸಿಹೋಗಿದೆ. ಆ ಗವಿಯಲ್ಲಿ ಒಬ್ಬ ಶಿವಶರಣರು ಇದ್ದದ್ದನ್ನು ಕಂಡಿದ್ದೇನೆ. ಅವರ ಹೆಸರು ಬಹುಶಃ ಚಂದ್ರಶೇಖರ ಎಂದು. ಅವರೊಡನೆ ಮೋಕ್ಷಗುಂಡಂ ಕೃಷ್ಣಮೂರ್ತಿಯೂ ನಾನೂ ಮಾತನಾಡಿದ್ದು ನನಗೆ ಜ್ಞಾಪಕದಲ್ಲಿದೆ. ಯಾವುದೋ ಮೊಕದ್ದಮೆಯಲ್ಲಿ ಶಿವ ಶರಣರಿಗೆ ಏನೋ ಸಂಬಂಧವಿದ್ದಂತೆ ನನಗೆ ತೋರಿತು. ಆ ಗವಿಯಲ್ಲಿ ಭಂಗಿಯ ಚಿಲುಮೆ, ಏಕ್‌ತಾರಿ ವಾದ್ಯ ಮೊದಲಾದ ಪರಿಕರಗಳನ್ನು ನೋಡಿದ್ದು ನೆನಪಿದೆ. ಆತ ಒಂದೆರಡು ತತ್ವಗಳನ್ನು ಹೇಳಿದ್ದನ್ನೂ ಕೇಳಿದ ಜ್ಞಾಪಕವಿದೆ. ಆತ "ಇಲ್ಲಿಗೆ ಒಬ್ಬ ಸಾಧುಗಳು ದಯಮಾಡಿಸುತ್ತಾರೆ" ಎಂದು ಹೇಳುತ್ತಿದ್ದದ್ದೂ ಜ್ಞಾಪಕದಲ್ಲಿದೆ.

ಈಗ ನನಗನ್ನಿಸುತ್ತದೆ, ಆ ಗವಿಗೆ ಹೋಗುತ್ತಿದ್ದ ಸಾಧುಗಳು ನಮ್ಮ ಸ್ವಾಮಿಗಳೇ ಇದ್ದಿರಬಹುದೆಂದು. ಏಕೆಂದರೆ ಸ್ವಾಮಿಗಳು ಯೋಗಿಗಳು, ಅವರಿಗೆ ಯೋಗಾಭ್ಯಾಸ ಮಾಡುವುದಕ್ಕಾಗಿ ಒಂದು ಪ್ರಶಾಂತವಾದ ನಿರ್ಜನಸ್ಥಾನ ಬೇಕು. ಅಂಥ ಜಾಗ ಈ ಗವಿಮಠದಲ್ಲಿತ್ತೆಂದು ತೋರುತ್ತದೆ.

## ಯೋಗಾಭ್ಯಾಸ

ಇನ್ನೊಂದು ಕಥೆಯನ್ನು ನಾನು ಕೇಳಿದ್ದೇನೆ. ಇದನ್ನು ನನಗೆ ಹೇಳಿದವರು ಬೆಂಗಳೂರು ಲಾ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಎಂ. ನಾರಾಯಣರಾಯರು. ಆ ಕಥೆಯ ಅಂಶ ಇಷ್ಟು: ಮಹಾದೇವಶಾಸ್ತ್ರಿಗಳವರು ಯೋಗದಲ್ಲಿ ಪಾರಂಗತರಾಗಿದ್ದರು. ಅವರ ಜೊತೆಗೆ ಯಾರೋ ಒಬ್ಬ ಮುಸಲ್ಮಾನ ಫಕೀರರು ಯೋಗಾಭ್ಯಾಸಮಾಡುತ್ತಿದ್ದರಂತೆ. ಆ ಫಕೀರರೂ ಶಾಸ್ತ್ರಿಗಳವರೂ ಆಗಾಗ ರಾಮನಗರದ ಬೆಟ್ಟಕ್ಕೆ ಹೋಗಿ ಅಲ್ಲಿ ಒಂದು ಗುಹೆಯಲ್ಲಿ ತಮ್ಮ ಅಭ್ಯಾಸಗಳನ್ನು ನಡೆಸುತ್ತಿದ್ದರಂತೆ. ಒಂದು ಸಾರಿ ಅವರಿಬ್ಬರೂ ತಮ್ಮ ದೇಹಗಳನ್ನು ಆ ಗುಹೆಯಲ್ಲಿ ಬಿಟ್ಟು ಜೀವಮಾತ್ರರಾಗಿ ಹೊರಕ್ಕೆ ಬಂದಿದ್ದರೆಂದೂ, ಇನ್ನೊಂದು ಸಾರಿ ಅವರು ದೇಹದಿಂದ ಹೊರಕ್ಕೆ ಬಂದು ದೇಹವನ್ನು ಛಿದ್ರ ಛಿದ್ರವಾಗಿ ಕತ್ತರಿಸಿ ಬಳಿಕ ಯೋಗಶಕ್ತಿಯಿಂದ ಆ ಅವಯವಗಳನ್ನು ಒಟ್ಟು ಗೂಡಿಸಿ ಅದರೊಳಕ್ಕೆ ಪುನಃಪ್ರವೇಶ ಮಾಡಿದರೆಂದೂ ಕಿಂವದಂತಿ ಇರುತ್ತದೆ. ನಾರಾಯಣರಾಯರು ಯಾರಿಂದಲೋ ತಾವು ಕೇಳಿದ್ದನ್ನು ನನಗೆ ಹೇಳಿದರು. ಯಥಾರ್ಥವನ್ನು ಅವರೂ ಕಂಡವರಲ್ಲ, ನಾನೂ ಕಂಡವನಲ್ಲ.

ಮಹಾದೇವಶಾಸ್ತ್ರಿಗಳ ಯೋಗಸಿದ್ಧಿಯನ್ನು ಕುರಿತಾಗಲಿ ಶಾಸ್ತ್ರಪಾಂಡಿತ್ಯವನ್ನು ಕುರಿತಾಗಲೀ ನಾನು ಏನನ್ನೂ ಹೇಳಬಲ್ಲವನಾಗಿಲ್ಲವೆಂದು ಮನಸ್ಸಿಗೆ ಕೊರತೆಯಾಗಿದೆ. ನನಗೆ ಅವರೊಡನೆ ಮಾತನಾಡುವ ಅವಕಾಶ ಬರಲಿಲ್ಲ. ಆದರೆ ನಾನು ಪುಸ್ತಕಗಳಲ್ಲಿ ಓದಿದ್ದ 'ಅವಧೂತ' ಎಂಬ ಮಾತಿನ ಅಭಿಪ್ರಾಯ ನನ್ನ ಮನಸ್ಸಿಗೆ ಬಂದದ್ದು ಸ್ವಾಮಿಗಳನ್ನು ನೋಡಿದ ಮೇಲೆ.

- ಪುಟಗಳು, *(96-102)*

*ಸಂಗ್ರಹ: ಚಂದ್ರಮತಿ*

ಕಥೆ

# ಉತ್ಥಾನ

ಚಕ್ರವರ್ತಿ, ಪಕ್ಕದಲ್ಲಿದ್ದ ಚೊಂಬನ್ನೆತ್ತಿ ಗಟಗಟನೆ ನೀರು ಕುಡಿದ. ತಣ್ಣನೆಯ ನೀರು ಒಳಗಿಳಿದರೂ ಒಡಲು ಶಾಂತವಾಗಲಿಲ್ಲ. ಏನಾಗುತ್ತಿದೆ ತನಗೆ? ಏಕೆ ಹೀಗಾಗುತ್ತಿದೆ? ಇದೇನು ತನ್ನನ್ನು ಹೆತ್ತತಾಯಿಯ ಶಾಪವೇ? ತಂದೆಯ ನಿಟ್ಟುಸಿರಿನ ಫಲಶ್ರುತಿಯೇ?..... ಪ್ರಶ್ನೆ, ಪ್ರಶ್ನೆಯಾಗಿಯೇ ಉಳಿಯಿತು. ಕಣ್ಣು ಮುಚ್ಚಿದೆನೆಂದರೆ ಸಾಕು..... ನೆನಪುಗಳು.... ನೆನಪುಗಳು, ರಕ್ತಬೀಜಾಸುರನ ರಕ್ತದಿಂದ ಅವ್ಯಾಹತವಾಗಿ ಹುಟ್ಟಿಬರುವ ರಕ್ಕಸರಂತೆ ಹುಟ್ಟಿಬರುವ ರಕ್ಕಸ ನೆನಪುಗಳು.

ತನಗೆ ಆಗಿರುವ ಕೊರತೆಯಾದರೂ ಏನು? ಜನಗಳ ಕಣ್ಣಿನಲ್ಲಿ ಏಕೆ, ತನ್ನ ದೃಷ್ಟಿಯಲ್ಲೂ ಇತ್ತೀಚಿನವರೆಗೂ ತಾನು ಅತ್ಯಂತ ಸುಖಿ...... ಅಥವಾ ಸುಖಿಯೆಂದು ಭ್ರಮಿಸಿದ್ದೆನೋ...... ಚಲನಚಿತ್ರರಂಗದ ಸುಪ್ರಸಿದ್ಧನಾಯಕನಟ ಸೂಪರ್‌ಸ್ಟಾರ್, ನಟಚಕ್ರವರ್ತಿ, ಅಭಿನಯಬ್ರಹ್ಮ ನಟ ವಿಶಾರದ ಎಂಬೆಲ್ಲಾ ಬಿರುದಾಂಕಿತನಾದ ತನ್ನ ಚಿತ್ರವೆಂದರೆ, ಜನ ಮುಗಿಬಿದ್ದು ನೋಡುತ್ತಿದ್ದಾರೆ. ತನ್ನ ಹೆಸರಿನ ಅಭಿಮಾನೀ ಸಂಘಗಳೇ ಬೇಕಾದಷ್ಟಿವೆ. ತನಗೇ ನೆನಪಿಲ್ಲದಿದ್ದರೂ, ಬೇಡದಿದ್ದರೂ ಅವುಗಳು ತನ್ನ ಹುಟ್ಟು ಹಬ್ಬವನ್ನೂ, ಮದುವೆಯ ವಾರ್ಷಿಕೋತ್ಸವವನ್ನೂ, ಚಲನಚಿತ್ರಗಳ ಶತದಿನೋತ್ಸವಗಳನ್ನೂ ಅದ್ದೂರಿಯಿಂದ ಆಚರಿಸುತ್ತವೆ.

ಕೆ.ಎಸ್. ವತ್ಸಲಾ ವಿಶ್ವನಾಥ್

ಎದೆಯೊಳಗಿನ ವೇದನೆಯೇನಿದ್ದರೂ ಹೊರಗೆ ಮಾತ್ರ ನಗೆಯ ಮುಖವಾಡ ಧರಿಸಿ ವ್ಯವಹರಿಸುವುದು ಅಗತ್ಯವಾಗಿದೆ, ಅನಿವಾರ್ಯವಾಗಿದೆ. ಆದರೂ ಒಮ್ಮೊಮ್ಮೆ ತನ್ನ ಪ್ರಯತ್ನವನ್ನೂ ಮೀರಿ ಈ ಮುಖವಾಡ ಕಳಚಿಬಿದ್ದಾಗ ಮಾತ್ರ ಖಿನ್ನತೆ ತನ್ನಂತೆ ತಾನೇ ಹೃದಯವನ್ನೆಲ್ಲಾ ಆಕ್ರಮಿಸಿಬಿಡುತ್ತದೆ. ಆ ಖಿನ್ನತೆ ಬೇರೆಯವರೆದುರಿಗೆ ಪ್ರದರ್ಶಿಸಬಾರದೆಂಬ ಪ್ರಜ್ಞೆಯಿಂದ ಗುಂಪಿನಿಂದ ದೂರ ಸರಿದು ಏಕಾಂತಕ್ಕೆ ಜಾರಿಬಿಡುತ್ತಿದ್ದ ಸಂದರ್ಭಗಳೂ ಎಷ್ಟೋ ಇದ್ದವು. ಆದುದರಿಂದಲೋ ಏನೋ ಯೂನಿಟ್ಟಿನವರ 'ಚಕ್ರವರ್ತಿ ಸರ್ ತುಂಬಾ ಮೂಡಿ' ಎಂಬ ಟೀಕೆಗೆ ಒಳಗಾಗುತ್ತಿದ್ದುದೂ ಉಂಟು. ಇತ್ತೀಚೆಗೆ ಏಕೋ ಅಭಿನಯದಲ್ಲೂ ಮಗ್ನತೆ, ಏಕಾಗ್ರತೆ, ಕಡಿಮೆಯಾಗಿ, ಅನ್ಯಮನಸ್ಕತೆ ಹೆಚ್ಚುತ್ತಿದೆ.

ತನ್ನ ಇಪ್ಪತ್ತರ ಹರಯದಲ್ಲಿ ಮೊತ್ತಮೊದಲ ಚಿತ್ರದಲ್ಲಿ ಅಭಿನಯಿಸುವಾಗ ತನ್ನ ಉತ್ಸಾಹವೆಷ್ಟಿತ್ತು?..... ತಾನಂದುಕೊಂಡಿದ್ದೆಲ್ಲವನ್ನೂ ಒಂದೇ ಬಾರಿಗೆ ಸಾಧಿಸಿ ಆಕಾಶದೆತ್ತರಕ್ಕೆ ಏರಿಬಿಡಬೇಕೆಂಬ ಛಲವೆಷ್ಟಿತ್ತು?...... ಏನೆಲ್ಲಾ ಕುತೂಹಲ ..... ಎಷ್ಟೆಲ್ಲಾ ನಿರೀಕ್ಷೆಗಳು..... ವರ್ಣಮಯ ಜಗತ್ತಿನ ಆಕರ್ಷಣೆ ಹರಯ ಉಕ್ಕುತ್ತಿದ್ದ ಮನಸ್ಸಿಗೆ ರೋಚಕ ಅನುಭವ ನೀಡಿತ್ತು. ಮೊತ್ತ ಮೊದಲ ಚಿತ್ರವೇ ಅದ್ಭುತ ಜಯಭೇರಿ ಬಾರಿಸಿದಾಗ ಬಹುಶಃ ತಾನು ನೆಲದ ಮೇಲೆ ನಿಂತಿರಲಿಲ್ಲ. ತನ್ನನ್ನು ಚಿತ್ರ ಜಗತ್ತಿಗೆ ಪರಿಚಯಿಸಿದ ನಿರ್ದೇಶಕ ಆತ್ಮಾರಾಮರು ಅದು ಯಾವ

ಶುಭಗಳಿಗೆಯಲ್ಲಿ ತನಗೆ 'ಚಕ್ರವರ್ತಿ'ಯೆಂದು ನಾಮಕರಣ ಮಾಡಿದ್ದರೋ, ತಾನು ಚಿತ್ರ ರಂಗದಲ್ಲೂ ಅನಭಿಷಿಕ್ತ ಚಕ್ರವರ್ತಿಯಂತೇ ಮೆರೆದಿದ್ದ.

ತನ್ನ ಮೊಟ್ಟ ಮೊದಲ ಚಿತ್ರದ ನಾಯಕಿ ನಟಿ 'ಚರಿತ್ರಾ ಹಾಗೂ ತನ್ನ ಜೋಡಿಯ ಚಿತ್ರಗಳು ಅಪಾರ ಜನಪ್ರಿಯ ಜೋಡಿಯಾಗಿತ್ತು. ತಮ್ಮಿಬ್ಬರ ಜೋಡಿಯ ನಾಲ್ಕು ಚಿತ್ರಗಳೂ 'ಸೂಪರ್‌ಹಿಟ್' ಆಗುವ ವೇಳೆಗೆ ಚರಿತ್ರಾ ಅಭಿನಯವೇ ಜೀವನೋಪಾಯವಾಗಿರುವ, ತಮಗಿಂತ ತೀರಾ ಕೆಳಜಾತಿಯ ಹೆಣ್ಣಿನೊಡನೆ ವಿವಾಹವೇ? ಅಪ್ಪಟ ಸಂಪ್ರದಾಯಸ್ಥ ಮನೋಧರ್ಮದ ತನ್ನ ಹೆತ್ತವರಿಗೆ ಈ ಅಸಮಾನ ಜೋಡಿಯ ವಿವಾಹದಿಂದ ದೊಡ್ಡ ಆಘಾತವಾಗುತ್ತದೆನ್ನುವ ಸತ್ಯ ತನಗೆ ತಿಳಿಯದುದೇನಾಗಿರಲಿಲ್ಲ. ಆದರೆ ಚರಿತ್ರಾಳ ಆಕರ್ಷಣೆ ಬೇರೆಲ್ಲಾ ಭಾವಗಳನ್ನು ಬದಿಗೊತ್ತುವಷ್ಟು ಬಲವಾಗಿತ್ತು. ಯಾರ ಅಸಮಾಧಾನವಾಗಲೀ,

**ಒಳಗೆಲ್ಲಾ ಎಂತಹುದೋ ನೋವು..... ಜೀವದ ಸಾರವನ್ನೆಲ್ಲಾ ಹಿಂಡಿ, ಹಿಂಡಿ ಖಾಲಿ ಮಾಡಿಬಿಡುವಂತಹ ವಿಚಿತ್ರ ವೇದನೆ..... ತನ್ನದೆಲ್ಲವನ್ನೂ ಕಳೆದುಕೊಂಡು ಭಿಕಾರಿಯ ಸ್ಥಿತಿಗೆ ಇಳಿದಂತಹ ಹೀನ ಸಂಕಟ. ಇದುವರೆಗೂ ತಾನು ಯಾವುದನ್ನು ಪರಮಸುಖವೆಂದು ನಂಬಿದ್ದೆನೋ, ಆ ನಂಬಿಕೆಯು, ಶ್ರದ್ಧೆಯು ಮೂಲ ಬೇರು ಒಮ್ಮೆಲೇ ಕಳಚಿಕೊಂಡು, ಮಣ್ಣಿನಿಂದ ಬೇರ್ಪಟ್ಟ ಅನುಭವ.....**

ನಿಜಜೀವನದಲ್ಲೂ ತನ್ನ ಹೃದಯವನ್ನು ಪ್ರವೇಶಿಸಿದ್ದಳು. ಮಾದಕ ಚೆಲುವಿನ, ಮೋಹಕ ಮೈಕಟ್ಟಿನ ಚರಿತ್ರಾ ತನ್ನ ಮೈಮನಸ್ಸುಗಳಿಗೆ ಲಗ್ಗೆ ಹಾಕಿದ್ದಳು. 'ಅಂಕುರ' ಚಿತ್ರದ ನಂತರ ನಟಿಸಿದ ಚಿತ್ರಗಳಲ್ಲಿ ಅವರದು ಕೇವಲ ಅಭಿನಯವಾಗಿರಲಿಲ್ಲ, ವಾಸ್ತವ ಬದುಕಿನಲ್ಲೂ, ಅವರಿಬ್ಬರೂ ಪ್ರೇಮ, ಪ್ರಣಯಗಳಿಂದ ಬಂಧಿಸಲ್ಪಟ್ಟ ಪ್ರಣಯಪಕ್ಷಿಗಳೇ ಆಗಿದ್ದರು. ಒಬ್ಬರಿಲ್ಲದೆ ಒಬ್ಬರು ಇರುವುದು ಅಸಾಧ್ಯವೆನಿಸಿದಾಗ ಮದುವೆಯಾಗುವ ನಿರ್ಧಾರಕ್ಕೆ ಮಣಿದಿದ್ದರು.

ತನ್ನ ಮನೆಯಲ್ಲಿ ಹಾಹಾಕಾರ..... ಭಾರೀ ಕೋಲಾಹಲವೇ ನಡೆದಿತ್ತು.

ಛೀ ಛೀ! ಇದೀಗ ತಾನೇ ಇಪ್ಪತ್ತು ತುಂಬಿರುವ ನಮ್ಮ ಹುಡುಗ ರಾಮುವಿಗೆ, ಇಪ್ಪತ್ತಾರರ, ಗಂಡನಿಂದ ದೂರವಾದ, ಯಾರ ವಿರೋಧವಾಗಲೀ ತನ್ನ ನಿರ್ಧಾರವನ್ನು ಕದಲಿಸಲು ಸಾಧ್ಯವಾಗಿರಲಿಲ್ಲ.

ತನ್ನ ಕಡೆಯವರ್‍ಯಾರೂ ಇಲ್ಲದೇ ಮದುವೆ ಮುಗಿದು ಹೋಗಿತ್ತು, ಚರಿತ್ರಾಳ ಕಡೆಯಿಂದ ಯಾವ ವಿರೋಧವಿರಲಿಲ್ಲ. ಹೆತ್ತವರ ನೋವಿನ ನಿಟ್ಟುಸಿರಿನ ನಡುವೆಯೇ ಮದುವೆ ನಡೆದುಹೋಗಿತ್ತು. ಅದ್ದೂರಿಯ ಮದುವೆ ಮುಗಿಸಿ, ಹದಿನೈದು ದಿನಗಳ ಕಾಶ್ಮೀರದ ಮಧುಚಂದ್ರವನ್ನೂ ಮುಗಿಸಿ ಹಿಂದಿರುಗಿದವನನ್ನು ಸ್ವಾಗತಿಸಿದ್ದು ತನ್ನಮ್ಮನ ಸಾವಿನ ಸುದ್ದಿ ಅಮ್ಮನ ಸಾವು ಅವನ ಚೈತನ್ಯವನ್ನೇ ಉಡುಗಿಸಿತ್ತು. ತನ್ನನ್ನು ಅತ್ಯಂತವಾಗಿ ಪ್ರೀತಿಸುತ್ತಿದ್ದ ಅಮ್ಮ ಮಡಿಲಿನಲ್ಲಿ ಕುಳ್ಳಿರಿಸಿಕೊಂಡು ರಾಮಾಯಣದ, ಪುರಾಣ ಪುಣ್ಯಕಥೆಗಳನ್ನು ಹೇಳುತ್ತಾ, 'ಮಗೂ ನೀನೂ ಶ್ರೀರಾಮಚಂದ್ರನ ಹಾಗೇ ಸಚ್ಚಾರಿತ್ರ್ಯವಂತನಾಗಬೇಕು, ಅವನ ಹಾಗೇ ಕೀರ್ತಿವಂತನಾಗಬೇಕು" ಎಂದು ಹಿತನುಡಿಗಳನ್ನು

ಕಿವಿಯಲ್ಲುಸುರುತ್ತಾ, ಹತ್ತು ವರ್ಷದವನಾದರೂ ಪುಟ್ಟ ಮಗುವಿನಂತೆ ಕೈತುತ್ತು ತಿನ್ನಿಸಿ, ತಟ್ಟಿ ಮಲಗಿಸುತ್ತಿದ್ದ ತನ್ನ ಅಮ್ಮ ಇನ್ನಿಲ್ಲ. ಆ ಕಹಿಸತ್ಯವನ್ನು ನಂಬಲಾರೆನೆಂಬಂತೆ ಮನಸ್ಸು ಹಠ ಹಿಡಿಯುತ್ತಿತ್ತು.

ಅವನೆದೆ ಛಿದ್ರಛಿದ್ರವಾಗಿ ಹೋಗಿತ್ತು. ಸಾವಿನಲ್ಲೂ ತನ್ನ ಸುಖದ ಚಿಂತೆಮಾಡಿದ ಅಮ್ಮ..... ಅಷ್ಟು ಬೇಗ ಸಾಯುವಂಥದ್ದೇನಾಗಿತ್ತು ಅವಳಿಗೆ? ತನ್ನ, ಚರಿತ್ರಾಳ ಮದುವೆ ಅಮ್ಮನನ್ನು ಸಾವಿನ ದವಡೆಗೆ ದೂಡುವಂತಹ ಬಲವಾದ ಆಘಾತವಾಗಿತ್ತೆ? ಛೇ! ಛೇ! ಚರಿತ್ರಾಳನ್ನು ಅಮ್ಮನ, ಅಪ್ಪನ ವಿರೋಧದ ನಡುವೆಯೂ ಮದುವೆಯಾಗಿ ಗೆದ್ದೆನೆಂದುಕೊಂಡಿದ್ದ ಚಕ್ರವರ್ತಿ ಅಮ್ಮನ ಸಾವಿನಿಂದ ಸಂಪೂರ್ಣವಾದ ಸೋಲಿನ ಭಾವದಿಂದ ತತ್ತರಿಸಿ ಹೋದ.

ಮಧುಚಂದ್ರವನ್ನು ಮುಗಿಸಿ ಊರಿಗೆ ಹಿಂದಿರುಗುತ್ತಿದ್ದಂತೆಯೇ ಅವನ ಪ್ರಣಯೋತ್ಸಾಹದ ಉನ್ಮಾದವೆಲ್ಲಾ ಜರಡಿಯಲ್ಲಿನ ನೀರಿನಂತೆ ಜರ್ರನೆ ಜಾರಿಹೋಗಿತ್ತು. ಅದೇಕೋ ಚರಿತ್ರಾಳನ್ನು ಕಂಡೊಡನೇ ಹಿಂದೆಲ್ಲಾ ಮೈಮರೆಯುತ್ತಿದ್ದ ಅವನಿಗೆ, ಅವಳ ಮುಖದಲ್ಲಿ ಪ್ರೇಮಮಯಿಯಾದ ತನ್ನಮ್ಮನ ಮುಖವೇ ಕಾಣತೊಡಗಿ ಮನಸ್ಸು ತಕ್ಷಣವೇ ಅಪರಾಧೀಪ್ರಜ್ಞೆಯಲ್ಲಿ ಮುಳುಗಿಬಿಡುತ್ತಿತ್ತು. ಮನಸ್ಸು ಕದಡಿದ ರಾಡಿಯಂತಾಗಿ ಅವ್ಯಕ್ತ ವೇದನೆಗೆ ಸಿಲುಕಿ ಬಿಡುತ್ತಿತ್ತು. ಇದರಲ್ಲಿ ಚರಿತ್ರಾಳ ತಪ್ಪೇನೂ ಇಲ್ಲವೆಂದು ಅವನಿಗೇ ತಿಳಿದಿದ್ದರೂ ಸಹ ಮನಸ್ಸು ಅದೇಕೋ ಅವಳಿಂದ ವಿಮುಖವಾಗತೊಡಗಿತ್ತು.

ಈಗ ತಡವಾಗಿಯಾದರೂ ಅರ್ಥವಾಗಿತ್ತು. ಚರಿತ್ರಾಳನ್ನು ತಾನೇಕೆ ಮದುವೆಯಾದೆ? ತನಗೆ ಅವಳ ಬಗೆಗಿದ್ದದ್ದು ಪ್ರೇಮವೂ ಅಲ್ಲ, ಪ್ರೀತಿಯೂ ಅಲ್ಲ. ಪ್ರೀತಿಯ ತೆರೆಸೊದ್ದಿದ್ದ ಕಾಮದ ಭಾವನೆಯಷ್ಟೇ. ಕೇವಲ ದೈಹಿಕ ಆಕರ್ಷಣೆ. ತಾರುಣ್ಯ ಭರಿತದೇಹಕ್ಕೆ ದೊರಕಿದ ಮೊದಲ ಸಂಗಾತಿಯಾದ ಅವಳಲ್ಲಿ ತಾನು ಅನುಭವಿಸಿದ್ದು ಕೇವಲ ದೇಹಭಾವವನ್ನಷ್ಟೇ. ಆಟವಾಡಿ ಬೇಸರಗೊಂಡ ಮಗು, ಆಕರ್ಷಣೆಕಳೆದುಕೊಂಡ ಆಟದ ವಸ್ತುವನ್ನು ಬಿಸುಡುವಂತಾಗಿತ್ತು ಚಕ್ರವರ್ತಿಯ ಸ್ಥಿತಿ. ಆದರೆ ಬಿಸುಡಲು ಚರಿತ್ರಾ ಆಟದ ವಸ್ತುವಾಗಿರಲಿಲ್ಲ.

ದಿನದಿನಕ್ಕೂ ಅವನ ಖಿನ್ನತೆ ಹೆಚ್ಚುತ್ತಿತ್ತು. ಚರಿತ್ರಾಳೂ ಅವನಲ್ಲಾಗುತ್ತಿದ್ದ ಮಾನಸಿಕ ವ್ಯತ್ಯಾಸವನ್ನು ಗುರುತಿಸಿದ್ದಳು. ಅವಳಿಗೆ ಚಕ್ರವರ್ತಿಯನ್ನು ಮದುವೆಯಾಗಿ ಭ್ರಮನಿರಸನವಾಗಿತ್ತು. ಆದರೂ ಚರಿತ್ರಾ ಸಹೃದಯಿ. ತನ್ನ ನೋವನ್ನು ಒಳಗೇ ನುಂಗಿಕೊಂಡು ಅವನಿಗೆ ಬಿಡುಗಡೆಯನ್ನು ನೀಡಿದ್ದಳು. ಮೇಲ್ನೋಟಕ್ಕೆ ಸುಖೀದಾಂಪತ್ಯ, ಆದರ್ಶದಾಂಪತ್ಯ ನಡೆಸುತ್ತಿದ್ದರೂ ಅವರಿಬ್ಬರೂ ಮಾನಸಿಕವಾಗಿ ವಿಚ್ಛೇದಿತರೇ ಆಗಿದ್ದರು. ಕಾನೂನಿನ ಪ್ರಕಾರವಾಗಿ ಡೈವೋರ್ಸ್ ತೆಗೆದುಕೊಳ್ಳುವುದೇನೂ ಕಷ್ಟವಾಗಿರಲಿಲ್ಲ. ಆದರೆ ಅದು ಚಕ್ರವರ್ತಿಯ ಸ್ವಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಎಷ್ಟಾದರೂ ಚರಿತ್ರಾ ಅವನು ಇಷ್ಟಪಟ್ಟು, ತನ್ನವರೆಲ್ಲರನ್ನೂ ತೀವ್ರವಾಗಿ ವಿರೋಧಿಸಿ ಮದುವೆಯಾದ ಹೆಣ್ಣು. ಮದುವೆಯಾಗಿ ತಿಂಗಳುಗಳಲ್ಲೇ ವಿಚ್ಛೇದನವೆಂದರೆ.....

ಅವನಿಗಿದ್ದದ್ದು ಒಂದೇ ದಾರಿ. ತನ್ನೆಲ್ಲಾ ಆತಂಕ, ನೋವು, ಖಾಲಿತನವನ್ನು ಕಳೆದುಕೊಳ್ಳುವ ಪ್ರಯತ್ನದಲ್ಲಿ, ತನ್ನ ವೃತ್ತಿಯಲ್ಲಿ ಸಂಪೂರ್ಣವಾಗಿ ತೊಡಗುವುದು....... ಹೊರಜಗತ್ತಿನ ಅರಿವೇ ಬಾರದಷ್ಟು ಅದರಲ್ಲಿ ಮುಳುಗಿಹೋಗುವುದು..... ತನ್ನ ಮನೆ, ಚರಿತ್ರಾ, ಅಪ್ಪ-ಅಮ್ಮ, ಅಮ್ಮನ ಸಾವು ಯಾವುದೂ ನೆನಪಿಗೇ ಬಾರದಷ್ಟು ಆಳವಾಗಿ ಅದರಲ್ಲಿ ಮಗ್ನನಾಗಿಬಿಟ್ಟ... ಇಪ್ಪತ್ತೂ..... ಇಪ್ಪತ್ತೈದು..... ಐವತ್ತೂ.... ನೂರು.... ನೂರೈವತ್ತು..... ಚಿತ್ರಗಳ ದಾಖಲೆಯನ್ನೇ ನಿರ್ಮಿಸಿದ. ಎಷ್ಟು ಚಿತ್ರಗಳು..... ಎಷ್ಟೊಂದು ಜನ



ಸಹನಟಿಯರು, ನಾಯಕಿಯರು..... ನೆನಪೇ ಇಲ್ಲದಷ್ಟು ಜನ ನೆನಪಿರುವುದೆಲ್ಲಾ ಅವನಿಗೆ ಹತ್ತಿರವಾಗಿ, ಬದುಕಿನಲ್ಲಿ ನಾಲ್ಕಾರುದಿನಗಳಿಗಾದರೂ ದೈಹಿಕ ಮಾನಸಿಕ ತೃಪ್ತಿಯನ್ನು ತಂದುಕೊಟ್ಟ ಕೆಲವು ಹೆಣ್ಣುಗಳು ಮಾತ್ರಾ...... ಅದಾರು ? ಆಮಂತಿಕಾ.....

'ಸ್ಪಂದನ' ಚಿತ್ರದಿಂದ ಅವನಿಗೆ ಹತ್ತಿರಳಾದ ಹೆಣ್ಣು ಮೌನಿಕಾ...... 'ರಾಗರಂಜಿನಿ'ಯ ಚಿತ್ರೀಕರಣದ ಸಮಯದಲ್ಲಿ ತಾನಾಗಿಯೇ ಒಲಿದು ಬಂದ ಹುಡುಗಿ. ರತಿ ವರ್ಚಸ್ಸಿನ ಎಳೆಹರಯದ ಬೆಡಗಿ, ಅಪರೂಪದ ಸೊಬಗಿ..... ಮಧುರಿಕಾ...... ನೀಹಾರಿಕಾ.... ತುಷಾರ..... ಮಂದಾರ.... ಓಹ್! ಆದರೆ ಯಾರದೂ ಶಾಶ್ವತವಾದ ಸಂಬಂಧವಾಗಿರಲಿಲ್ಲ. ಅದು ಅವರ ನಿರೀಕ್ಷೆಯೂ ಆಗಿರಲಿಲ್ಲ. ಎಲ್ಲರೂ ಅವನ ರೂಪಕ್ಕೆ, ಕೀರ್ತಿಗೆ, ಅಭಿನಯ ಸಾಮರ್ಥ್ಯಕ್ಕೆ ಮರುಳಾದವರು ಯಾರೊಬ್ಬರಿಗೂ ಅವನ ಹೃದಯದಲ್ಲಿ ಸ್ಥಾನ ಕೊಟ್ಟಿರಲಿಲ್ಲ. ಚರಿತ್ರಾಳ ಮೇಲಿನ ಸೇಡನ್ನು ತೀರಿಸಿಕೊಳ್ಳಲೋ ಎಂಬಂತೆ ಅವನು ಅವರೆಲ್ಲರನ್ನೂ ಅನುಭವಿಸಿದ್ದ. ಬಟ್ಟೆ ಬದಲಿಸುವಷ್ಟೇ ಸಲೀಸಾಗಿ ಸಂಗಾತಿಯನ್ನು ಬದಲಾಯಿಸುತ್ತಿದ್ದ. ಅವನ ವ್ಯವಹಾರವೆಲ್ಲಾ ಎಷ್ಟು ಗುಟ್ಟಿನಲ್ಲಿ ನಡೆಯುತ್ತಿತ್ತೆಂದರೆ, ತನ್ನ ಯುನಿಟ್ಟಿನವರಿಗೂ ಅದರ ಸುಳಿವು ಸಿಕ್ಕದಂತೆ ಎಚ್ಚರ ವಹಿಸುತ್ತಿದ್ದ. ಎಲ್ಲರ ದೃಷ್ಟಿಯಲ್ಲಿ ಅವನು ಯಾವ ಗಾಸಿಪ್‌ಗಳಿಗೂ ಸಿಕ್ಕಿಬೀಳದ ಗೌರವಾನ್ವಿತ, ಪ್ರತಿಷ್ಠಿತ ನಟ.

ಎದೆಯೊಳಗೆ ಅಸಹನೀಯ ಸಂಕಟವಾಗಿ ಮತ್ತೊಮ್ಮೆ ನೀರನ್ನು ಗಂಟಲಿಗಿಳಿಸಿದ ಚಕ್ರವರ್ತಿ. ರಕ್ಕಸ ನೆನಪುಗಳು ಮತ್ತೆ ಮುತ್ತಿಗೆ ಹಾಕಿದವು.

ಬಹುಶಃ ಚರಿತ್ರಳಾದರೂ, ಹೆಂಡತಿಯೆಂಬ ಅಧಿಕಾರದಿಂದ ತನ್ನ ವರ್ತನೆಗೆ ಕಡಿವಾಣ ಹಾಕಿದ್ದಿದ್ದರೆ...... ಉಹೂ...... ಚರಿತ್ರಾಳನ್ನು ತಾನು ಬದುಕಿನಿಂದ, ಮನಸ್ಸಿನಿಂದ ದೂರ

ಸರಿಸುತ್ತಿದ್ದಂತೆಯೇ ಅವಳೂ ತನ್ನಷ್ಟಕ್ಕೆ ತಾನೇ ತನ್ನಿಂದ ದೂರವಾಗಿ ಹೋಗಿದ್ದಳು. ಅವಳೂ ಕೂಡಾ ಒಂದು ಕಾಲದಲ್ಲಿ ಹದಿಹರಯದ ಚಿತ್ರಪ್ರೇಮಿಗಳ ಹೃದಯದಲ್ಲಿ ಹುಚ್ಚೆಬ್ಬಿಸಿ, ಕುಣಿಸುತ್ತಿದ್ದ ಜನಪ್ರೀಯನಟಿ. ಅವಳು ಬೇಕೆಂದಿದ್ದರೆ, ತನ್ನಂತೆ ಅವಳೂ ಚಿತ್ರರಂಗದಲ್ಲೇ ಮುಂದುವರೆದು ಇನ್ನೂ, ಇನ್ನೂ ಹೆಸರು, ಹಣ ಕೊಳ್ಳೆಹೊಡೆದು...... ಅಭಿಮಾನದ ಮಹಾಪೂರದಲ್ಲಿ ಕೊಚ್ಚಿಹೋಗಿ, ತಾನು ಬೇರೆ ಹೆಣ್ಣುಗಳಿಂದ ದೈಹಿಕ ಸುಖವನ್ನು ಸೂರೆಹೊಡೆದಂತೆ ಬೇರೆ ಗೆಳೆಯರ ಸ್ನೇಹದಲ್ಲಿ..... ಪ್ರೀತಿಯಲ್ಲಿ ಮುಳುಗಿ..... ಛೇ!ಛೇ! ತಲೆಕೊಡವಿದ. ಚರಿತ್ರಾ ಭೂಮಿತೂಕದ ಸಹನೆಯ ಹೆಣ್ಣು ಅನಿಸಿತು. ತಾನು ಅವಳನ್ನು ದೂರ ಸರಿಸಿದಂತೆ ಅವಳು ತನ್ನನ್ನೂ, ಚಿತ್ರರಂಗವನ್ನೂ ದೂರವೇ ಸರಿಸಿ, ತನ್ನದೇ ಆದ ನೆಮ್ಮದಿಯ ವಲಯವನ್ನು ಸೃಷ್ಟಿಸಿಕೊಂಡು ನೆಮ್ಮದಿಯನ್ನು ಅನುಭವಿಸುತ್ತಿದ್ದಳು. ಅನಾಥಮಕ್ಕಳನ್ನು ಕಲೆಹಾಕಿ, ಅವರ ಪೋಷಣೆ, ವಿದ್ಯಾಭ್ಯಾಸ, ಭವಿಷ್ಯದ ಉನ್ನತಿಗಾಗಿ ಪರಿಶ್ರಮಿಸುತ್ತಾ ತನ್ನ ಬಾಳನ್ನು ಸಾರ್ಥಕ ಪಡಿಸಿಕೊಂಡಿದ್ದಳು. ಒಮ್ಮೆ ಚರಿತ್ರಾಳ ಕಾಲುಮುಟ್ಟಿ ನಮಸ್ಕರಿಸುವ ಮನಸ್ಸಾಯಿತು.

ಇದುವರೆಗೂ ತಾನು ಅವಳ ಬಗ್ಗೆ ನಿರ್ಲಿಪ್ತನಾಗಿಬಿಟ್ಟಿದ್ದೆ ಅನ್ನಿಸಿತು. ಕೇವಲ ನಾಲ್ಕಾರುದಿನಗಳ ದೈಹಿಕಬಂಧನವನ್ನು ಹೊರತು ಪಡಿಸಿದರೆ ಅವನಿಗೆ ಅವಳಲ್ಲಿ ಯಾವುದೇ ರೀತಿಯ ಮಾನಸಿಕ ಬಂಧನವೂ ಇರಲಿಲ್ಲವಾದ್ದರಿಂದ ಅವಳ ಬಗ್ಗೆ ದಿವ್ಯ ನಿರ್ಲಕ್ಷತೆಯೇ ಬೆಳೆದುಬಿಟ್ಟಿತ್ತು. ಜೀವನ ನಿರ್ವಹಣೆಗೆ ಅವಳದೇ ಹಣ ಬ್ಯಾಂಕಿನಲ್ಲಿ ಬೇಕಾದಷ್ಟಿತ್ತು. ಒಡನಾಟಕ್ಕೆ ತಂದೆ, ತಾಯಿ, ಒಡಹುಟ್ಟಿದವರಿದ್ದರು. ಮೇಲ್ನೋಟಕ್ಕೆ ತನ್ನಂತಹ ಸುಪ್ರಸಿದ್ಧ ಅಭಿನೇತ್ರ ಪತಿ ಓಡಾಟಕ್ಕೆ ಕಾರು, ವಾಸಕ್ಕೆ ಬಂಗಲೆ ಎಲ್ಲಾ ಇದ್ದವು. ತನ್ನೊಂದಿಗೆ ಸಮಾರಂಭಗಳಿಗೆಂದು ಅಲ್ಲಿ, ಇಲ್ಲಿ ಸುತ್ತಾಡುವಾಗ ಆದರ್ಶಪತ್ನಿಯಂತೆ ಅಭಿನಯಿಸುವ ಚಾತುರ್ಯವೂ ಅವಳಿಗಿತ್ತು. ಹೀಗಾಗಿ ತಾನೂ ಎಲ್ಲರ ದೃಷ್ಟಿಯಲ್ಲಿ ಸುಪ್ರಸಿದ್ಧ ನಟೀ ಪತ್ನಿಯನ್ನು ಪಡೆದ ಅದೃಷ್ಟವಂತ ಪತಿ. ತಾವಿಬ್ಬರೂ ಸುಖೀದಾಂಪತ್ಯ ನಡೆಸುವ ಆದರ್ಶ ಸತಿ-ಪತಿಯರು.

ಚಕ್ರವರ್ತಿ ಅಭಿನಯದ 'ಉತ್ಥಾನ' ಚಿತ್ರಕ್ಕೆ ಸ್ವರ್ಣಕಮಲ ಪ್ರಶಸ್ತಿ ದೊರೆತು 'ಚಕ್ರವರ್ತಿಯ ಹೆಸರು ಮನೆಮಾತಾಗಿ ಅವನ ಸ್ವಪ್ರತಿಷ್ಠೆಗೆ ಚಿನ್ನದಗರಿಗಳು ಮೂಡಿದ್ದವು. ಚಕ್ರವರ್ತಿ ಯಶಸ್ಸಿನ ಉತ್ತುಂಗ ಶಿಖರದ ತುತ್ತತುದಿಯಲ್ಲಿನಿಂತು ಸಂಭ್ರಮಿಸುತ್ತಿದ್ದ ಆ ದಿನಗಳಲ್ಲೇ ಅನಿರೀಕ್ಷಿತವಾಗಿ ಅವನ ಬದುಕಿನಲ್ಲಿ ವಿಚಿತ್ರ ತಿರುವೊಂದು ಸೃಷ್ಟಿಯಾಯಿತು. ಆ ದಿನ..... ಆ ದಿನ....... ಅವನಿಗೆ ಚೆನ್ನಾಗಿ ನೆನಪಿದೆ. ಅದು ಅವನ ಪಾಲಿಗೆ ಅಮೃತಗಳಿಗೆ.......

'ರಾಗಸುಧಾ ಸಾಗರ'ದ ಚಿತ್ರೀಕರಣಕ್ಕೊಂದು 'ಚಿತ್ತಾನಂದರ ಆಶ್ರಮವನ್ನು ತಲುಪಿದಾಗ ಹೊತ್ತು ನಡುಮಧ್ಯಾಹ್ನವನ್ನು ಸಮೀಪಿಸಿತ್ತು. ಬಿರುಬಿಸಿಲಿನ ಧಗೆಗೆ ದಹಿಸುತ್ತಿದ್ದ ಮೈಮನವೆಲ್ಲವೂ, ಆಶ್ರಮದ ಒಳಗಡಿಯಿಡುತ್ತಲೇ ಶೀತಲ ಸ್ಪರ್ಶಕ್ಕೊಳಗಾದಂತೆ ಅನುಭವವಾಗಿ ಎಂತಹುದೋ ಆನಂದದ ಗುಂಗು ಆವರಿಸಿಕೊಂಡು ಬಿಟ್ಟಿತ್ತು. ಪುರಾತನ ಕಾಲದ ಋಷ್ಯಾಶ್ರಮವನ್ನು ಹೋಲುವ ಸುಂದರ, ಶಾಂತ ಪರಿಸರ ಅವನ ಮನಸ್ಸನ್ನು ಆಕರ್ಷಿಸಿಬಿಟ್ಟಿತ್ತು. ಓಹ್, ಎಷ್ಟೊಂದು ಹಿತಕರ ವಾತಾವರಣ! ಸದಾ ಆಡಂಬರದ ವರ್ಣಮಯ ಜಗತ್ತಿನಲ್ಲೇ ವಿಹರಿಸುತ್ತಿದ್ದ ಅವನಿಗೆ ಇಂತಹದೊಂದು ಸರಳ ದೃಶ್ಯವೊಂದು ಮನಸ್ಸಿಗೆ ಇಷ್ಟೊಂದು ಸುಖವನ್ನು ತರಬಲ್ಲದೆಂಬ ಕಲ್ಪನೆಯೂ ಇರಲಿಲ್ಲ. ಆಶ್ರಮದ ಹೊರಭಾಗವನ್ನಷ್ಟೇ ಚಿತ್ರೀಕರಿಸಲು ಅನುಮತಿಯಿದ್ದುದರಿಂದ ಚಿತ್ತಾನಂದರನ್ನು ಭೇಟಿಯಾಗುವ ಅವಕಾಶ ಒದಗಿರಲಿಲ್ಲ. ಅದೇಕೋ ಅವನಿಗೆ ಅವರನ್ನು ಆಕ್ಷಣವೇ ಕಾಣಬೇಕೆಂಬ

ಬಯಕೆಯಾಗಿತ್ತು. ಆದರೆ ಅವರ ಭೇಟಿಯ ಸಮಯವನ್ನು ಮರುದಿನ ಗೊತ್ತುಮಾಡಿದ್ದರಿಂದ ಕಷ್ಟಪಟ್ಟು ತನ್ನ ಬಯಕೆಯನ್ನು ಹತ್ತಿಕ್ಕಿಕೊಂಡ.

ಆ ರಾತ್ರಿಯೆಲ್ಲಾ ಅವನ ಹೃದಯದಲ್ಲಿ ಎಂತಹುದೋ ಕೋಲಾಹಲ, ಚಿತ್ರ, ವಿಚಿತ್ರವಾದ ಭಾವತರಂಗಗಳ ಕುಣಿದಾಟ, ವಿಲಕ್ಷಣವಾದ ಸಂವೇದನೆಗಳ ತಾಕಲಾಟ...... ತನ್ನ ಇಡೀ ಬದುಕಿನ ಬಣ್ಣವೆಲ್ಲಾ ಆಶ್ರಮದ ಪರಿಶುದ್ಧವಾದ ಸ್ಫಟಿಕಜಲದಲ್ಲಿ, ತೊಳೆದುಹೋಗಿ, ತಾನು ಶೂನ್ಯವಾದಂತಹ ಭಾವ..... ಮರುದಿನ.... ಸರಳವಾದರೂ ಭವ್ಯತೆಯಭಾವವನ್ನು ಹೃದಯಕ್ಕೆ ತುಂಬಿಕೊಡುವಂತಿದ್ದ ಆ ಪುಟ್ಟಕೋಣೆಯಲ್ಲಿ 'ಅವರನ್ನು' ಕಂಡಿದ್ದ. ಮಧುರವಾದರೂ ದೃಢವಾದ ದನಿಯೊಂದು ಅವನನ್ನು ಸ್ವಾಗತಿಸಿತ್ತು. 'ಬಾ..... ಮಗೂ..... ಹೆದರಿಕೆಯೇಕೆ? ಇದು ನಿನ್ನದೇ ಮನೆ.' ಬಾ..... ಮಗೂ...... ಎಂದರಲ್ಲವೆ? ತನ್ನಮ್ಮನ ಕರೆಯಂತೆಯೇ ಕೇಳಿತ್ತದು. ಆ ಕ್ಷಣದಲ್ಲಿ ಮಗುವಿನಂತೆಯೇ ಆಗಿಬಿಟ್ಟಿದ್ದ. ಅವರ ಸಾನ್ನಿಧ್ಯದಲ್ಲಿ, ಸಾಮೀಪ್ಯದಲ್ಲಿ 'ನಾನು' ಎನ್ನುವ ಅಸ್ತಿತ್ವವೇ ಮರೆತುಹೋಗಿ ತಾಯಮಡಿಲನ್ನು ಸೇರುವ ಮಗುವಿನಂತೆಯೇ ಆಗಿಹೋಗಿತ್ತು. ಅವನ ಸ್ಥಿತಿ. ಅವರಲ್ಲಿ ಏನು ಕೇಳಬೇಕು...... ಏನು ಹೇಳಬೇಕೆಂಬುದೇ ತೋಚದೆ ಮೌನವಾಗಿ ಕುಳಿತುಬಿಟ್ಟಿದ್ದ. ಆ ಕ್ಷಣದಲ್ಲಿ ಅವನು ಅನಿರ್ವಚನೀಯವಾದ ಆನಂದದ ಅನುಭವದಲ್ಲಿ ಮುಳುಗಿ ಹೋಗಿಬಿಟ್ಟಿದ್ದ. ವರ್ಣನೆಗೆ ನಿಲುಕದ ಶಾಂತಿಯ ಪರಾಕಾಷ್ಠತೆಯ ಸ್ಥಿತಿಯನ್ನು ತಲುಪಿತ್ತು ಅವನ ಮನಸ್ಸು.

ಅವನ ಸ್ಥಿತಿಯನ್ನು ಅರಿತವರಂತೆ ಸ್ವಾಮೀಜಿ ನುಡಿದರು 'ನಿನ್ನ ಹೃದಯದ ಅಶಾಂತಿಯನ್ನು ನಾನು ಅರಿಯಬಲ್ಲೆ ಮಗೂ...... ಒಂದೂ ತಪ್ಪು ಮಾಡದೆ ಇರುವವರಾರು? ಕೆಟ್ಟ ಕೆಲಸಕ್ಕೆ ಮನಸ್ಸು ಸುಲಭವಾಗಿ ಹರಿಯುವುದು ಸಹಜ.


ನಿನ್ನ ಗುರುತು ನನಗಿಲ್ಲದಿರೆ ಏನಂತೆ
ಚುನಾವಣೆ ಬಂದಾಗ ನನ್ನ 'ಗುರುತು'
ನಿಮಗೆ ನೆನಪಿದ್ದರೆ ಅಷ್ಟು ಸಾಕು!

ಆದರೆ...... ಅನಂತರವಾದರೂ ಯುಕ್ತಾಯುಕ್ತ ವಿವೇಚನೆಯಿಂದ ತಿದ್ದಿ ನಡೆಯುವವನು ಮಾತ್ರ ಮನುಷ್ಯನೆನಿಸಿಕೊಳ್ಳುತ್ತಾನೆ. ಆದರೂ....... ಅವರು ಅವನ ಅಂತರಂಗವನ್ನು ಶೋಧಿಸಿದವರಂತೆ ನುಡಿದರು. ಆ ತಪ್ಪನ್ನು ಅವನ ಹೃದಯ ಅರಿತು, ತಿದ್ದಿಕೊಳ್ಳುವುದಕ್ಕೂ ಒಂದು ಪರಿಪಕ್ವಕಾಲ ಒದಗಿ ಬರಬೇಕು...... ಬರುತ್ತದೆ. ಆದರೆ ಎಂದು ಆ ಅಮೃತಗಳಿಗೆಯೊದಗಿಬರುತ್ತದೆಯೆಂಬುದು ಮಾತ್ರ ಮನುಷ್ಯನ ಬುದ್ಧಿಗೆ ತಿಳಿಯದ ರಹಸ್ಯ. ಪಾಪಕೂಪವನ್ನೇ ಪಾವನಗಂಗೆಯೆಂದು ಭ್ರಮಿಸಿರುವ ಅಜ್ಞಾನಿಯ ಅಂಧಕಾರ ತೊಲಗಿಸಲು ಒಂದು ದಿವ್ಯನೋಟವೇ ಸಾಕಾಗಬಹುದು. ಅಥವಾ ಒಂದು ದಿವ್ಯನುಡಿಯೇ ಸಾಕಾಗಬಹುದು. ಒಮ್ಮೆ ಕತ್ತಲೆ ಕಳೆಯಿತೆಂದರೆ, ಮತ್ತೆ ಅವನಿಗೆ ಅದರ ದರ್ಶನವಾಗುವುದಿಲ್ಲ. ಇದೇ ಆಧ್ಯಾತ್ಮಪ್ರಕಾಶದ ಮಹತ್ವ.

ಆಡಿ, ಬಳಲಿಬಂದ ಮಗುವನ್ನು ತೊಡೆಯಮೇಲಿಟ್ಟು, ಮಧುರವಾಗಿ ಜೋಗುಳ ಹಾಡಿ, ನಿದ್ರೆಗೆ ಜಾರಿಸುವ ತಾಯಿಯ

ಜೋಗುಳದಂತಿತ್ತು ಅವರ ಮೃದು, ಮೆಲು ಮಾತುಗಳು.

ನಿಧಾನವಾಗಿ ಅವನು ನುಡಿದ. "ಸ್ವಾಮಿಜೀ..... ನನ್ನ ಬದುಕೇ ವಿಚಿತ್ರ. ಹರಯದ ಕಾವಿನಲ್ಲಿ ತೆಗೆದುಕೊಂಡ ಆತುರದ ನಿರ್ಧಾರದಿಂದ ಹೆತ್ತತಾಯಿಯನ್ನು ಕಳೆದುಕೊಂಡೆ. ಹೋಗಲಿ...... ವೈವಾಹಿಕ ಜೀವನದಲ್ಲಿಯಾದರೂ ನೆಮ್ಮದಿಸಿಕ್ಕೀತೇ' ಎಂದರೆ ಅದೂ ಇಲ್ಲ. ನಾನು ಮಾಡಿದ್ದ ಮೂರ್ಖಕೆಲಸಕ್ಕೆ ಕೈಹಿಡಿದವಳನ್ನು ಕಾರಣಮಾಡಿ ಅವಳನ್ನು ದೂರಮಾಡಿದೆ. ಸೋಲು, ವಿಫಲತೆಗಳನ್ನು ಮರೆಯುವ ಯತ್ನದಲ್ಲಿ, ಹುಚ್ಚುಕುದುರೆಯಂತೆ ಸಿಕ್ಕಸಿಕ್ಕಲ್ಲಿ ಮನಸ್ಸು ಹರಿಯಬಿಟ್ಟ ಅವಿವೇಕಿಯಾದೆ, ಅದೇ ಸುಖದ ಪರಮಾವಧಿಯೆಂದು ಸಮರ್ಥಿಸಿಕೊಂಡೆ. ನನ್ನಂತಹವನಿಗೆ ಪ್ರಾಯಃಶ್ಚಿತ್ತವುಂಟೇ?......" ಮದಿರೆ, ಮಾನಿನಿಯರ ದಾಸನಾಗಿ ಮನುಷ್ಯತ್ವವನ್ನು ಮರೆತವನಿಗೆ...... ಇದುವರೆಗೂ ತಲೆಬಗ್ಗಿಸುವುದೆಂದರೇನೆಂದೇ ತಿಳಿಯದ ಚಕ್ರವರ್ತಿ ಅವರ ಮುಂದೆ ಆರ್ತನಾಗಿ ಬೇಡಿದ್ದ.

ಸ್ವಾಮೀಜಿ ಮೃದುವಾಗಿ ನಕ್ಕರು, "ಉಂಟು..... ಎಲ್ಲಾ ಪಾಪಗಳಿಗೂ ಪ್ರಾಯಃಶ್ಚಿತ್ತವುಂಟು ಪಶ್ಚಾತ್ತಾಪಕ್ಕಿಂತ ಬೇರೆ ಪ್ರಾಯಃಶ್ಚಿತ್ತವಿಲ್ಲ. ಮಗೂ.... ನಿನ್ನ ಅವಿವೇಕದ ಅರಿವು ನಿನಗಾದ ಕ್ಷಣದಿಂದಲೇ ನೀನು ಪಾಪಮುಕ್ತನಾಗಿದ್ದೀಯ. ಇನ್ನು ನಿನ್ನಿಂದ ಇಂತಹ ಅವಿವೇಕ ನಡೆಯುವುದಿಲ್ಲವೆಂದು ಮನಸ್ಸಿನಲ್ಲೇ ನಿರ್ಧಾರ ಮಾಡಿದೆಯೆಂದರೆ ಅದೇ ನಿನ್ನ ಪಾಲಿಗೆ ಪ್ರಾಯಃಶ್ಚಿತ್ತವಾಗುತ್ತದೆ.

ಮಗೂ..... ಈ ಚಿತ್ತಾನಂದನ ಪೂರ್ವಾಶ್ರಮದ ಕಥೆ ಕೇಳುವೆಯಾ? ಇದು ಕಲ್ಪಿತ ಕಥೆಯಲ್ಲ; ಇಲ್ಲಿ ನಾನು, ನೀನು ಕುಳಿತಿರುವಷ್ಟೇ ಸತ್ಯ.

ಅದೊಂದು ಅತೀ ಪ್ರಾಚೀನವಾದ,



ಕ್ಷೇತ್ರಮಹಿಮೆಯುಳ್ಳ ಪವಿತ್ರವಾದ ದೇವಾಲಯ. ಶ್ರೀಶಂಕರರು ಶ್ರೀಚಕ್ರಸ್ಥಾಪನೆಮಾಡಿ, ಹರಸಿದ ಸ್ಥಳವೆಂದು ಪ್ರತೀತಿಯಿರುವ ದೇಗುಲ. ಅಲ್ಲಿಗೆ ಹರಿಪ್ರಸಾದ ಬಂದಾಗ ಅವನು ಯಾವುದೇ ಗೊತ್ತುಗುರಿಯಿಲ್ಲದೆ, ಜೀವನದಲ್ಲಿ ಭರವಸೆಯನ್ನೇ ಕಳೆದುಕೊಂಡು, ಆತ್ಮಹತ್ಯೆಯ ಆಲೋಚನೆಯಿಂದಾಗಿಯೇ ಕಾಲಿಟ್ಟಿದ್ದ. ನಿರುದ್ಯೋಗ, ಕಿತ್ತುತಿನ್ನುವ ಬಡತನ, ಹೆತ್ತವರ, ಒಡಹುಟ್ಟಿದವರ ತಾತ್ಸಾರ, ತಿರಸ್ಕಾರಗಳಿಂದ ನೊಂದು ಜೀವನಕ್ಕೆ ಇತಿಶ್ರೀ ಹಾಡಲೆಂದೇ ಬಂದಿದ್ದ ಆ ನತದೃಷ್ಟ ಸುತ್ತಲೂ ಕಣ್ಣುತುಂಬುವ ಕಾಡುಮರಗಳು, ಗಿಡಗಂಟೆಗಳು, ಮಧ್ಯೆ ಎಲ್ಲರ ಅಲಕ್ಷ್ಯಕ್ಕೊಳಗಾಗಿ ಅರೆ ಜೀರ್ಣಾವಸ್ಥೆಯಲ್ಲಿರುವ ಈಶ್ವರ ದೇವಾಲಯ. ಹಿಂದೆಯೇ ಹರಿವ ಪ್ರಶಾಂತಳಾದ ಕಾವೇರಿ. ಹರಿಪ್ರಸಾದನಿಗೆ ಜೀರ್ಣಾವಸ್ಥೆಯಲ್ಲಿರುವ ಆ ದೇವಾಲಯ ತನ್ನ ಮನಃಸ್ಥಿತಿಯ ಪ್ರತಿಬಿಂಬವೆನಿಸಿತು.

ಅಂತಹ ಸ್ಥಿತಿಯಲ್ಲಿದ್ದ ದೇಗುಲಕ್ಕೂ ಆಗೊಮ್ಮೆ ಈಗೊಮ್ಮೆ ವಿಹಾರಾರ್ಥಿಗಳು ಬರುತ್ತಿದ್ದರು.

'ಒಂದು ಕಾಲದಲ್ಲಿ ವೈಭವವಾಗಿ ಪೂಜೆ-ಪುರಸ್ಕಾರ ನಡೆದ ಸ್ಥಳ ಇದು. ಈಗ ಏನೇನೂ ಇಲ್ಲವಾಗಿ ಹೋಯಿತು. ಸರ್ಕಾರದವರು

ಕೊಡುವ ಹಣ ಕರ್ಪೂರ, ನಂದಾದೀಪಕ್ಕೆ ಎಣ್ಣೆಗೇ ಖರ್ಚಾಗಿ ಹೋಗುತ್ತೆ. ಏನೋ ದೇವರ ಪೂಜೆ ನಿಲ್ಲಿಸಬಾರದು ಅಂತಾ ದಿನಾ ಬಂದು ಲಿಂಗದ ತಲೇ ಮೇಲೆ ಒಂದು ಕೊಡ ಕಾವೇರಿ ನೀರು ಅಭಿಷೇಕ ಮಾಡಿ, ಸುತ್ತಮುತ್ತ ಇರೋ ಕಾಡುಹೂಗಳನ್ನೇ ಏರಿಸಿ ತೃಪ್ತಿಪಡಬೇಕಾಗಿದೆ. ಬಂದವರು ಕೇಳಲಿ-ಬಿಡಲಿ..... ಸ್ಥಳ ಮಹಾತ್ಮೆಯನ್ನು ವಿವರಿಸಿ ಅವರು ಕೊಡುವ ಪುಡಿಗಾಸಿಗೇ ಕೈಚಾಚಿ ನಿಂತುಕೊಳ್ಳುವ ಅರ್ಚಕರನ್ನು ಕಂಡು ಮನಕರಗಿತು ಅಲ್ಲಲ್ಲೇ ಗಾರೆ ಕಿತ್ತುಹೋದ ಹೊರಗೋಡೆಗಳು, ಕಸತೆಗೆಯುವವರಿಲ್ಲದೆ ಬಂದವರ ಮುಖಕ್ಕೇ ಕಿವುಚುವಂತಿದ್ದ ಜೇಡರ ಬಲೆಗಳು, ಅದರ ಮಧ್ಯದಲ್ಲೇ ಪಟಪಟನೆ ಹಾರಾಡುತ್ತಾ ಭಯವನ್ನು ಹುಟ್ಟುಹಾಕುವ ರಕ್ಕಸಬಾವಲಿಗಳು.....ಸ್ಮಶಾನ ಮೌನ ಆವರಿಸಿಕೊಂಡು, ಭಗ್ನತೆಯ ಸಾಕಾರಮೂರ್ತಿಯಂತಿರುವ ಆ ದೇವಸ್ಥಾನದಲ್ಲಿ ಹೆಚ್ಚು ಹೊತ್ತು ನಿಲ್ಲುವ ಮನಸ್ಸಾಗದೆ ಈಚೆಗೆ ಬಂದಿದ್ದ ಹರಿಪ್ರಸಾದ. ಅಲ್ಲಿಗೆ ಬಂದಿದ್ದ ಒಂದಿಬ್ಬರು ಭಕ್ತಾದಿಗಳೂ ಖಾಲಿಯಾಗಿ, ಅರ್ಚಕರೂ ದೇವಸ್ಥಾನದ ಬಾಗಿಲು ಮುಚ್ಚಿ ಹೊರಟುಹೋದ ಮೇಲೆ ಅವನು ಏಕಾಂಗಿಯಾಗಿ ಅಲ್ಲೇ ನಿಂತಿದ್ದ. ಕಾಲುಗಳು ಯಾಂತ್ರಿಕವಾಗಿ ದೇವಸ್ಥಾನವನ್ನು ಸುತ್ತುವರಿದ ಗಿಡಗಂಟಿಗಳತ್ತ ಹೆಜ್ಜೆ ಹಾಕಿದವು. ಒಂದೈದುನಿಮಿಷಗಳೂ ಕಳೆದಿತ್ತೋ ಇಲ್ಲವೋ..... ಆ ನೀರವ ವಾತಾವರಣವನ್ನು ಕಲಕುವಂತೆ ಎತ್ತಲಿಂದಲೋ ಕ್ಷೀಣದನಿಯೊಂದು ಕೇಳಿಸಿತ್ತು. ಕಿವಿಗೊಟ್ಟು ಆಲಿಸಿದ...... ನರಳಿಕೆಯ ಧ್ವನಿಯೆನಿಸಿತು. ಪೂರ್ಣ ಏಕಾಂತವನ್ನು ಬಯಸಿಬಂದವನಿಗೆ ಮತ್ತೊಂದು ಜೀವದ ಇರುವಿಕೆ ಅಸಹನೀಯವೆನಿಸಿತು. ಅದೇನು ನರಳಿಕೆಯ ಧ್ವನಿಯೇ ಅಥವಾ ತನ್ನ ಭ್ರಮೆಯೋ? ಎಚ್ಚರಿಕೆಯಿಂದ ಮತ್ತೊಮ್ಮೆ ಆಲಿಸಿದ. ಹೌದು..... ನಿಜಕ್ಕೂ ನರಳಿಕೆಯ ಧ್ವನಿಯೇ..... ಮನುಷ್ಯರದೇ ಧ್ವನಿ...... ಕುತೂಹಲದಿಂದ ಅದರ ಜಾಡು ಹಿಡಿದು ಹೊರಟ ಹರಿಪ್ರಸಾದನಿಗೆ ಈಗ ಅಯ್ಯೋ.... ಅಮ್ಮಾ.... ಎನ್ನುವ ದನಿ ಹತ್ತಿರವಾಯಿತು...... ಅದೇ ತಾನೇ ಪ್ರಜ್ಞೆ ಮರಳಿದಂತೆನಿಸುತ್ತಿದ್ದ ಆ ವ್ಯಕ್ತಿಯ ಬಾಯಿಂದ ಬರುತ್ತಿದ್ದ ಶಬ್ದ ಎರಡೇ..... ಅಯ್ಯೋ..... ಅಮ್ಮಾ... ಸುತ್ತೆಲ್ಲಾ ಬಾಯಿತೆರೆದು ಬಿದ್ದಿದ್ದ ಸೂಟ್‌ಕೇಸಿನಿಂದ ಚೆಲ್ಲಾಪಿಲ್ಲಿಯಾಗಿ ಹರಡಿದ್ದ ಬಟ್ಟೆ, ಬರೆಗಳು..... ಕಾಗದ ಪತ್ರಗಳು, ಸಣ್ಣದೊಂದು ದಿನಚರಿ ಪುಸ್ತಕ..... ಇನ್ನೂ ಹತ್ತಿರ ಬಂದು ಶೋಧನೆಯ ದೃಷ್ಟಿಯನ್ನು ಬೀರಿದಾಗ ಅವನೆದೆ ಝಲ್ಲೆಂದಿತು. ಕಣ್ಣು ಕೋರೈಸಿತು.... ಬಟ್ಟೆ ಬರೆಗಳ ನಡುವೆ ತೆಳುವಾದ ಪ್ಲಾಸ್ಟಿಕ್ ಕವರಿನಲ್ಲಿ ಸುತ್ತಿಟ್ಟಿದ್ದ ನೋಟಿನಕಂತೆಗಳು..... ತಾನು ಹಿಂದೆಂದೂ.... ಮುಂದೂಕೂಡಾ ಕಾಣಲಸಾಧ್ಯವಾದ ಅಗಾಧ ಮೊತ್ತದ ಹಣ....

ಒಮ್ಮೆ ಆ ವ್ಯಕ್ತಿಯ ಮುಖವನ್ನು ಗಮನಿಸಿದ. ಉಸಿರು ಆಡುತ್ತಿದೆ. ಪ್ರಜ್ಞೆ ಕೊಂಚ ಬಂದಂತಿದ್ದರೂ ಯಾರನ್ನೂ ಗುರುತಿಸುವುದಾಗಲೀ, ದೃಷ್ಟಿಯಿಟ್ಟು ನೋಡಿ, ಮಾತನಾಡುವಷ್ಟು ಶಕ್ತಿ ಬಂದಿಲ್ಲ. ಈ ಕ್ಷಣವೇ ಚಿಕಿತ್ಸೆ ದೊರೆತರೆ ಬದುಕಿಯಾನು....

ಆದರೆ.... ಈ ಅವಕಾಶ...... ತನ್ನ ಭವಿಷ್ಯವನ್ನೇ ಸಂಪೂರ್ಣವಾಗಿ ಬದಲಾಯಿಸಬಲ್ಲ ಈ ಹಣದ ಆಕರ್ಷಣೆ..... ಒಮ್ಮೆ ಸುತ್ತಮುತ್ತ ಗಮನಿಸಿದ. ಊಹೂ...... ಯಾರೂ ಇಲ್ಲ..... ತಾನು.... ಇನ್ನು ಸ್ವಲ್ಪ ಹೊತ್ತಿಗೇ ಈ ಲೋಕವನ್ನೇ ಬಿಟ್ಟು ಹೋಗುವಂತಿರುವ ಈ ವ್ಯಕ್ತಿ......

ಹೆಚ್ಚು ಕಾಲ ಮನಸ್ಸಿನ ದ್ವಂದ್ವ ನಡೆಯಲಿಲ್ಲ. ಹೇಗಾದರೂ ಮಾಡಿ ತಾನು ಬದುಕಬೇಕೆಂಬ ಬಯಕೆ ಅವನನ್ನು ರಾಕ್ಷಸೀಕೃತ್ಯಕ್ಕೆ ಪ್ರವೃತ್ತಗೊಳಿಸಿತು. ಸ್ವಾರ್ಥ ಮೇಲುಗೈ ಪಡೆಯಿತು. ಕೆಲ ನಿಮಿಷಗಳಲ್ಲೇ ಆ ವ್ಯಕ್ತಿಯ ಬಾಯಿಂದ ಹೊರಡುತ್ತಿದ್ದ ಕ್ಷೀಣದನಿಯೂ ನಿಂತುಹೋಯಿತು. ದೇಹ ನಿಶ್ಚೇಷ್ಟಿತವಾಯಿತು. ಸುತ್ತ ಮುತ್ತ ಚೆಲ್ಲಾಪಿಲ್ಲಿಯಾಗಿ

ಬಿದ್ದಿದ್ದ ಮಿಕ್ಕ ವಸ್ತುಗಳೆಲ್ಲವನ್ನೂ ಒಂದು ಪೊದೆಯ ಸಂದಿಗೆ ನೂಕಿ ಅಲ್ಲಿಂದ ಕಾಲ್ತೆಗೆದಿದ್ದ.

ಹರಿಪ್ರಸಾದನ ಬದುಕು ಬೇರೊಂದೇ ತಿರುವನ್ನು ಪಡೆಯಿತು. ಹರಿಪ್ರಸಾದ ಹರಿಭಾಯಿ ಪಟೇಲನಾದ. ಕಾಣದ ಊರಿಗೆ ಹೋಗಿ ನೆಲೆನಿಂತು, ಗಟ್ಟಿಯಾಗಿ ತಳವೂರಿಬಿಟ್ಟ. ಗೆಲವು.... ಗೆಲುವು.... ಮುಟ್ಟಿದ್ದೆಲ್ಲಾ ಚಿನ್ನವಾಯಿತು ಹಣ ಹೊಳೆಯಾಗಿ ಅವನೆಡೆಗೆ ಹರಿದು ಬಂತು. ಹಿಂದಿನ ಸ್ಥಿತಿಯನ್ನು ಸಂಪೂರ್ಣವಾಗಿ ಮರೆತು, ತಾನು ಬದುಕಿನಲ್ಲಿ ಏನೇನು ಅನುಭವಿಸಬೇಕೆಂದು ಕೊಂಡಿದ್ದನೋ ಎಲ್ಲವನ್ನೂ ಸಮೃದ್ಧವಾಗಿ ಸೂರೆ ಹೊಡೆದ. ಸುಖದ ಅಮಲಿನಲ್ಲೇ ಓಲಾಡಿದ. ಓಕರಿಕೆ ಬರುವಷ್ಟು ಅನುಭವಿಸಿದ.

ಆದರೆ..... ಆದಿನ.... ತನ್ನ ಮಾಮೂಲಿನ ವಹಿವಾಟನ್ನು ಮುಗಿಸಿ ಮನೆಗೆ ಮರಳುತ್ತಿದ್ದ. ಏನೋ ಸಮಸ್ಯೆಯಾಗಿ ಅವನ ಕಾರು ಒಂದೆಡೆ ನಿಂತಿತು. ಆಕಸ್ಮಿಕವೆಂಬಂತೆ ಅವನ ಗಮನ ಅತ್ತಹೋಯಿತು. ಅದು ಯಾವುದೋ ಧಾರ್ಮಿಕ ಕಾರ್ಯಕ್ರಮ ನಡೆಯುತ್ತಿದ್ದ ಸ್ಥಳ. ಸಾವಿರಾರು ಜನ ಆಸಕ್ತರು ಶ್ರದ್ಧೆಯಿಂದ ಪ್ರವಚನಕಾರರ ಮಾತುಗಳನ್ನು ಆಲಿಸುತ್ತಿದ್ದಾರೆ. ಪ್ರವಚನಕಾರರು ಪುಣ್ಯಕ್ಷೇತ್ರಗಳ ಮಹಿಮೆಯನ್ನು ವರ್ಣಿಸುತ್ತಾ.....

'ಅನ್ಯಕ್ಷೇತ್ರೇ ಕೃತಂಪಾಪಂ| ಪುಣ್ಯಕ್ಷೇತ್ರೇ ವಿನಶ್ಯತಿ|
ಪುಣ್ಯಕ್ಷೇತ್ರೇ ಕೃತಂಪಾಪಂ| ವಜ್ರಲೇಪೋ ಭವಿಷ್ಯತಿ|

"ಬೇರೆಕಡೆಗಳಲ್ಲಿ ಮಾಡಿದ ಪಾಪಗಳು ಪುಣ್ಯಕ್ಷೇತ್ರಕ್ಕೆ ಬಂದು ಗುರುದೇವತಾ ದರ್ಶನ ಮಾಡುವುದರಿಂದ ವಿನಾಶ ಹೊಂದುತ್ತವೆ. ಆದರೆ ಪುಣ್ಯಕ್ಷೇತ್ರಗಳಲ್ಲಿ ಮಾಡುವ ಪಾಪಕರ್ಮಗಳು ಜನ್ಮಜನ್ಮಾಂತರಕ್ಕೂ ವಜ್ರಲೇಪದಂತೆ ಅಂಟಿಕೊಳ್ಳುತ್ತದೆ."

ಅಷ್ಟೇ.... ಅದನ್ನು ಮನಸ್ಸಿಟ್ಟು ಕೇಳಿದಾಕ್ಷಣದಿಂದಲೇ ಅವನ ಮನಸ್ಸಿನಲ್ಲಿ ವಿಚಿತ್ರವಾದ, ವಿಶಿಷ್ಟವಾದ ಪರಿಣಾಮ ಮೂಡಿಸಿತ್ತು. ಎಂತಹುದೋ ಯಾತನೆ ಎದೆಯನ್ನು ಹಿಂಡಿ, ಹಿಂಡಿ ಹಾಕುತ್ತಿದೆಯೆನ್ನಿಸಿತ್ತು. ಒಂದು ಕ್ಷಣ ನೆಮ್ಮದಿಯಾಗಿ ನಿಲ್ಲಲೂ, ಕೂರಲೂ ಆಗದ ಚಡಪಡಿಕೆ ಪ್ರಾರಂಭವಾಗಿಬಿಟ್ಟಿತ್ತು. ಎಲ್ಲಿಲ್ಲಿ ನಿಂತರೂ, ಕೂತರೂ ಅದೇ ಸಾಲುಗಳು..... ಅನ್ಯಕ್ಷೇತ್ರೇ ಕೃತಂ ಪಾಪಂ.... ಕಿವಿಯಲ್ಲಿ ಅನುರಣಿಸಿ, ಮನಸ್ಸು ಸಂಪೂರ್ಣವಾಗಿ ಪಾಪಪ್ರಜ್ಞೆಗೆ ಒಳಗಾಗಿ....... ಇಡೀ ತನ್ನ ಬದುಕು ದೋಷಮಯವಾಗಿ ಹೋದಂತೆನಿಸಿ, ಅದುವರೆಗೂ ತಾನು ಅನುಭವಿಸಿದ ಸುಖದ ಮೊತ್ತವೆಲ್ಲಾ ಸೊನ್ನೆಯಾಗಿ ಕಂಡಿತ್ತು.

ಆ ಮಾತುಗಳಲ್ಲಿ ಅದೆಂತಹ ಶಕ್ತಿ ಅಡಗಿತ್ತೋ...... ಹರಿಪಟೇಲನ ಮನಸ್ಸು ಸಂಪೂರ್ಣವಾಗಿ ಪರಿವರ್ತನೆಗೆ ಒಳಗಾಗಿ ಬಿಟ್ಟಿತ್ತು. ಪರಿವರ್ತನೆಯಾದ ಮನಸ್ಸಿಗೆಂತಹ ಸಂಕಲ್ಪ ಶಕ್ತಿ ಬಂದಿತ್ತೆಂದರೆ, ಆ ಕ್ಷಣದಲ್ಲೇ ಅವನು ತನ್ನದೆಂದುಕೊಂಡಿದ್ದ ಸರ್ವಸ್ವವನ್ನೂ ತ್ಯಜಿಸಿಬಿಟ್ಟಿದ್ದ.

ಹರಿಪ್ರಸಾದ, ಹರಿಭಾಯಿಪಟೇಲನಾಗಿ ಮತ್ತೆ ಚಿತ್ತಾನಂದನಾದ. ಮನುಷ್ಯನ ಬದುಕದೆಷ್ಟು ವಿಚಿತ್ರ ನೋಡು.... ಹರಿಪ್ರಸಾದನಾಗಿದ್ದಾಗ ಎಷ್ಟು ದಟ್ಟದರಿದ್ರನೆಂದುಕೊಂಡಿದ್ದನೋ....
ಹರಿಭಾಯಿಪಟೇಲನಾದಾಗ ಕೂಡಾ ಅಷ್ಟೇ ದರಿದ್ರದ ಮನಸ್ಥಿತಿಯನ್ನು ಹೊಂದಿದ್ದನೆಂದರೆ ವಿಪರ್ಯಾಸವಲ್ಲವೇ?

ಮಗೂ.... ನಲವತ್ತೂ ವರ್ಷಗಳ ಅವಧಿಯಲ್ಲಿ, ನಾನು ಮಾಡಿದ ಪಾಪಕಾರ್ಯಕ್ಕೆ ಪ್ರಾಯಃಶ್ಚಿತ್ತವಾಗಿ, ಪಶ್ಚಾತ್ತಾಪದ ಶುದ್ಧಗಂಗೆಯಲ್ಲಿ ಮಿಂದು ಪರಿಶುದ್ಧನಾಗಿದ್ದೇನೆ.

"ಮಗೂ..... ಈಗ ಹೇಳು..... ನಿನ್ನ ಪಾಪದ ಮೊತ್ತವೇ ಅಧಿಕವೆನ್ನುವಿಯಾ?

ಚಕ್ರವರ್ತಿ ಶಿಲೆಯಂತೆ ಕುಳಿತಿದ್ದ. ನಿಜವೇ?..... ನಿಜವೇ?...... ತನ್ನ ಮುಂದೆ ಕುಳಿತಿರುವ ಈ ಭವ್ಯವ್ಯಕ್ತಿತ್ವದ ತೇಜೋಮೂರ್ತಿ..... ಜ್ಞಾನವೃದ್ಧ

ವಯೋವೃದ್ಧ, ಅನುಭವ ವೃದ್ಧ ಶಾಂತಮೂರ್ತಿ ಸ್ವಾಮಿಜಿ......

ಪೂರ್ವಾಶ್ರಮದಲ್ಲಿ......ಹಾಗಿದ್ದನೇ?

ಅವನ ಗಲಿಬಿಲಿಯನ್ನು ಅರ್ಥಮಾಡಿಕೊಂಡವರಂತೆ ಅವರು ನುಡಿದರು. "ಹೌದು ಮಗೂ..... ಇದು ಸತ್ಯ..... ನಾನು, ನೀನು ಉಸಿರಾಡುತ್ತಿರುವಷ್ಟೇ ಸತ್ಯ. ನಿನ್ನ ಮನಸ್ಸನ್ನು ಆಳವಾಗಿ ಕಡೆದು ನೋಡು. ನೀನು ಇದುವರೆಗೂ ಅನುಭವಿಸಿದ, ಪರಮಸುಖವೆಂದು ಭಾವಿಸಿದ ಸಾಧನಗಳೆಲ್ಲವೂ ಧೂಳಿನ ಕಸಕ್ಕಿಂತಲೂ ಕಡೆಯೆನ್ನಿಸಿದ ಕ್ಷಣ ನಿನ್ನ ಮನಸ್ಸು ನೆಲೆಯನ್ನು ಕಂಡುಕೊಳ್ಳುತ್ತದೆ. ಶಾಂತವಾಗುತ್ತದೆ. ಆತುರದ ನಿರ್ಧಾರ ಎಂದಿಗೂ ವಿವೇಕವಲ್ಲ. ನಿನ್ನ ಮನಸ್ಸು ಪರಿಪಕ್ವ ಸ್ಥಿತಿಯನ್ನು ಮುಟ್ಟಿಲ್ಲವೆಂದಾದರೆ, ನಿಧಾನವಾಗಿ ಅದನ್ನು ಹದಗೊಳಿಸು. ಸಂಸಾರದಲ್ಲಿದ್ದುಕೊಂಡೇ ಸನ್ಯಾಸಜೀವನವನ್ನು ನಡೆಸುವುದು ಕಷ್ಟವಾದರೂ ಸಾಧ್ಯ. ಮಗೂ....... ನಿನ್ನ ಬದುಕು ನಿನ್ನದೇ...... ಇನ್ನಾದರೂ ಮನಸ್ಸಿನ ಹೋರಾಟಕ್ಕೆ ಮಂಗಳಹಾಡಿ ಸಾರ್ಥಕ ಬದುಕನ್ನು ನಡೆಸು. ನಿನಗೆ ಶುಭವಾಗಲಿ.

ಅವರು ಉಪದೇಶಿಸುವಂತೆ ಹೋರಾಟವನ್ನು ನಿಲ್ಲಿಸುವುದು ಅಷ್ಟು ಸುಲಭವಲ್ಲವೆನಿಸಿತ್ತು. ಅವರನ್ನು ಭೇಟಿಮಾಡಿ ಬಂದಂದಿನಿಂದ ಮನಸ್ಸಿನ ಹೋರಾಟ ಅವ್ಯಾಹತವಾಗಿ ನಡೆದೇ ಇದೆ. ಈ ಹೋರಾಟಕ್ಕೆ ಆದಷ್ಟು ಬೇಗ ಅಂತ್ಯ ಬರೆದು ಚಿತ್ತಾನಂದರ ಸಾನ್ನಿಧ್ಯವನ್ನು ಸೇರಬೇಕೆಂಬ ಬಯಕೆಯೇ ತೀವ್ರವಾಗಿದೆಯೆನಿಸುತ್ತಿದೆ. ಇಲ್ಲಿ ತನಗಿರುವ ಬಂಧನವಾದರೂ ಯಾವುದು? ಹೆಂಡತಿ, ದಾಂಪತ್ಯ ಎಂಬ ಪದಗಳೆಲ್ಲಾ ಎಂದೋ ಅರ್ಥವನ್ನು ಕಳೆದುಕೊಂಡಿವೆ. ಇನ್ನು ಮಕ್ಕಳು ಇಲ್ಲವೇ ಇಲ್ಲ. ಚಿತ್ರರಂಗದ ನಂಟೂ ಮೃತಕವೆಂದೇ ಮನಸ್ಸು ಒಪ್ಪಿಕೊಂಡುಬಿಟ್ಟಿದೆ.

### ಚೆಲುವೆ

ಎದೆಯ ವೃಕ್ಷದಡಿ
ತೂಗಾಡುತ್ತಿದ್ದ ತಾಳಿ
----'ಪ್ರೇಮದ ಸಂಕೇತ
ನಾನೊ ಅಲ್ಲ ನೀನೊ?'
ಅಂದಾಗ-
ನಾಚಿ ನೀರಾದಳು ಚೆಲುವೆ!



• ಎ. ಪ್ರಮೀಳಾ ಕರುಂಬಯ್ಯ

ಲಕ್ಷಗಟ್ಟಲೆ ಹಣ, ಭವ್ಯಬಂಗಲೆ, ಕಾರು, ಪ್ರತಿಷ್ಠಿತಜೀವನ, ಅಭಿಮಾನದ ಮಹಾಪೂರ...... ಓಹ್! ಯಾವುದೂ ಚಿತ್ತಾನಂದರ ಆಶ್ರಮದಲ್ಲಿ, ಅವರ ಸಾನ್ನಿಧ್ಯದಲ್ಲಿ ಸಿಗುವ ಆನಂದಾನುಭೂತಿಗೆ ಎಳ್ಳುಕಾಳಿನಷ್ಟು ಸಮನಲ್ಲವೆಂದೇ ಅನಿಸುತ್ತಿದೆ.

ಹೌದು! ಅದೇ ಸರಿ..... ಮನಸ್ಸು ದೃಢವಾದ ನಿರ್ಧಾರ ತಳೆದಾಗ ಎಷ್ಟೋದಿನಗಳ ಮಾನಸಿಕ ತುಮುಲವೆಲ್ಲಾ ಒಂದೇ ಕ್ಷಣದಲ್ಲಿ ಕರಗಿ, ಬಿಡುಗಡೆಯ ಭಾವವನ್ನು ಅನುಭವಿಸಿತು. ಅನಿರ್ವಚನೀಯವಾದ, ಅತೀತವಾದ ಆನಂದದಲ್ಲಿ ಮುಳುಗಿತು. ಕಡೆಯದಾಗಿ ಚರಿತ್ರಾಳಿಗೆ ತನ್ನ ನಿರ್ಧಾರವನ್ನು ತಿಳಿಸಬೇಕೆನ್ನಿಸಿತು. ಆದರೆ...... ಆದರೆ.... ಉಹೂ...... ಅವಳೊಡನೆ ಏಕೋ ಮಾತನಾಡಲಾರೆನೆನ್ನಿಸಿದಾಗ ಹತ್ತಿರದಲ್ಲೇ ಇದ್ದ ಪೇಪರು, ಪೆನ್ನು ತೆಗೆದುಕೊಂಡ.

ಚರಿತ್ರಾ ತಾಯಿಗೆ,

ಭಕ್ತಿಪೂರ್ವಕ ಪ್ರಣಾಮಗಳು. ನಾನು ನಿನಗೆ ಬದುಕಿನಲ್ಲಿ ನೀಡಿದ ನೋವು, ನಿರಾಸೆ, ತಿರಸ್ಕಾರಗಳನ್ನು ನುಂಗಿ' ಕ್ಷಮಯಾಧರಿತ್ರೀ' ಎಂಬುದನ್ನು ಸಾರ್ಥಕ ಪಡಿಸಿದೆ. ನಿನ್ನ ಪತಿಯೆಂದು ಹೇಳಿಕೊಳ್ಳುವ ಅಧಿಕಾರವಾಗಲೀ, ಅರ್ಹತೆಯಾಗಲೀ ನನಗಿಲ್ಲ. ಆದರೂ...... ತಡವಾಗಿಯಾದರೂ ನನಗೆ ನಿನ್ನ ಹೃದಯವೈಶಾಲ್ಯತೆಯ ಅರಿವಾಗಿದೆ. ಇಂದು ನಾನು ನಿನ್ನಲ್ಲಿ ಕಾಣುತ್ತಿರುವುದು ಪ್ರೇಮಮಯಿ ತಾಯಿಯ

ಪ್ರತಿಬಿಂಬವನ್ನು, ಅದಕ್ಕೆಂದೇ ನಿನ್ನನ್ನು ಚರಿತ್ರಾ ತಾಯಿಯೆಂದೇ ಸಂಬೋಧಿಸಿದ್ದೇನೆ. ನೀನು ಅನೇಕ ಅನಾಥ ಮಕ್ಕಳಿಗೆ ತಾಯಿಯಾಗಿ ನಿನ್ನ ಬದುಕನ್ನು ಸಾರ್ಥಕಗೊಳಿಸಿಕೊಂಡೆ. ಆದರೆ ನಾನು..... ಊಹೂ..... ಬೇಡಾ..... ಅದನ್ನು ನೆನಸಿಕೊಂಡರೂ ನನಗೆ ನನ್ನ ಮೇಲೇ ಅಸಹ್ಯ ಹುಟ್ಟಿಬಿಡುತ್ತದೆ. ಆದರೆ..... ನನ್ನ ಅಂತರ್ಯದ ಹೋರಾಟವನ್ನು ಅರ್ಥಮಾಡಿಕೊಂಡಿದ್ದೀಯಾದರೆ, ನನ್ನನ್ನು ಕ್ಷಮಿಸುವುದು ನಿನಗೆ ಸುಲಭವಾಗುತ್ತದೆ. ಏಕೆಂದರೆ ನೀನು ಕ್ಷಮಯಾಧರಿತ್ರಿ.

ಇಂದು ನನ್ನ ಬಾಳಿಗೆ ಅಮೃತಘಳಿಗೆಯೊದಗಿದೆ. ನನ್ನ ದೀರ್ಘಕಾಲದ ಮಾನಸಿಕ ತೊಳಲಾಟಕ್ಕೆ ಅಂತ್ಯ ದೊರಕಿದೆ. ಇದುವರೆಗೂ ನನ್ನದೆಂದುಕೊಂಡಿದ್ದ, ಸಮಸ್ತ ಆಸ್ತಿಪಾಸ್ತಿಯನ್ನು ನಿನಗೆ ಒಪ್ಪಿಸುತ್ತಿದ್ದೇನೆ. ಏಕೆಂದರೆ ಅದನ್ನು ನೀನು ಸಾರ್ಥಕವಾಗಿ ಉಪಯೋಗಿಸುವೆಯೆಂಬ ಭರವಸೆ ನನಗಿದೆ.

ಚರಿತ್ರಾ ತಾಯಿ..... ನಾನೊಬ್ಬ ಮಹಾಸಾಧಕನಾಗಲೀ, ಸನ್ಯಾಸಿಯಾಗಬೇಕೆಂದಾಗಲೀ ಖಂಡಿತಾ ಈ ನಿರ್ಧಾರ ತೆಗೆದುಕೊಂಡಿಲ್ಲ. ಕೇವಲ ಮನಃಶ್ಶಾಂತಿಯನ್ನು ಪಡೆಯುವ ದಿಕ್ಕಿನಲ್ಲಿ ಈ ಮೊದಲ ಹೆಜ್ಜೆಯನ್ನಿಡುತ್ತಿದ್ದೇನಷ್ಟೇ. ನೀನು ಸಂಸಾರದಲ್ಲಿದ್ದೇ ಪಡೆದದ್ದನ್ನು ನಾನು ಚಿತ್ತಾನಂದರ ಸಾನ್ನಿಧ್ಯದಲ್ಲಿ ಪಡೆಯುವ ಪ್ರಯತ್ನ ಮಾಡುತ್ತಿದ್ದೇನೆ. ನಿನ್ನ ನಿಃಸ್ವಾರ್ಥ ಸೇವೆ ನೂರಾರು...... ಸಾವಿರಾರು ಅನಾಥ ಮಕ್ಕಳಿಗೆ ಲಭ್ಯವಾಗಲೀ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ಇಷ್ಟು ದಿನ ನನ್ನ ಬದುಕಿನ ಅವಿಭಾಜ್ಯ ಅಂಗವಾಗಿದ್ದ ಚಿತ್ರರಂಗಕ್ಕೂ, ಚಿತ್ರರಂಗದ ಅಭಿಮಾನಿಗಳಿಗೂ, ಹಿತೈಷಿಗಳಿಗೂ, ಆತ್ಮೀಯರಿಗೂ ಈ ಚಕ್ರವರ್ತಿಯ ಅಂತಿಮ ವಿದಾಯಗಳು.

ಮಧ್ಯರಾತ್ರಿಯಲ್ಲಿ ಬರೆದು ಪೂರೈಸಿದ ಪತ್ರವನ್ನು ಮತ್ತೊಮ್ಮೆ ಓದಿ, ಚರಿತ್ರಾತಾಯಿಯ ಕೋಣೆಯತ್ತ ಹೆಜ್ಜೆಹಾಕಿದ ಚಕ್ರವರ್ತಿ. ಚರಿತ್ರಾ ಗಾಢ ನಿದ್ರೆಯಲ್ಲಿದ್ದಳು. ಅದುವರೆಗೂ ಅಪರಿಚಿತವೆಂಬಂತಿದ್ದ, ಅವಳ ಪ್ರಶಾಂತ ಮುಖವನ್ನು ಕಣ್ತುಂಬಾ ತುಂಬಿಕೊಂಡು, ಪತ್ರವನ್ನು ಮೇಜಿನ ಮೇಲಿರಿಸಿ ಅವಳ ಕಾಲುಗಳಿಗೊಮ್ಮೆ ಭಕ್ತಿಯಿಂದ ನಮಸ್ಕರಿಸಿ, ಹೊರನಡೆದ ಚಕ್ರವರ್ತಿ. ●

## ಪಳೆಯುಳಿಕೆಯಲ್ಲಿ ಕಂಡ ದೈತ್ಯಹಕ್ಕಿ

'ಎಪಿಯಾರ್ನಿಸ್ ಮಾಕ್ಸಿಮಸ್' ಎಂಬುದು ಮಡಗಾಸ್ಕರ ದ್ವೀಪದ ಅತಿ ಎತ್ತರದ ಹಕ್ಕಿಯೆನಿಸಿದೆ. ಇದು ಸುಮಾರು ಹತ್ತು ಅಡಿ ಎತ್ತರವಿದ್ದು ಅರ್ಧ ಟನ್‌ನಷ್ಟು ತೂಕ ಹೊಂದಿದೆ. ಪಕ್ಷಿ ವಿಜ್ಞಾನಿ ಲೂಯಿಸ್ ಮಾರ್ಡನ್ ಇದರ ಎರಡು ಅಡಿ ಉದ್ದವಿರುವ ಮೊಟ್ಟೆಯ ಪಳೆಯುಳಿಕೆಯನ್ನು ಕಂಡು ಹಿಡಿದಿದ್ದಾನೆ. 16ನೇ ಶತಮಾನದಿಂದ ವಿನಾಶದಂಚಿಗೆ ತಲುಪಿದ ಈ ಪಕ್ಷಿ ಈಗ ಇಲ್ಲವಾಗಿದೆ. ಸಿಕ್ಕ ಮೊಟ್ಟೆಯಲ್ಲಿ ಭ್ರೂಣದ ಅಂಶವನ್ನು ಕಂಡು ಹಿಡಿದಿದ್ದಾರೆ. ಪಕ್ಷಿಯ ಬೆಳವಣಿಗೆಯ ಮೂರನೇ ಹಂತದಲ್ಲಿ ಅದು ನಾಶವಾಗಿದ್ದೆಂದು ಸಂಶೋಧಿಸಿದ್ದಾರೆ. ಸಿ.ಟಿ. ಸ್ಕ್ಯಾನ್ ಪರೀಕ್ಷೆಯಿಂದ ಅದರ ಕಾಲು, ಪಾದ, ಕಿಬ್ಬೊಟ್ಟೆಯ ಕೆಳಭಾಗ(Pelvis)ವನ್ನು, ಕೊಕ್ಕಿನ ಭಾಗವನ್ನು ನೋಡಬಹುದಾಗಿದೆ.

• ಮೋಹನ ಗ. ಹೆಗಡೆ,

ವಿದ್ಯಾರ್ಥಿ ಅಂಕಣ



# ಒಳ್ಳೆಯ ನಗು-ರೋಗಕ್ಕೆ ಪರಿಹಾರ

**ಡಾ.** ಜೋಕಿಮ್ ಗಾರ್ಡ್‌ಮನ್, ಜರ್ಮನಿಯ ಚಿಕ್ಕಮಕ್ಕಳ ರೋಗ ತಜ್ಞ, ತಮ್ಮ ಔಷಧಿ ಚೀಟಿಯಲ್ಲಿ 'ನಕ್ಕು ರೋಗ ವಿಮುಕ್ತರಾಗಬೇಕು ಹಾಗೂ ಆನಂದ ಅನುಭವಿಸಬೇಕು' ಎಂದು ಬರೆಯುತ್ತಿದ್ದರು. ಸಂತೋಷದಿಂದಿರಲು ನಾವು ನಗಬೇಕು ಹಾಗೂ ಹಾಸ್ಯಪ್ರವೃತ್ತರಾಗಬೇಕು ಎಂದವರು ಅಭಿಪ್ರಾಯಪಡುತ್ತಾರೆ.



ಇಂದು ಜರ್ಮನಿಯಲ್ಲಿ ಸುಮಾರು 20ಕ್ಕೂ ಹೆಚ್ಚು ವೃತ್ತಿಪರ ಹಾಸ್ಯಾಲಯ ಹಾಗೂ ವಿದೂಷಕ ಗೃಹಗಳು ಇವೆ. ಇಲ್ಲಿ ಹಾಸ್ಯ, ನಕಲಿ ಹಾಗೂ ಕೋಡಂಗಿತನವನ್ನು ಪ್ರಚೋದಿಸಿ ರೋಗ ಪರಿಹಾರ ಪ್ರಯೋಗವೇ ಅವುಗಳ ಉದ್ದೇಶ.

ಇತ್ತೀಚಿನ ವರ್ಷಗಳಲ್ಲಿ ವೈದ್ಯರೊಬ್ಬರೇ ಈ ದೆಸೆಯಲ್ಲಿ ವಿಚಾರ ಮಾಡುತ್ತಿಲ್ಲ. ಹಾಸ್ಯದ ಬಗ್ಗೆ ವೈಜ್ಞಾನಿಕ ಅಭ್ಯಾಸವು ನಿರಂತರವಾಗಿ ನಡೆದಿದೆ. ಅಭ್ಯಾಸವು ಇನ್ನೂ ಶೈಶವಾವಸ್ಥೆಯಲ್ಲಿದ್ದರೂ, ಅದರಿಂದಾಗುವ ಪ್ರಯೋಜನ ಅಸಂಖ್ಯಾತ ವೈದ್ಯ ಹಾಗೂ ಮಾನಸಿಕ ತಜ್ಞರಿಂದ ಮಾನ್ಯತೆ ಪಡೆದಿದೆ.

ಒಂದು ಸಣ್ಣ ನಗೆ ಬುಗ್ಗೆಯು ಎಷ್ಟೋ

# ಜ್ಞಾನನಿಧಿ

ಜಟಿಲವಾದ ವಿಷಯ ಅಥವಾ ಗಂಭೀರವಾದ ಅನಾರೋಗ್ಯಕ್ಕೆ ಪರಿಹಾರವಾಗಬಲ್ಲದೆಂಬುದು ನಿಜಸಂಗತಿ. ಈ ದಿಸೆಯಲ್ಲಿ ತಯಾರಿಸಿದ ಚಲನಚಿತ್ರದಲ್ಲಿ ಕಲಾವಿದ ರಾಬಿನ್ ವಿಲಿಯಂ ವೈದ್ಯಪಾತ್ರದಲ್ಲಿದ್ದರೂ ಅವರ ವೇಷಭೂಷಣಗಳು ಹಾಗೂ ಕೋಡಂಗಿತನದ ನಟನೆಯು, ಚಿಕ್ಕ ಮಕ್ಕಳನ್ನು ರಂಜಿಸಿ ಕಾಯಿಲೆಗಳನ್ನು ಗುಣಪಡಿಸಲು ಯತ್ನಿಸುತ್ತಿದ್ದವು.

ಶ್ರೀಮತಿ ಶೆರಿ ಹೈಬರ್ ಒಬ್ಬ ಟೆಲಿವಿಶನ್ ಚಿತ್ರ ತಯಾರಕಿ. 1998 ರಲ್ಲಿ ಅವಳಿಗಾದ ಅನುಭವ ಹೀಗಿದೆ. "ಅಮೆರಿಕಾದಲ್ಲೊಮ್ಮೆ ಪ್ರದರ್ಶನ ನಡೆದಾಗ ಪ್ರೇಕ್ಷಕರು ಒಬ್ಬರನ್ನೊಬ್ಬರು ಜೋರಾಗಿ ಅಲ್ಲಾಡಿಸಿ ನಕ್ಕು ಮನರಂಜಿಸಿಕೊಳ್ಳುತ್ತಿದ್ದರು." ಬಹುಷಃ ರಾತ್ರಿಯ ಉಳಿದ ಭಾಗ ಪ್ರೇಕ್ಷಕರ ದೇಹದಲ್ಲಿ ಕುತೂಹಲಕಾರಿ ಬದಲಾವಣೆಗಳ ಅನುಭವವಾಗಬಹುದೆಂದು ಅವಳು ತನ್ನಷ್ಟಕ್ಕೆ ತಾನೇ ವಿಚಾರ ಮಾಡುತ್ತಿದ್ದಳಂತೆ. ಇದಕ್ಕಾಗಿ ಹೆಚ್ಚಿನ ಸಂಶೋಧನೆ ನಡೆಸಿದಾಗ ಅವಳಿಗೆ ಕೆಲ ಕಿರುಗತೆ ಬಿಟ್ಟರೆ ಬೇರೇನೂ ಲಭ್ಯವಾಗಲಿಲ್ಲ. "ನಗಬೇಕು ಹಾಗೂ ಹಸನ್ಮುಖಿಗಳಾಗಿರಬೇಕೆಂಬ ಅವಳ ಸೂಚನೆಯನ್ನು ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಪರಿಣತರು ಮಾನ್ಯ ಮಾಡಿದ್ದಾರೆ. ವೀಡಿಯೋ, ವ್ಯಂಗ್ಯಚಿತ್ರ ಹಾಗೂ ಚಲನಚಿತ್ರದ ಮೂಲಕ ಕೂಲಂಕಷ ಪ್ರಯೋಗ ನಡೆಸಿ ಚಿಕ್ಕಮಕ್ಕಳ ಮೇಲೆ ಹಾಸ್ಯದ ಉಪಯುಕ್ತತೆ ಹಾಗೂ ಪರಿಣಾಮವನ್ನು ಪರೀಕ್ಷಿಸುತ್ತಿದ್ದಾರೆ.

ಚಿಕ್ಕ ಮಕ್ಕಳ ನಾಡಿ, ರಕ್ತದೊತ್ತಡ, ನರ ಹಾಗೂ ರೋಗ ನಿರೋಧಕ ಶಕ್ತಿಯ ಮೇಲೆ ಪರೀಕ್ಷೆಗೆ ಮೊದಲು ಹಾಗೂ ನಂತರ ನಗುವಿನ ಪರಿಣಾಮ ತಿಳಿಯಲು ವಿಜ್ಞಾನಿಗಳು ಅವಿರತ ಪ್ರಯತ್ನ ನಡೆಸುತ್ತಿದ್ದಾರೆ.

'ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಪ್ರೊ. ಮಾರ್ಗರೇಟ್ ಝೂಬರ್ ಹಾಗೂ ಲೋನೀ ಝುಲ್ಬರ್ ಪ್ರಕಾರ ನಗುವಿನಿಂದ ರೋಗವಾಸಿಯಾಗುತ್ತಿದೆಯೆಂದು ಹೇಳಲಸಾಧ್ಯವಾದರೂ, ಕ್ರೋಧ, ಮಾನಸಿಕ ಖಿನ್ನತೆ ಹಾಗೂ ನಿರಾಶಾದಾಯಕತನದಿಂದ ಪಾರಾಗಲು ಸಾಧ್ಯವಿದೆಯೆಂದು ಕಂಡು ಹಿಡಿದಿದ್ದಾರೆ. ರಕ್ತ ಕ್ಷಯವಿದ್ದ ಮಕ್ಕಳ ಮೇಲೆ ಈ ಪ್ರಯೋಗ ಸಫಲವಾಗಿದೆ. ಗಾಯ ಹಾಗೂ ನೋವು ಮಾಯುವಿಕೆ ಬಗ್ಗೆ ಕೂಲಂಕಷ ಅಭ್ಯಾಸದ ನಂತರ ನಿಖರವಾದ ವರದಿ ಬರಲಿದೆ.

ಪ್ರೊ. ಗಾರ್ಡ್‌ಮನ್ ನಗುವಿನ ಬಗ್ಗೆ ಹೇಳುತ್ತಾ ಸದ್ಯಕ್ಕಿರುವ ಆಸ್ಪತ್ರೆಗಳನ್ನು ಹಾಸ್ಯದ ಮೂಲಕ 'ಆನಂದ ನಿಲಯ'ಗಳನ್ನಾಗಿ ಪರಿವರ್ತಿಸಬೇಕೆಂದು ಅಭಿಪ್ರಾಯ ಪಡುತ್ತಾರೆ. 1999 ರಲ್ಲಿ ಅವರು ಬರೆದ 'ಹ್ಯೂಮರ್ ಎಂಡ್ ಹೆಲ್ತ್ ಪ್ರೊಫೆಷನ್' ಕೃತಿ ಬಹಳಷ್ಟು ಪ್ರಸಿದ್ಧಿಗೆ ಬಂದು ಅನೇಕ ಭಾಷೆಗಳಲ್ಲಿ ಭಾಷಾಂತರಗೊಂಡಿದೆ.

(ಆಧಾರ:) ಅನುರಾಧಾ
ಎಂ. ಬಮ್ಮನಹಳ್ಳಿ

# ಹುಳಿ ಹಣ್ಣುಗಳನ್ನು ಜಗಿದಾಗ ಹಲ್ಲುನೋವಾಗುವುದೇಕೆ?

ಜ್ಞಾನನಿಧಿ

ಹುಣಿಸೆ, ನಿಂಬೆ ಮುಂತಾದ ಹುಳಿ ಪದಾರ್ಥಗಳನ್ನು ಜಗಿದಾಗ ನಿಮ್ಮ ಹಲ್ಲುಗಳಿಗೆ ನೋವಾಗುತ್ತದಲ್ಲವೇ ಏಕೆ ಹೀಗಾಗುತ್ತದೆ? ಹುಳಿ ಪದಾರ್ಥಗಳಲ್ಲಿರುವ ಆಮ್ಲಗಳು ಹಲ್ಲಿನ ಮೇಲೆ ರಾಸಾಯನಿಕ ಪರಿವರ್ತನೆ ಉಂಟು ಮಾಡುತ್ತವೆ. ಹಲ್ಲಿನ ಶಿರೋಭಾಗದಲ್ಲಿ ಎನಾಮೆಲ್‌ನಂಥ ಬಿರುಸಾದ ಹೊರ ಆವರಣವಿರುತ್ತದೆ. ಈ ಎನಾಮೆಲ್ ಇಡೀ ಮಾನವ ದೇಹದಲ್ಲಿ ಅತ್ಯಂತ ಬಿರುಸಾದ ಭಾಗವಾಗಿದೆ. ಎನಾಮೆಲ್ ಹಲ್ಲಿಗೆ ರಕ್ಷಾ ಕವಚದಂತಿರುತ್ತದೆ. ಹಲ್ಲುಗಳಿಗೆ ಯಾವುದೇ ಹಾನಿಯಾಗದಂತೆ ನೋಡಿಕೊಳ್ಳುತ್ತದೆ. ಆದರೆ ರಾಸಾಯನಿಕ ಪರಿವರ್ತನೆಗೆ ಅದು ಸುಲಭದಲ್ಲಿ ಗುರಿಯಾಗುತ್ತದೆ. ಮುಖ್ಯವಾಗಿ ಹುಳಿ ಪದಾರ್ಥಗಳಿಗೆ ಅದು ಸುಲಭದಲ್ಲಿ ಬಗ್ಗುತ್ತದೆ. ಎನಾಮೆಲ್‌ನ ಪ್ರಮುಖ ಅಂಶವೆಂದರೆ ಹೈಡ್ರೋಕ್ಸಿಯಾ ಪೆಟೈಟ್. ಆಮ್ಲಿಯ ಮಿಶ್ರಣಗಳ ಸಮ್ಮುಖದಲ್ಲಿ ಈ ಅಂಶ ಕರಗಿ ಬಿಡುತ್ತದೆ.

ಹುಳಿ ಪದಾರ್ಥಗಳನ್ನು ಅಗಿದಾಗ (ಹುಣಿಸ ನಿಂಬೆ ಮುಂತಾದವು) ಎನಾಮೆಲ್‌ನ ಮೇಲ್ಮೈ ಸವೆಯುತ್ತದೆ. ತತ್ಪರಿಣಾಮವಾಗಿ ನಮ್ಮ ಹಲ್ಲಿನಲ್ಲಿ ಅಹಿತಕರ ಸಂವೇದನೆ ಉಂಟಾಗುತ್ತದೆ. ಹಲ್ಲಿನ ಅಂತರ್ಯದ ಅಂಶಗಳು ತೀವ್ರ ಹಾನಿಗೀಡಾಗುವ ಸಂಭವವಿದೆಯೆಂದು ಅದು ಎಚ್ಚರಿಕೆಯ ಸಂಕೇತವೂ ಆಗಿದೆ. ಆಮ್ಲಿಯ ಪದಾರ್ಥಗಳಿಂದ ಹಲ್ಲುಗಳನ್ನು ನಿರಂತರ ಸ್ವಚ್ಛಮಾಡುವುದರಿಂದ ಹಲ್ಲಿನ ಅನಾರೋಗ್ಯಕ್ಕೆ ಕಾರಣವಾಗುವ ಇತರ ಕಣಗಳು ಹಲ್ಲನ್ನು ಪ್ರವೇಶಿಸಲು ಸದವಕಾಶ ನೀಡಿದಂತಾಗುತ್ತದೆ. ಹುಳಿ ಹಣ್ಣುಗಳನ್ನು ಜಗಿದಾಗ ಅವುಗಳಿಂದ ಒಸರಿದ ಜೈವಿಕಆಮ್ಲಗಳು ಹಲ್ಲಿನ ಬುಡದ ಅತಿಸೂಕ್ಷ್ಮ ಕಾಲುವೆಗಳಿಂದ ಹಲ್ಲನ್ನು ಪ್ರವೇಶಿಸಿ ಹಲ್ಲಿನ ಎನಾಮೆಲನ್ನು ಕೆಡಿಸುತ್ತದೆ.

ಎಳೆಯ ಮಕ್ಕಳಲ್ಲಿ ಹಲ್ಲಿನ ಎನಾಮೆಲ್ ಹೊಸದಾಗಿದ್ದು, ಬಿಗಿಯಾಗಿ ಜೋಡಿಕೊಂಡಿರುತ್ತದೆ. ಹೀಗಾಗಿ ಹುಳಿಹಣ್ಣುಗಳನ್ನು ತಿಂದಾಗ, ಹುಳಿ ಮಜ್ಜಿಗೆ ಕುಡಿದಾಗ ಎಳೆಯ ಮಕ್ಕಳು ಹಿರಿಯರಂತೆ ಅಹಿತಕರ ಸಂವೇದನೆ ಅನುಭವಿಸುವುದಿಲ್ಲ.

ಟೂತ್ ಪೇಸ್ಟ್‌ಗಳ ಫ್ಲೂರೈಡ್ ಎನಾಮೆಲ್‌ನಲ್ಲಿರುವ ಹೈಡ್ರೋಕ್ಸಿಯಾಪೆಟೈಟ್ ಕ್ರಿಸ್ಟಲ್‌ಗಳೊಂದಿಗೆ ಸೇರಿಕೊಂಡು ಸಂಯುಕ್ತ ಪದಾರ್ಥಗಳನ್ನು ರೂಪಿಸುತ್ತವೆ. ಅವು ಹುಳಿ ಪದಾರ್ಥಗಳ ಆಮ್ಲದಲ್ಲಿ ಕರಗಲಾರವು. ಆದುದರಿಂದಲೇ ದಂತ ವೈದ್ಯರು ಹುಳಿ ಪದಾರ್ಥಗಳಿಂದ ಹಲ್ಲು ಕೆಡದಂತೆ ರಕ್ಷಿಸಿಕೊಳ್ಳಲು ಫ್ಲೂರೈಡ್ ಪೇಸ್ಟ್ ಬಳಸಲು ಸಲಹೆ ಮಾಡುತ್ತಾರೆ.

ಜ್ಞಾನನಿಧಿ

# ಜೇನಿನಲ್ಲಿ ಕ್ಯಾನ್ಸರ್ ನಿರೋಧಕ ಗುಣ

ಜೇನುತುಪ್ಪದಲ್ಲಿ ಕ್ಯಾನ್ಸರ್ ನಿರೋಧಕ ಗುಣವಿದೆಯೇ? ತುರ್ಕಿಯ ಇಸ್ತಾಂಬುಲ್‌ನ ವೈದ್ಯಕೀಯ ಸಂಶೋಧಕರು ನಡೆಸಿದ ಈಚೆಗಿನ ಸಂಶೋಧನೆಗಳು ಜೇನಿನಲ್ಲಿ ಕ್ಯಾನ್ಸರ್ ನಿರೋಧಕ ಗುಣವಿದೆ ಎಂಬುದನ್ನು ತೋರಿಸಿಕೊಟ್ಟಿದೆ. ಶಸ್ತ್ರಚಿಕಿತ್ಸೆ ಮೂಲಕ ನಿವಾರಿಸಲು ಸಾಧ್ಯವಿರುವ ಕ್ಯಾನ್ಸರ್ ಹುಣ್ಣನ್ನು ತಡೆಗಟ್ಟುವ ಸಾಮರ್ಥ್ಯ ಜೇನಿನಲ್ಲಿದೆ ಎಂದು ಇಸ್ತಾಂಬುಲ್ ವಿಶ್ವವಿದ್ಯಾಲಯದ ಸರ್ಜರಿ ವಿಭಾಗದ ಸಂಶೋಧಕ ಇಸ್ಮಾಯಿಲ್ ಹಮ್‌ಜೊವಾಗ್ಲು ಅವರು ಅಭಿಪ್ರಾಯ ಪಡುತ್ತಾರೆ.

ದೊಡ್ಡ ಕರುಳಿನಲ್ಲಿ ಕ್ಯಾನ್ಸರ್ ಹುಣ್ಣನ್ನು ಲ್ಯಾಪ್ರೊಸ್ಕೊಪಿ ಶಸ್ತ್ರಚಿಕಿತ್ಸೆಯ ಮೂಲಕ ತೆಗೆದ ನಂತರ ರೋಗಿಗೆ ಜೇನು ಕುಡಿಯಲು ನೀಡಿದರೆ ಅದು ಕ್ಯಾನ್ಸರ್ ಹುಣ್ಣು ಮರುಕಳಿಸುವುದನ್ನು ತಡೆಗಟ್ಟುತ್ತದೆ ಎಂದು ಇಸ್ಮಾಯಿಲ್ ಹಮ್‌ಜೊವಾಗ್ಲು ಹೇಳುತ್ತಾರೆ. "ಆರ್ಕೈವ್ ಆಫ್ ಸರ್ಜರಿ" ಎಂಬ ವೈದ್ಯಕೀಯ ಪತ್ರಿಕೆಯಲ್ಲಿ ಅವರು ಬರೆದ ಲೇಖನದಲ್ಲಿ ಈ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ದೊಡ್ಡ ಕರುಳಿನ ಕ್ಯಾನ್ಸರ್ ಹುಣ್ಣನ್ನು ಶಸ್ತ್ರಚಿಕಿತ್ಸೆ ಮೂಲಕ ತೆಗೆದ ನಂತರ ಕೆಲವು ಕಾಲದ ಬಳಿಕ ಮತ್ತೆ ಕ್ಯಾನ್ಸರ್ ದೊಡ್ಡ ಕರುಳಿನಲ್ಲಿ ಕಾಣಿಸಿಕೊಳ್ಳುವ ಸಾಧ್ಯತೆಗಳಿವೆ. ಶಸ್ತ್ರಚಿಕಿತ್ಸೆಯಲ್ಲಿ ಗಂಭೀರ ದೋಷದಿಂದಾಗಿಯೋ ಅಥವಾ ಜೀವಕೋಶಗಳು ಕ್ಯಾನ್ಸರ್ ಪೀಡಿತವಾಗುವುದರಿಂದಲೋ ಕ್ಯಾನ್ಸರ್ ವ್ರಣ ಮತ್ತೆ ಉದ್ಭವಿಸುತ್ತದೆ.

ಜೇನಿನಲ್ಲಿ ಕ್ಯಾನ್ಸರ್ ನಿರೋಧಕ ಗುಣವಿದೆಯೇ ಎಂಬುದನ್ನು ಪರಿಶೀಲಿಸಲು ತುರ್ಕಿಯ ಸಂಶೋಧಕರು 60 ಇಲಿಗಳ ಮೇಲೆ ಪ್ರಯೋಗ ಕೈಗೊಂಡರು. ಎಲ್ಲ 60 ಇಲಿಗಳಿಗೂ ಅವರು ಇಂಜೆಕ್ಷನ್ ಮೂಲಕ (ಕಾರ್ಬನ್ ಡೈ ಆಕ್ಸೈಡ್) ನೀಡಿದರು. ಅನಂತರ 30 ಇಲಿಗಳ ಕತ್ತಿನಲ್ಲಿ ಸಣ್ಣ ತೂತುಕೊರೆದು ಕೆಲವು ಚಮಚೆ ಜೇನುತುಪ್ಪವನ್ನು ಅದರಲ್ಲಿ ತುಂಬಿದರು. 30 ಇಲಿಗಳಿಗೆ ಜೇನು ತುಪ್ಪ ನೀಡಲಿಲ್ಲ.ಎಲ್ಲ ಇಲಿಗಳಿಗೂ ಕ್ಯಾನ್ಸರ್‌ಕಾರಕ ಜೀವಕೋಶಗಳ ಸತ್ವವನ್ನು ಇಂಜೆಕ್ಷನ್ ರೂಪದಲ್ಲಿ ನೀಡಿದರು.

ಕೆಲವು ದಿನಗಳ ಬಳಿಕ ಎಲ್ಲ ಇಲಿಗಳನ್ನೂ ವೈದ್ಯಕೀಯ ಪರೀಕ್ಷೆಗೆ ಗುರಿ ಗುರಿಪಡಿಸಿದಾಗ ಜೇನು ತುಪ್ಪ ಸೇವಿಸಿದ ಇಲಿಗಳಲ್ಲಿ ಕ್ಯಾನ್ಸರ್ ಹುಣ್ಣುಗಳು ಉದ್ಭವಿಸಿರಲಿಲ್ಲ. ಆದರೆ ಜೇನುತುಪ್ಪ ಸ್ವೀಕರಿಸದ ಇತರ 30 ಇಲಿಗಳಲ್ಲಿ ಕ್ಯಾನ್ಸರ್ ವ್ರಣಗಳು ಗೋಚರಿಸಿದುವು.

ಆದರೆ ಕ್ಯಾನ್ಸರ್ ಕಾಯಿಲೆ ತಡೆಗಟ್ಟುವ




ಯಾವ ಗುಣ ಜೇನಿನಲ್ಲಿದೆ ಎಂಬುದು ದೊಡ್ಡ ರಹಸ್ಯವಾಗಿದೆ. ಬಹುಶಃ ಜೇನಿನಲ್ಲಿರುವ ಕೆಲವು ಘಟಕಗಳಿಗೆ ಕ್ಯಾನ್ಸರ್ ವ್ರಣವನ್ನು ಕರಗಿಸುವ ಶಕ್ತಿ ಇರಬಹುದು ಎಂದು ತುರ್ಕಿಯ ವೈದ್ಯಕೀಯ ತಜ್ಞರು ಊಹಿಸುತ್ತಾರೆ.

### ರೋಗನಿರೋಧಕ ಶಕ್ತಿ

ಪ್ರಾಚೀನ ಈಜಿಪ್ಟ್‌ನ ಜನರು ಕಣ್ಣಿನ ಕಾಯಿಲೆಗಳು ಹಾಗೂ ಸುಟ್ಟಗಾಯಗಳ ಚಿಕಿತ್ಸೆಗೆ ಜೇನನ್ನು ಬಳಸುತ್ತಿದ್ದರು.ಗ್ರೀಕ್ ವೈದ್ಯಕೀಯ ರಂಗದ ಪಿತಾಮಹನೆನಿಸಿದ್ದ ಹಿಪೊಕ್ರೆಟಸ್‌ನು ಚರ್ಮರೋಗಗಳು ಹಾಗೂ ಹೊಟ್ಟೆ ಹುಣ್ಣು ನಿವಾರಿಸಲು ಜೇನಿನಿಂದ ಔಷಧಗಳನ್ನು ಸಿದ್ಧಪಡಿಸಿದ್ದ.

ಗಾಳಿಯಲ್ಲಿರುವ ತೇವಾಂಶವನ್ನು ಹೀರಿಕೊಳ್ಳುವ ಶಕ್ತಿ ಜೇನಿನಲ್ಲಿದೆ. ಮೈಚರ್ಮದ ಮೇಲೆ ತೇವ ಬಹಳ ಹೊತ್ತು ಉಳಿದುಕೊಳ್ಳುವಂತೆ ಮಾಡುವ ಗುಣವೂ ಜೇನಿನಲ್ಲಿರುವುದರಿಂದ ಸೌಂದರ್ಯ ವರ್ಧಕ ಚಿಕಿತ್ಸೆಯಲ್ಲಿ ಅದನ್ನು ಬಳಸುತ್ತಾರೆ.

ಸೂಕ್ಷ್ಮಾಣುಜೀವಿ ನಿರೋಧಕಶಕ್ತಿಯೂ ಜೇನಿನಲ್ಲಿದೆ. ಜೇನಿನಲ್ಲಿರುವ ಹೈಡ್ರೋಜನ್ ಪೆರಾಕ್ಸೈಡ್‌ನಲ್ಲಿರುವ ಆ್ಯಂಟಿ ಓಕ್ಸಿಡೆಂಟ್‌ಗಳು ಶರೀರದಲ್ಲಿ ಬ್ಯಾಕ್ಟೀರಿಯಾಗಳ ಬೆಳವಣಿಗೆಗೆ ತಡೆಯೊಡ್ಡುತ್ತದೆ.

(ಆಧಾರ)

• ಸಹನಾ

## ಇನ್ನೊಂದು ಸೌರವ್ಯೂಹ 'ವೇಗಾ'

ನಮ್ಮ ಸೌರವ್ಯೂಹಕ್ಕೆ ಇನ್ನೊಂದು ಜೊತೆಗಾತಿ ಸಿಕ್ಕಿದೆ. ಸೌರವ್ಯೂಹದಂತಹದೇ ವ್ಯವಸ್ಥೆಯುಳ್ಳ ಸೂರ್ಯನನ್ನು ಹೋಲುವ ಇನ್ನೊಂದು ನಕ್ಷತ್ರ 'ವೇಗಾ'-ವನ್ನು ಖಗೋಳ ವಿಜ್ಞಾನಿಗಳು ಪತ್ತೆ ಹಚ್ಚಿದ್ದಾರೆ. ಇದು ಭೂಮಿಯಿಂದ 26 ಬೆಳಕಿನ ವರ್ಷಗಳಷ್ಟು ದೂರದಲ್ಲಿದೆ. ವೇಗಾ ರೂಪುಗೊಂಡು ಹಬ್ಬಿಂದರೆ ಹತ್ತು ಲಕ್ಷ ವರ್ಷಗಳಾಗಿರಬೇಕು ಎಂದು ಒಂದು ಅಂದಾಜು. ಸೂರ್ಯನಿಗಿಂತ ಸುಮಾರು ಮೂರರಷ್ಟು ಭಾರವಿರುವ ವೇಗಾದ ಸೌರವ್ಯೂಹವು ನಮ್ಮ ಸೌರವ್ಯೂಹಕ್ಕಿಂತ ಸುಮಾರು ಅರವತ್ತು ಪಟ್ಟು ಹೆಚ್ಚು ಪ್ರಕಾಶಮಾನವಾಗಿದೆ.

ಇದನ್ನು ಆವರಿಸಿರುವ ದೂಳಿನ ಕಣಗಳ ತೂಕ ನಮ್ಮ ಸೌರವ್ಯೂಹದ ಒಟ್ಟು ತೂಕದಷ್ಟೇ ಇರಬೇಕೆಂದು ಒಂದು ಅಂದಾಜು. ಆದರೆ ನಮ್ಮ ಸೌರವ್ಯೂಹದಂತೆಯೇ ಅಲ್ಲಿಯೂ ಗ್ರಹಗಳು ರೂಪಗೊಂಡಿವೆಯೇ ಎಂಬುದನ್ನು ಇನ್ನೂ ಸರಿಯಾಗಿ ನಿರ್ಧರಿಸಲಾಗಿಲ್ಲ.

• 'ಗೌರಿ ಅಭಿ'



## ಕೀಟಭಕ್ಷಕ ಸಸ್ಯಗಳು

ದ್ಯುತಿ ಸಂಶ್ಲೇಷಣೆ ಕ್ರಿಯೆಯ ಮೂಲಕ ವಾತಾವರಣವನ್ನು ಶುದ್ಧಗೊಳಿಸುವ ಕೆಲವು ಸಸ್ಯಗಳು ಪ್ರಾಣಿಸಂಕುಲಕ್ಕೆ ಜೀವಾಧಾರವಾಗಿದ್ದರೂ, ಕೆಲವು ಅಪರೂಪದ ಸಸ್ಯಗಳು ತಮ್ಮ ಉಳಿವಿಗಾಗಿ ಕೀಟಗಳನ್ನು ಭಕ್ಷಿಸುತ್ತವೆ. ಪ್ರಕೃತಿಯ ವಿಸ್ಮಯಗಳಲ್ಲಿ ಇದೂ ಒಂದು.

ಇತರ ಮಾಂಸಾಹಾರಿ ಜೀವಿಗಳಂತೆ ಸಸ್ಯಗಳು ಕೀಟಗಳನ್ನು ಅಗಿದು ನುಂಗುವುದಿಲ್ಲ. ಆದರೆ ಕೆಲವು ಕಿಣ್ವಗಳ ಮಿಶ್ರಣದಲ್ಲಿ ವಿಭಜನೆಗೊಳಿಸುವುದರ ಮೂಲಕ ಅರಗಿಸಿಕೊಳ್ಳುತ್ತವೆ.

ಹೂಜಿ ಗಿಡ ತನ್ನ ಹೂಜಿಯಾಕಾರದ ಆಕರ್ಷಕ ಬಣ್ಣ ಹಾಗೂ ಸುವಾಸನಾಯುಕ್ತ ಮಧುವಿನಿಂದ ಕೀಟಗಳನ್ನು ಸೆಳೆಯುತ್ತದೆ. ಕೀಟ ಹೂವಿನ ಒಳಪ್ರವೇಶಿಸಿದೊಡನೆ ಪಟ್ಟೆಂದು ಹೂವಿನ ದಳಗಳು ಮುಚ್ಚಿಕೊಳ್ಳುತ್ತವೆ. ಈ ರೀತಿ ಮೋಸಗೊಳಿಸಿ ಸಸ್ಯವು ತನ್ನೊಳಗಿರುವ ಜೀರ್ಣರಸದಲ್ಲಿ ಅವಪಾತಗೊಳಿಸಿ ಅರಗಿಸಿಕೊಳ್ಳುತ್ತದೆ. ವೀನಸ್ ಫ್ಲೋಟ್ರ್ಯಾಪ್ ಎಂಬ ಮತ್ತೊಂದು ಕೀಟಭಕ್ಷಕ ಸಸ್ಯ ತನ್ನ ಮಧುಭರಿತ ಕಣೆಗಳಂಥ ಎಲೆಗಳನ್ನು ಬಾಚಿ ಕೀಟಗಳನ್ನು ಆಕರ್ಷಿಸುತ್ತದೆ. ಕೀಟಗಳು ತನ್ನ ಸಮೀಪ ಬಂದಕೂಡಲೇ ಕಣೆಗಳು ಒಂದನ್ನೊಂದು ಬೆಸೆದುಕೊಳ್ಳುವಂತೆ ಕಣೆಗಳ ಬಲೆಯಲ್ಲಿ ಸಿಕ್ಕಿಹಾಕಿಬಿಡುತ್ತವೆ.

ಸನ್ ಡ್ಯೂ ಎಂಬ ಇನ್ನೊಂದು ಕೀಟಭಕ್ಷಕ ಸಸ್ಯ ಅಂಟಾದ ದ್ರವವನ್ನು ಸ್ರವಿಸಿ ಕೀಟಗಳನ್ನು ಸೆರೆಹಿಡಿಯುತ್ತದೆ.

• ಉಮಾಶಂಕರ ಬ. ಹಿರೇಮಠ.

## ಬಿಸಿಲಿಗೊಡ್ಡಿದ ಚರ್ಮ ಕಪ್ಪಾಗುವುದೇಕೆ?

ಇನ್ನೇನು ಬೇಸಿಗೆಕಾಲ ಬಂತು. ಹೌದು ಬಿಸಿಲಿಗೊಡ್ಡಿದ ಚರ್ಮ ಕಪ್ಪಾಗುವುದಾದರೂ ಏಕೆ? ಸೂರ್ಯನ ಕಿರಣಗಳಲ್ಲಿ ಅತಿ ನೇರಳೆ ಅಂದರೆ ಅಲ್ಟ್ರಾವೈಲೆಟ್ ಕಿರಣಗಳಿರುತ್ತವೆ. ಈ ಕಿರಣಗಳು ಚರ್ಮದ ಮೇಲೆ ಬಿದ್ದಾಗ ಚರ್ಮದ ಕೆಳಗಡೆ ಇರುವ 'ಮೆಲಾನೋ ಸೈಟ್' ಎಂಬ ಕೋಶಗಳು 'ಮೆಲಾನಿಕ್' ಎಂಬ ಕಪ್ಪಾದ ವರ್ಣದ ದ್ರವವನ್ನು ಸ್ರವಿಸುತ್ತವೆ. ಈ ಮೆಲಾನಿಕ್ ಅತಿನೇರಳೆ ಕಿರಣಗಳ ದುಷ್ಪರಿಣಾಮವನ್ನು ತಡೆದು ಚರ್ಮವನ್ನು ರಕ್ಷಿಸುತ್ತದೆಯಾದರೂ ಹೆಚ್ಚು ಮೆಲಾನಿನ್ ಚರ್ಮವನ್ನು ಕಪ್ಪು ಮತ್ತು ಒರಟಾಗಿಸುತ್ತದೆ.

• ಬಿ.ಎಂ. ನಾಗಭೂಷಣ.

ಜ್ಞಾನನಿಧಿ

# ಮೀನುಗಳು ಕಣ್ಣೀರು ಸುರಿಸುತ್ತವೆಯೇ?

ಮೀನುಗಳು ನೀರಿನಲ್ಲಿಯೇ ಇರುವುದರಿಂದ ಅಶ್ರುಗ್ರಂಥಿಯ ಕೆಲಸ ಅವು ವಾಸಿಸುವ ನೀರೇ ಮಾಡುತ್ತದೆ. ಆದ್ದರಿಂದ ಮೀನಿಗೆ ನೋವಾದರೂ ಅವು ಕಣ್ಣೀರು ಸುರಿಸುವುದಿಲ್ಲ. ಮೀನುಗಳ ಕಣ್ಣು ತುಂಬಾ ಸುಂದರವಾಗಿರುವದರೊಂದಿಗೆ ಅವುಗಳು ಕಣ್ಣು ಮುಚ್ಚುವುದೇ ಇಲ್ಲ. ಕಣ್ಣು ಮುಚ್ಚುವುದಕ್ಕೆ ಅವುಗಳಿಗೆ ಕಣ್ಣಿನ ರೆಪ್ಪೆಗಳೇ ಇಲ್ಲ. ಮೀನಿನ ಕಣ್ಣ ಗುಡ್ಡೆಗಳ ಸುತ್ತಲೂ ಪಾಪೆ ಇದೆ. ಮೀನುಗಳು ತಮ್ಮ ಕಣ್ಣಗೊಂಬೆಯನ್ನು ಸಂಕುಚಿಸುತ್ತವೆ. ತಲೆಯ ಎರಡೂ ಬದಿಯಲ್ಲಿ ಎರಡು ಕಣ್ಣುಗಳಿರುವುದರಿಂದ ಅವು ಒಂದೇ ಸಮಯದಲ್ಲಿ ಮೇಲೆ ಕೆಳಗೆ, ಹಿಂದೆಮುಂದೆ ನೋಡಬಲ್ಲವು. ಅಲ್ಲದೆ ಒಂದೇ ವಸ್ತುವಿನ ಮೇಲೆ ಎರಡೂ ಕಣ್ಣುಗಳ ನೋಟವನ್ನು ದೃಷ್ಟಿಸಿ ನೋಡಬಲ್ಲವು. 'ಕ್ಯಾಟ್‌ಫಿಶ್' ಎಂಬ ಮೀನುಗಳಲ್ಲಿ ಹೆಣ್ಣು ಮೀನು ಗಂಡುಮೀನಿನ ಬಾಯೊಳಗೆ ಮೊಟ್ಟೆ ಇಡುತ್ತದೆ. ಮೊಟ್ಟೆಯೊಡೆದು ಮರಿಯಾದ ಮೇಲೆಯೂ, ಆ ಮರಿಗಳು ಎರಡುವಾರ ಆ ತಂದೆ ಮೀನಿನ ಬಾಯೊಳಗೇ ಇರುತ್ತವೆ. ಆ ಅವಧಿಯಲ್ಲಿ ಕ್ಯಾಟ್‌ಫಿಶ್ ಯಾವುದೇ ಆಹಾರ ತಿನ್ನುವುದಿಲ್ಲವಂತೆ.

• ಸಾವಿತ್ರಿ ಹೊಳ್ಳ
ಕಟೀಲು.

# ಹೃದಯಾಘಾತ ತಡೆಗೆ ಹಸಿರು ಚಹಾ

ಪ್ರತಿದಿನವೂ ಹತ್ತು ಕಪ್ ಚಹಾ ಕುಡಿಯುವುದರಿಂದ ಹೃದಯಾಘಾತವನ್ನು ತಡೆಗಟ್ಟಬಹುದಂತೆ. ಈ ಚಹಾ ಸಾಮಾನ್ಯ ಚಹಾವಲ್ಲ, ಹಸಿರು ಚಹಾ (ಗ್ರೀನ್ ಟೀ) ಹಸಿರು ಚಹಾ ಸೇವನೆಯಿಂದ ಕೊಲೆಸ್ಟ್ರಾಲ್ ಪ್ರಮಾಣ ಕಡಿಮೆಯಾಗುವುದಂತೆ.

ಹಸಿರು ಚಹಾದಲ್ಲಿ ಕೆಲವು ರಾಸಾಯನಿಕ ದ್ರವ್ಯಗಳಿವೆ. ಈ ಚಹಾವನ್ನು ಮನುಷ್ಯರಿಗೆ ಮತ್ತು ಪ್ರಾಣಿಗಳಿಗೆ ಪರೀಕ್ಷಾರ್ಥವಾಗಿ ನೀಡಿ ಅದರ ಪರಿಣಾಮ ವಿಶ್ಲೇಷಿಸಿ ನೋಡಲಾಯಿತು.

ಜಪಾನ್‌ದ ಕ್ಯಾನ್ಸರ್ ಸಂಸ್ಥೆಯು 40 ವರ್ಷಕ್ಕೆ ಮೇಲ್ಪಟ್ಟ 1371 ಜನರ ರಕ್ತ ಪರೀಕ್ಷೆ ನಡೆಸಿತು. ಹತ್ತು ಕಪ್‌ಗಳಿಗೆ ಕಡಿಮೆ ಇಲ್ಲದಂತೆ ಚಹಾ ಕುಡಿದವರಲ್ಲಿ ಕೊಬ್ಬಿನ ಅಂಶ ಕಡಿಮೆಯಾಗಿತ್ತು.

• (ಸಂಗ್ರಹ) ಎಂ.ಎಸ್. ಶೆಟ್ಟರ.

## ಜ್ಞಾನನಿಧಿ

# ದಂಡಕಾರಣ್ಯ

ಕ್ರಿಸ್ತಪೂರ್ವದಲ್ಲಿ ಮನು ಅಯೋಧ್ಯಾನಗರವನ್ನು ಸ್ಥಾಪಿಸಿದ. ಮನುವಿನ ಮಗ ಇಕ್ಷ್ವಾಕು, ಸೂರ್ಯವಂಶದ ಇಕ್ಷ್ವಾಕುವಿನ ಮಗ ದಂಡಕ. ಇವನೊಬ್ಬ ಮೂರ್ಖನಷ್ಟೇ ಅಲ್ಲ, ರಾಕ್ಷಸ ಪ್ರವೃತ್ತಿಯವನಾಗಿದ್ದ. ಆತ ಸೂರ್ಯವಂಶಕ್ಕೇ ಕಳಂಕಪ್ರಾಯನಾಗತೊಡಗಿದ. ಯಾರಿಗೂ ಮಣಿಯದವನಾದ. ಯಾರಾದರೂ ಉಪದೇಶ ಮಾಡಲು ಬಂದರೆ ಅವರ ಮೇಲೆ ಕೆಂಡ ಕಾರುತ್ತಿದ್ದ. ಅಂಥವರನ್ನು ಬಂದೀಖಾನೆಯಲ್ಲಿ ಸೇರಿಸಲೂ ಹಿಂಜರಿಯುತ್ತಿದ್ದಿಲ್ಲ. ಇವನನ್ನು ದೂರವಿಡಲು, ವಿಂಧ್ಯ ಮತ್ತು ಶ್ವೇಮ ಪರ್ವತಗಳ ಮಧ್ಯದ ವಿಶಾಲ ಪ್ರದೇಶದಲ್ಲಿ ಇಕ್ಷ್ವಾಕು ರಾಜ ದಂಡಕನಿಗೆ ರಾಜ್ಯ ಮಾಡಿಕೊಟ್ಟ. ಸಾಕಷ್ಟು ಸೈನಿಕರನ್ನು, ಸಂಪತ್ತನ್ನು, ಕುದುರೆ, ಆನೆಗಳನ್ನು ಇವನೊಂದಿಗೆ ಕಳಿಸಿದ.

ಭೃಗು ಮಹರ್ಷಿಯ ಮಗ ಶುಕ್ರಾಚಾರ್ಯರು ಬ್ರಹ್ಮನನ್ನು ಧ್ಯಾನಿಸಿ ತಪಸ್ಸು ಮಾಡಿ ಮೃತ ಸಂಜೀವಿನಿ ವಿದ್ಯೆಯನ್ನು ಪಡೆದಿದ್ದರು. ಅಲ್ಲದೇ ಇವರು ಯಾವಾಗಲೂ ದುಷ್ಟಶಕ್ತಿಗಳ ಪರ. ಶುಕ್ರಾಚಾರ್ಯರು ರಾಕ್ಷಸರ ಗುರು ಎಂದೇ ಖ್ಯಾತಿ ಪಡೆದಿದ್ದರು. ದೇವತೆಗಳ ವೈರಿಯಾಗಿದ್ದರು. ಇಂಥವರೇ ತನಗೆ ತಕ್ಕ ಗುರುಗಳೆಂದು ದಂಡಕನು ಶುಕ್ರಾಚಾರ್ಯರನ್ನು ಬರಮಾಡಿಕೊಂಡು ಅವರಿಗೆ ರಾಜಪುರೋಹಿತರ ಸ್ಥಾನವನ್ನು ಕೊಟ್ಟನು. ಇಂತಹ ದುಷ್ಟ ಶಿಷ್ಯನು ಸಿಕ್ಕಿದಕ್ಕೆ ಗುರುಗಳಿಗೂ ಖುಷಿಯಾಯಿತು.

ದಂಡಕ ಒಮ್ಮೆ ಶುಕ್ರಾಚಾರ್ಯರ ಆಶ್ರಮಕ್ಕೆ ಹೋದ. ಆಚಾರ್ಯರು ಹೊರಗೆ ಹೋಗಿದ್ದರು. ಶುಕ್ರಾಚಾರ್ಯರ ಮಗಳು ಆರಜೆ ಒಬ್ಬಳೇ ಆಶ್ರಮದಲ್ಲಿದ್ದಳು. ಅವಳು ಮಹಾ ಸುಂದರಿ. ಅವಳು ಆಗ ತಾನೇ ನದಿಯಲ್ಲಿ ಮಿಂದು ಬಂದಿದ್ದಳು. ಅವಳ ಅಪರೂಪದ ಸೌಂದರ್ಯಕ್ಕೆ ದಂಡಕ ಹುಚ್ಚನಾದ. ಆಚಾರ್ಯರು ಬರಲು ಇನ್ನೂ ಕಾಲಾವಕಾಶ ಇದೆ ಎಂಬುದನ್ನು ತಿಳಿದುಕೊಂಡು ಅವಳ ಸಂಗ ಬಯಸಿದ. ಆರಜೆ ಇವನನ್ನು ತಿರಸ್ಕರಿಸಿದಳು. ದಂಡಕ ಬಲಾತ್ಕಾರ ಮಾಡಿ ಅವಳ ಶೀಲವನ್ನು ಅಪಹರಿಸಿದ. ಆಚಾರ್ಯರು ಬಂದ ಬಳಿಕ ನಡೆದ ಘಟನೆಯ ಅರಿವಾಯ್ತು. ಅವರ ಪಿತ್ತ ನೆತ್ತಿಗೇರಿತು. ಏಳು ದಿನಗಳಲ್ಲಿ ದಂಡಕನ ವಂಶ ನಾಶವಾಗಲಿ ಹಾಗೂ ಸುತ್ತಲಿನ ಮೂರು ಯೋಜನ ಪ್ರದೇಶ ಹಾಳಾಗಲಿ ಎಂದು ಭಯಂಕರ ಶಾಪ ನೀಡಿದರು. ತಕ್ಷಣ ಧೂಳಿನ ಮಳೆ ಸುರಿಯಲಾರಂಭಿಸಿತು. ರಾಜ್ಯವೆಲ್ಲ ನಾಶವಾಯಿತು. ನಂತರ ಆ ಪ್ರದೇಶದಲ್ಲಿ ದಟ್ಟವಾದ ಕಾಡು ಬೆಳೆಯಲು ಪ್ರಾರಂಭಿಸಿತು. ದುಷ್ಟ ಶಕ್ತಿಗಳಿಗೆ ಇದೊಂದು ವಾಸಸ್ಥಾನವಾಯಿತು. ಈ ತರಹ ಬೆಳೆದ ಅರಣ್ಯಕ್ಕೆ ದಂಡಕಾರಣ್ಯವೆಂಬ ಹೆಸರು ಪ್ರಾಪ್ತವಾಯಿತು. ರಾಮಾಯಣದಲ್ಲಿ ದಂಡಕಾರಣ್ಯ ಮಹತ್ವದ ಪಾತ್ರವಹಿಸಿದೆ.

• ನ.ಹ. ಕಟಗೇರಿ.

## ನಿಮ್ಮ ಶಬ್ದ ಭಂಡಾರ ಬೆಳೆಸಿರಿ

ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

**1. ಗೈರಿಕ**
- (ಅ) ಕೆಂಪು ಸುಣ್ಣದ ಕಲ್ಲು
- (ಆ) ಹಾಜರಿಲ್ಲದವ
- (ಇ) ಮರ್ಯಾದೆವಂತ
- (ಈ) ಸಾಲಾಗಿ ನಿಲ್ಲುವ

**2. ಅಶಿವ**
- ಅ) ವಿಷ್ಣು
- ಆ) ಹರಕೆ
- ಇ) ಪೂರ್ಣ
- ಈ) ಅಮಂಗಲ

**3. ಅಶ್ಮರಿ**
- (ಅ) ಮೀಸೆ
- (ಆ)) ಪಿತ್ತಕೋಶದಲ್ಲಿನ ಕಲ್ಲು
- (ಇ) ಮರವೆಗುಳಿ
- (ಈ) ಅನಂತ

**4. ಅಸಾಂಪ್ರತ**
- (ಅ) ಅಶುಭ
- (ಆ) ದೂರ
- (ಇ) ಅನುಚಿತ
- (ಈ) ಬಹುಬೇಗ

**5. ಆಂತ್ರ**
- (ಅ) ಒಂದು ದೇಶ
- (ಆ) ತಂಪಾದ
- (ಇ) ಹೆಚ್ಚು ಕಡಿಮೆ
- (ಈ) ಕರುಳು

**6. ಕಾರ್ಯಾರ್ಥಿ**
- (ಅ) ಅರ್ಜಿದಾರ
- (ಆ) ಕೆಲಸ ಸಾಧಿಸಬಯಸುವವರ
- (ಇ) ಪುರೋಹಿತ
- (ಈ) ಸಂಬಳದ ಆಳು

**7. ಸಂತುಲಿತ**
- (ಅ) ಸಮಾಧಾನ ಹೊಂದಿದ
- (ಆ) ಹೋಲಿಕೆಯುಳ್ಳ
- (ಇ) ಸಮತೂಕವಾದ
- (ಈ) ಅವಸರದ

**8. ಚೂರ್ಣಿತ**
- (ಅ) ಪುಡಿಪುಡಿಯಾದ
- (ಆ) ಪೌರುಷವುಳ್ಳ
- (ಇ) ಸೋಸಿದ
- (ಈ) ಬಿಸಿಯಾದ

**9. ಜಾಲ್ಮ**
- (ಅ) ಬೆಸ್ತ
- (ಆ) ಬೇಟೆಗಾರ
- (ಇ) ತಾಳ್ಮೆಯುಳ್ಳ
- (ಈ) ಕ್ರೂರ

**10. ತಿರೋಭಾವ**
- (ಅ) ಕಣ್ಮರೆಯಾಗುವಿಕೆ
- (ಆ) ಸ್ಥಿರವಾಗಿರುವುದು
- (ಇ) ಬೆಳವಣಿಗೆ
- (ಈ) ಹಿಂದು ಮುಂದೆ

**11. ಬಾಸುಳ**
- (ಅ) ಕಬ್ಬಿಣದ ಸರಳು
- (ಆ) ಮಾತುಗಾರಿಕೆ
- (ಇ) ಪೆಟ್ಟಿನಿಂದ ಉಬ್ಬಿದ ಗುರುತು
- (ಈ) ಅಪ್ಪಿಕೊಳ್ಳುವುದು

**12. ಹಸುಗೆ**
- (ಅ) ನಿರಪರಾಧ
- (ಆ) ಹಂಚುವಿಕೆ
- (ಇ) ಹಾಲು
- (ಈ) ಬಾಲ್ಯ

# 'ಶಬ್ದ ಭಂಡಾರ'ದ ಸರಿಯಾದ ಅರ್ಥಗಳು

**1. ಗೈರಿಕ**

*(ಅ) ಕೆಂಪು ಬಣ್ಣದ ಸುಣ್ಣದ ಕಲ್ಲು, ಕಾವಿ ಬಣ್ಣ, ಉದಾ: ಗೈರಿಕವಸನವನ್ನು ಧರಿಸಿದ. (ಸಂ. ಗಿರಿ=ಗುಡ್ಡ ಎಂಬುದರಿಂದ)*

**2. ಅಶಿವ**

*(ಈ) ಅಮಂಗಲ, ಅಪವಿತ್ರ, ಅಶುಭ, ಉದಾ- ಅಶಿವವನ್ನು ಪರಿಹರಿಸಲು ದೇವರನ್ನು ಪ್ರಾರ್ಥಿಸುವಾ ಸಂ. ಅಅಲ್ಲ ಶಿವ ಮಂಗಲ.*

**3. ಅಶ್ಮರಿ**

*(ಈ) ಪಿತ್ತಕೋಶದಲ್ಲಿ ಕಲ್ಲು ಬೆಳೆಯುವರೋಗ. (ಸಂ. ಅಶ್ಮ=ಕಲ್ಲು ಎಂಬುದರಿಂದ)*

**4. ಅಸಾಂಪ್ರತ**

*ಇ) ಅನುಚಿತ,ಅಯೋಗ್ಯ, ಅಸಂಬದ್ಧ, ಅಸಂಗತ। ಉದಾ. ಅವನ ಮಾತುಗಳು ಅಸಾಂಪ್ರತವಾಗಿದ್ದವು(ಸಂ. ಸಂಪ್ರತಿ=ಸದ್ಯದ ಸಮಯ ಎಂಬುದರಿಂದ)*

**5. ಆಂತ್ರ**

*(ಈ) ಕರುಳು ಕರುಳಿಗೆ ಸಂಬಂಧಪಟ್ಟದ್ದು. ಉದಾ. ಆಂತ್ರವಾಯು, ಆಂತ್ರಮಾಲೆ. (ಸಂ.)*

**6. ಕಾರ್ಯಾರ್ಥಿ**

*(ಅ) ಕೆಲಸ ಸಾಧಿಸಬಯಸುವವ, ಉದ್ದೇಶ ಸಾಧಿಸಬಯಸುವ ಉದಾ: ಕಾರ್ಯಾರ್ಥಿಯಾದವನು ಮಾನಾಪಮಾನಗಳನ್ನು ಲೆಕ್ಕಿಸುವುದಿಲ್ಲ. (ಸಂ. ಕಾರ್ಯ=ಲೆಕ್ಕಿಸುವುದಿಲ್ಲ. (ಸಂ. ಕಾರ್ಯ= ಮಾಡತಕ್ಕದ್ದು, ಅರ್ಥಿ=ಅಪೇಕ್ಷೆಯುಳ್ಳವ)*

**7. ಸಂತುಲಿತ**

*(ಇ) ಸಮತೂಕವಾದ, ಅತಿ ರೇಕಗಳಿಲ್ಲದ, ಹಿತಮಿತವಾದ, ಉದಾ. ಸಂತುಲಿತವಾದ ಆಹಾರ, ಸಂತುಲಿತವಾದ ಅಭಿಪ್ರಾಯ. (ಸಂ. ಸಂ=ಸರಿಯಾಗಿ ತುಲಿತ=ತೂಗಿದ)*

**8. ಚೂರ್ಣಿತ**

*(ಅ) ಪುಡಿಪುಡಿಯಾದ ಉದಾ. ಅವನ ದರ್ಪವೆಲ್ಲ ಚೂರ್ಣಿತವಾಯಿತು. (ಸಂ. ಚೂರ್ಣ=ಪುಡಿ)*

**9. ಜಾಲ್ಮ**

*(ಈ) ಕ್ರೂರ, ದುಷ್ಟ, ಕೀಳ, ಧೂರ್ತ, ನಿರ್ದಯ, ದುಡುಕ (ಸಂ.)*

**10. ತಿರೋಭಾವ**

*(ಅ) ಕಣ್ಮರೆಯಾಗುವಿಕೆ, ಅದೃಶ್ಯವಾಗುವಿಕೆ, ಮಾಯವಾಗುವಿಕೆ, ಅಡಗುವಿಕೆ, ಉದಾ. ಶತ್ರು ಸೈನ್ಯದ ತಿರೋಭಾರದಿಂದ ಚಿಂತೆಯುಟಾಗಿದೆ. (ಸಂ. ತಿರಸ್=ಗುಪ್ತ, ಭಾವ=ಇರವು)*

**11. ಬಾಸುಳ**

*(ಇ) ಪೆಟ್ಟಿನಿಂದ ಎದ್ದ ಉಬ್ಬಿದ ಗುರುತು, ಉದಾ. ಅವನ ಮೈಯಲ್ಲಿ ಬಾಸುಳಗಳೆದ್ದವು (ಕನ್ನಡ)*

**12. ಹಸುಗೆ**

*(ಅ) ಹಂಚುವಿಕೆ, ವಿಭಾಗ, ವಿತರಣೆ (ಕನ್ನಡ)*

## ಶಬ್ದ ಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| 6-8 | ಸರಿಯಿದ್ದರೆ | ....ಸಾಧಾರಣ |
| 9-10 | " | ....ಉತ್ತಮ |
| 11-12 | " | ....ಅತ್ಯುತ್ತಮ |

# ನನ್ನ ಬರಹಗಳು ಅನುಭವದ ಕೈಗನ್ನಡಿ




ಭಾಗ-2

ವಿದ್ಯೆ ಮುಂದುವರೆಸಿದ್ದರೆ ನನ್ನ ಭವಿಷ್ಯ ಯಾವ ರೀತಿ ರೂಪುಗೊಳ್ಳುತ್ತಿತ್ತೋ ತಿಳಿಯದು. ಮದುವೆಯಾಗುವವರೆಗೂ ಹಳ್ಳಿಯಲ್ಲಿ ಕಳೆದ ಎಂಟೊಂಭತ್ತು ವರುಷಗಳ ಕೌಮಾರ್ಯ ಜೀವನ, ನನ್ನ ಈವೊತ್ತಿನ ಸಾಹಿತ್ಯಕ, ರಾಜಕೀಯ ಬದುಕಿಗೆ ಅಮೂಲ್ಯ ಅನುಭವದ ಬುತ್ತಿಯನ್ನು ಕಟ್ಟಿಕೊಟ್ಟಿತು.

ಮೂರು ಅಂಕಣದ ನಮ್ಮ ದೊಡ್ಡ ಮನೆಯ ನೆಲ ಮಣ್ಣಿನದು, ಪ್ರತಿ ಶುಕ್ರವಾರ ಸಗಣಿಯಿಂದ ಸಾರಿಸಬೇಕು. ಮೈಲಿ ದೂರದ ಬಾವಿಯಿಂದ ನೀರು ಹೊತ್ತು ತರುವುದು, ಹೊಲದಲ್ಲಿ ಉಳುವ ಅಪ್ಪನಿಗೆ, ಕೂಲಿಯಾಳುಗಳಿಗೆ ಬುತ್ತಿ ಕೊಟ್ಟು ಬರುವುದು, ತಮ್ಮ ತಂಗಿಯರನ್ನು ಸಂಬಾಳಿಸುವುದು (ಈ ನಡುವೆ ಕೊನೆಯ ತಂಗಿ ಹುಟ್ಟಿದ್ದಳು) ಹೀಗೆ ದಿನವಿಡೀ ದುಡಿದು ರಾತ್ರಿ ಚಾಪೆಗೆ ಅಡ್ಡಾದರೆ ಸುಖನಿದ್ರೆ ಆವರಿಸುತ್ತಿತ್ತು.

ಚಿತ್ರದುರ್ಗದಲ್ಲಿ ಬಿ.ಎ. ಓದುತ್ತಿದ್ದ ಅಣ್ಣ ರಜೆಗೆಂದು ಹಳ್ಳಿಗೆ ಬಂದಾಗಲೆಲ್ಲಾ ನಾನು ಸ್ಕೂಲು ಬಿಟ್ಟಿದ್ದಕ್ಕೆ ಅಸಮಾಧಾನ ಬೇಸರ ವ್ಯಕ್ತಪಡಿಸುತ್ತಿದ್ದರು. "ಅವಳ ಹಣೆಬರದಲ್ಲಿ ಎಷ್ಟಿತ್ತೋ ಅಷ್ಟು ಆಯ್ತು ಬಿಡು" ಎಂದು ಹಿರಿಯರು ಹೇಳಿದಾಗ ಅವರ ಅಸಮಾಧಾನ ಮತ್ತಷ್ಟು ಹೆಚ್ಚುತ್ತಿತ್ತು.

"ಈಗ್ಲೂ ಕಾಲ ಮಿಂಚಿಲ್ಲ. ಪುಸ್ತಕಗಳನ್ನು ತಂದು ಕೊಡ್ತೀನಿ. ಮನೆಯಲ್ಲಿ ಓದಿ ಎಸ್.ಎಸ್.ಎಲ್.ಸಿ. ಪರೀಕ್ಷೆ ಕಟ್ಟಲಿ" ಎಂದು ಅಣ್ಣ



ಬಿ. ಟಿ. ಲಲಿತಾ ನಾಯಕ

ಹೇಳಿದಾಗ "ಹಂಗೇ ಮಾಡಪ್ಪ, ಯಾರು ಬ್ಯಾಡಾಂದ್ರು" ಎಂದು ಒಪ್ಪಿಗೆ ಇತ್ತರು ಅಪ್ಪ-ಅವ್ವ.

ನಾನು ಜಾಮಿಟ್ರಿ ಒಂದನ್ನು ಬಿಟ್ಟು ಉಳಿದೆಲ್ಲವನ್ನು ಚೆನ್ನಾಗಿ ಓದಿ ಅಣ್ಣನಿಗೆ ಒಪ್ಪಿಸುತ್ತಿದ್ದೆ. ಎರಡು ವರುಷ ಓದಿಕೊಂಡರೂ ಪರೀಕ್ಷೆಗೆ ಕೂರುವಷ್ಟು ಗಣಿತ ಕಲಿಯಲಾಗಲಿಲ್ಲ, ಬದಲಾಗಿ ಚಿಕ್ಕ ಚಿಕ್ಕ ಪ್ರಸಹನಗಳನ್ನು ರಚಿಸಿ ತಾಂಡಾದ ಪಡ್ಡೆ ಹುಡುಗ-ಹುಡುಗಿಯರನ್ನು ಮನೆಯಲ್ಲಿ ಸೇರಿಸಿಕೊಂಡು ಅವರೊಡನೆ ಅಭಿನಯಿಸಿ ಸಂತೋಷಪಡುತ್ತಿದ್ದೆ.

ಅಣ್ಣ, ಬಿ.ಎ. ಮುಗಿಸಿ ಚಿಕ್ಕಮಗಳೂರಿನಲ್ಲಿ ಸರಕಾರಿ ನೌಕರಿಗೆ ಸೇರಿದರು. "ಹೋಗಲಿ ಹಿಂದಿ

ಪರೀಕ್ಷೆನಾದ್ರು ಕಟ್ಟು, ಅದರಲ್ಲಿ ಒಂದು ಡಿಗ್ರಿ ಮಾಡಿಕೊ" ಎಂದು ಸಲಹೆ ಮಾಡಿ ಪುಸ್ತಕಗಳನ್ನು ತಂದುಕೊಟ್ಟರು.

ರೇಖಾಗಣಿತ, ಬೀಜಗಣಿತದಂತಹ ಯಾವ ಕಾಟವೂ ಇಲ್ಲದೆ ಹಲವಾರು ಕಥೆ ಕಾದಂಬರಿ, ವಿವಿಧ ವಿಷಯಗಳನ್ನೊಳಗೊಂಡ ಹಿಂದಿ ಪಾಠ ನನಗೆ ತುಂಬಾ ಸಂತಸವನ್ನುಂಟುಮಾಡಿತು. ಒಂದು ಬಾರಿಯೂ ಫೇಲಾಗದಂತೆ ಪ್ರಥಮ, ಮಧ್ಯಮದಿಂದ ವಿಶಾರದದವರೆಗೂ ಚಿಕ್ಕಮಗಳೂರು ಪರೀಕ್ಷಾ ಕೇಂದ್ರದಲ್ಲಿ ಕಟ್ಟಿ ಉತ್ತೀರ್ಣಳಾದೆ.

ಇದರಿಂದಾದ ತಾತ್ಕಾಲಿಕ ಲಾಭವೆಂದರೆ- ಕನ್ನಡದ ಕಥೆ ಕಾದಂಬರಿಗಳನ್ನು ಮಾತ್ರ ಓದುತ್ತಿದ್ದ ವಳು ಅಣ್ಣ ತರುತ್ತಿದ್ದ ಹಿಂದಿ ಪುಸ್ತಕಗಳನ್ನು ಓದಲಾರಂಭಿಸಿದೆ. ಜೊತೆಗೆ ಸ್ವೆಟರ್ ಹೆಣೆಯುವುದು, ಲೇಸು, ಮಣಿಯ ಕುಸುರಿ ಕೆಲಸಗಳನ್ನು ಮಾಡುತ್ತಿದ್ದೆ.

"ಹುಡುಗಿ ದೊಡ್ಡವಳಾಗಿ ನಾಲ್ಕೈದು ವರ್ಷ ಆಯ್ತು. ಲಗ್ನ ಮಾಡೋದಿಲ್ವಾ?" ನನ್ನ ತಾಯಿ-ಅಜ್ಜಿಗೆ ಊರಿನ ಹೆಂಗಸರು ಆಗಾಗ ಪ್ರಶ್ನೆ ಮಾಡುತ್ತಿದ್ದರು. ಅಜ್ಜಿ ನನ್ನ ಸೋದರತ್ತೆಯ ಮಗ ಗೋವಿಂದನೊಡನೆ ನನ್ನ ಮದುವೆ ಮಾಡುವ ಕನಸು ಕಾಣುತ್ತಿದ್ದರೆ ಇನ್ನೊಬ್ಬ (ಅವ್ವನ ಅವ್ವ) ಅಜ್ಜಿ, ನನ್ನ ಸೋದರಮಾವನಿಗೆ ಗಂಡು ಮಕ್ಕಳಿಲ್ಲದ ಕಾರಣ ಮೊಮ್ಮಗಳನ್ನು ಸೊಸೆಯಾಗಿ ತಂದುಕೊಳ್ಳುವ ಪ್ರಯತ್ನ ನಡೆಸಿತ್ತು.

"ಗೋವಿಂದ ಓದಿಲ್ಲ. ಪೋಲಿಬಿದ್ದು ಹಾಳಾಗಿದ್ದಾನೆ" ಎಂದು ಈ ಅಜ್ಜಿಯ ಬಾಯಿಯನ್ನು "ಮಗಳಂಗೇ ಬೆಳಸಿ ವಿದ್ಯೆ ಕಲಿಸಿದ್ದಾನೆ. ಅವನಿಗಾಗ್ಲೆ ವಯಸ್ಸಾಗ್ಯೆತೆ" ಎಂದು ಆ ಅಜ್ಜಿಯ ಬಾಯಿಯನ್ನು ಮುಚ್ಚಿಸಿದ ಅಪ್ಪ ಸರಿಯಾದ ಜೋಡಿಗಾಗಿ ತಪಾಸಣೆ ನಡೆಸತೊಡಗಿದರು.

ಅಣ್ಣನಿಗಾದರೋ ನನಗೆ ಯಾವುದೇ ಒಂದು ವಿದ್ಯೆ ಕಲಿಸುವುದರತ್ತಲೆ ಗಮನ. ಕಡೂರಿನ ಸಮಾಜಕಲ್ಯಾಣ ಇಲಾಖೆಯಿಂದ ನಡೆಸಲಾಗುತ್ತಿದ್ದ ಹೊಲಿಗೆ ತರಬೇತಿ ಕೇಂದ್ರಕ್ಕೆ ನನ್ನನ್ನು ಸೇರಿಸಿದರು.

ನಾನು ಮತ್ತೊಬ್ಬ ಗೆಳತಿಯೊಡನೆ ದಿನಾ ಬಸ್ಸಿನಲ್ಲಿ ಹೋಗಿ ಬರುತ್ತಿದ್ದೆ. ವರ್ಷ ಒಪ್ಪತ್ತಿನಲ್ಲಿ ಉತ್ತಮವಾಗಿ ಬಟ್ಟೆ ಹೊಲಿಯುವುದನ್ನು ಕಲಿತು ಪಾಸಾಗಿ ಒಂದು ಹೊಲಿಗೆ ಮಿಷನ್‌ನನ್ನು ಉಚಿತವಾಗಿ ಪಡೆದೆ. ಆ ಸಮಯಕ್ಕೆ ಮಧುಗಿರಿ ತಾಲೂಕು ತಿಪ್ಪಾಪುರ ತಾಂಡಾದ ಚಾಂಪ್ಲಾನಾಯ್ಕರು ನನ್ನನ್ನು ನೋಡಲು ಬಂದರು. ಪರಸ್ಪರ ಒಪ್ಪಿಯೂ ಆಯಿತು.

## ವಿವಾಹ

ಆದರೆ ಸರಕಾರಿ ನೌಕರಿ ಖಾಯಂ ಆಗುವವರೆಗೂ ಮದುವೆ ಮಾಡಿಕೊಡುವುದಿಲ್ಲವೆಂದು ಅಪ್ಪ-ಅಣ್ಣ ವಾಪಸ್ಸು ಕಳುಹಿಸಿದರು. ವರುಷದ ನಂತರ ಅವರು ಅಕೌಂಟ್ಸ್ ಕ್ಲರ್ಕ್ ಕೆಲಸ ಖಾಯಂ ಆಯಿತೆಂದು ತಿಳಿಸಿದಾಗ, 1964 ರಲ್ಲಿ ನಮ್ಮ ಮದುವೆ ನೆರವೇರಿತು. ನಾಯಕರು ಮದುವೆಯಲ್ಲಿ ನನ್ನ ಹೆಸರನ್ನು 'ಲಲಿತಾ' ಎಂದು ಬದಲಾಯಿಸಿದಾಗ ನನಗೆ ತುಂಬಾ ಸಂತೋಷವಾಯಿತು. ಹೆಸರು ಸರಿ ಇಲ್ಲವೆಂದು ಆಗಾಗ ನನಗೆ ಕಿರಿಕಿರಿಯಾಗುವುದು ತಪ್ಪಿತು.

ಮದುವೆಯಾಗಿ ಪತಿಯ ಮನೆ-ತಿಪ್ಪಾಪುರ ತಾಂಡಾಕ್ಕೆ ಕಾಲಿಟ್ಟ ನನಗೆ ಅಲ್ಲಿಯ ಬಡತನ-ಹಸಿವು ಕಂಡು ಖೇದವೆನಿಸಿತು. ನನ್ನ ತೌರೂರಿಗಿಂತಲೂ ಇದು ಅತ್ಯಂತ ಹೀನಾಯ ಸ್ಥಿತಿಯಲ್ಲಿತ್ತು. ಅತಿಯಾದ ಕುಡಿತ ಮತ್ತು ಅತಿಸಂತಾನವೇ ಅಲ್ಲಿಯ ದುಃಸ್ಥಿತಿಗೆ ಕಾರಣವಾಗಿತ್ತು.

ನನ್ನ ಮಾವನ ಹಿರಿಯ ಪತ್ನಿ 14 (ಒಂದು ಮಾತ್ರ ಹೆಣ್ಣು) ಮಕ್ಕಳ ತಾಯಿಯಂತೆ, ಇಬ್ಬರು ಮಾತ್ರ ಬದುಕಿದ್ದರು. ಕೊನೆಗೆ ಹೆರಿಗೆಯ ಸಮಯದಲ್ಲಿ ಆಕೆ ತೀರಿಕೊಂಡ ನಂತರ, ಮಾವ ನಾದಿನಿಯನ್ನೇ ಮರುಮದುವೆಯಾದರಂತೆ, ಅವರಿಗೆ ಏಳು ಗಂಡುಮಕ್ಕಳು. ಈ ತಾಂಡಾದಲ್ಲಿರೋ 70 ಮನೆಗಳು ಒಬ್ಬನೇ ಹಿರಿಯನ ಒಕ್ಕಲು, ಎಲ್ಲರೂ ಆತನ ಮಕ್ಕಳು, ಮೊಮ್ಮಕ್ಕಳು ಮರಿಮ

ಕ್ಕಳೇ. ಇಲ್ಲಿ ಯಾರೂ ಪರಕೀಯರಿಲ್ಲ. ಬೇಜಾರು ಪಟ್ಕೋಬೇಡ, ಎಂದು ನವ ವಧುವಾದ ನನಗೆ ಸಣ್ಣ ಅತ್ತೆ ಧೈರ್ಯ ಹೇಳಿದಾಗ ಸುಸ್ತಾಗಿ ಕುಳಿತೆ.

ಹೊಸಪೇಟೆಯ ಪುಟ್ಟ ಬಾಡಿಗೆ ಮನೆಯೊಂದ ರಲ್ಲಿ ಹೊಸ ಸಂಸಾರ ಹೂಡಿದ್ದೆವು. ತಿಂಗಳಿಗೆ 65 ರೂಪಾಯಿ ಅವರ ಸಂಬಳ. ನಾಲ್ಕಾರು ಪಾತ್ರೆ ಗಡಿಗೆ-ಮಡಿಕೆ, ಒಂದೆರಡು ತಟ್ಟೆ ಬಟ್ಟಲು, ಎರಡು ಟ್ರಂಕ್, ಇಲಾಖೆಯಿಂದ ಕೊಟ್ಟಿದ್ದ ಒಂದು ಹೊಲಿಗೆ ಯಂತ್ರ ಇವಿಷ್ಟು ನಮ್ಮ ಆಸ್ತಿ. ಅವರು ಕಛೇರಿಯಿಂದ ಬಂದೊಡನೆ ವಾಕಿಂಗ್ ಹೊರಡು ತ್ತಿದ್ದೆವು. ಆಗಾಗ ಸಿನಿಮಾಕ್ಕೆ ಸಹ. ಸಂಭ್ರಮದ ದಿನಗಳು ಅದು ಹೇಗೆ ಜಾರಿದವೋ ತಿಳಿಯದು.

ಮದುವೆಯಾದ ಮರುವರುಷವೇ ಒಬ್ಬ ಮಗ ಹುಟ್ಟಿದ, ಒಬ್ಬನೇ ಸಾಕು, ಇಬ್ಬರೇ ಸಾಕು ಎನ್ನುವುದರಲ್ಲೇ ನಾಲ್ವರು ಹುಟ್ಟಿ ಒಬ್ಬ ಮಗ ನೀರಿನ ತೊಟ್ಟಿಯಲ್ಲಿ ಬಿದ್ದು ಅಸುನೀಗಿದ.

ನಾಯಕರಿಗೆ ಹೊಸಪೇಟೆಯಿಂದ ಕೃಷ್ಣಾ ಮೇಲ್ದಂಡೆ ಯೋಜನೆಯ ನಾರಾಯಣಪುರ ಕ್ಯಾಂಪಿಗೆ ವರ್ಗಾಯಿಸಲಾಯಿತು. ನಂತರ ರೋಡ ಲಬಂಡ ಕ್ಯಾಂಪಿಗೆ, ವಾಸಿಸಲು ಕ್ವಾರ್ಟರ್ಸ್ ಕೊಡಲಾಯಿತು. ಬರುವ ಸಂಬಳದಲ್ಲಿ ಮಕ್ಕಳನ್ನು ಸಾಕುವ, ಓದಿಸುವ ಸರ್ಕಸ್ ಮಾಡಬೇಕಾಯಿತು.

ಮೊದ ಮೊದಲು ನಾನು ಬಿಡುವಿನ ವೇಳೆ ಯನ್ನು ಕಥೆ-ಕಾದಂಬರಿ- ಪತ್ರಿಕೆ ಓದಲು ವಿನಿ ಯೋಗಿಸುತ್ತಿದ್ದೆ. ಆದರೆ ಮನೆ ಖರ್ಚು ತೂಗಿಸು ವುದು ಕಷ್ಟವಾದಂತೆಲ್ಲಾ ಬೇರೆಯವರ ಬಟ್ಟೆಗಳನ್ನು ಹೊಲಿದು ಪುಡಿಗಾಸು ಸಂಪಾದಿಸತೊಡಗಿದೆ.

ರಂಜಾನ್ ಇತ್ಯಾದಿ ಮುಸ್ಲೀಮರ ಹಬ್ಬದಲ್ಲಿ ದಿನಕ್ಕೆ ಹತ್ತಾರು ಬಟ್ಟೆ ಹೊಲಿದುಕೊಡಲು ಒಪ್ಪಿಕೊಳ್ಳುತ್ತಿದ್ದೆ. ಕಛೇರಿಯಿಂದ ಬಂದೊಡನೆ ನಾಯಕರು ಸಿದ್ಧ ಉಡುಪಿಗೆ ಕಾಜ-ಗುಂಡಿ ಹೊಲಿದು ಸಹಕರಿಸುತ್ತಿದ್ದರು.

ಚಿಕ್ಕ ಸಂಬಳವೆಂದು ಬಲ್ಲ ಅವ್ವ-ಅಪ್ಪ ಹಳ್ಳಿಯಿಂದ ರಾಗಿ-ಅಕ್ಕಿ, ಶೇಂಗಾ, ಎಳ್ಳು, ಹೆಸರು, ಹುರುಳಿ, ಮೆಣಸಿನಕಾಯಿ, ಹುಣಸೆಹಣ್ಣು ಹೀಗೆ ಬೆಳೆದುದೆಲ್ಲವನ್ನು ಹೊತ್ತು ತರುತ್ತಿದ್ದರು. ಪ್ರತಿ ಗೌರಿಹಬ್ಬಕ್ಕೂ ಅಣ್ಣ ತಪ್ಪದೆ ಕಾಣಿಕೆ ತಲುಪಿಸುತ್ತಿ ದ್ದರು. ಅದಕ್ಕೆ ಪ್ರತಿಯಾಗಿ ನಾವು ದೀಪಾವಳಿ ಹಬ್ಬದಲ್ಲಿ ಅವ್ವ-ಅಪ್ಪನಿಗೆ ಕೃತಜ್ಞತೆಯ ಕಾಣಿಕೆ ಕಳುಹಿಸುತ್ತಿದ್ದೆವು.

ಅನಾರೋಗ್ಯ ಪೀಡಿತರಾಗಿದ್ದ ತಿಪ್ಪಾಪುರದ ಮಾವನವರ ಔಷಧಿ ಪೂರೈಕೆಗಾಗಿಯೂ ನಮ್ಮ ಉಳಿತಾಯದ ಹಣದಲ್ಲಿ ಸ್ವಲ್ಪ ಭಾಗವನ್ನು ಮೀಸಲಿಟ್ಟೆವು.

ಕ್ಯಾಂಪಿನಲ್ಲಿ ನಮಗೆ ಕೊಟ್ಟಿದ್ದ ಮನೆ ಎದುರು ವಿಶಾಲವಾದ ಕಾಂಪೌಂಡ್. ನಾವು ಅದರ ಇಂಚುಭಾಗವನ್ನು ವ್ಯರ್ಥಗೊಳಿಸದೆ ತರಕಾರಿ, ಹೂವು, ಹಣ್ಣು ಕರಿಬೇವು, ಬಾಳೆ, ಪಪ್ಪಾಯಿ ಇತ್ಯಾದಿ ಬೆಳೆಸಿದ್ದೆವು.

## ರೇಡಿಯೊ ಖರೀದಿಸಿದೆ

ಸಂತೆಯಿಂದ ತರಕಾರಿ-ಸೊಪ್ಪು ಕೊಳ್ಳದೆ ಮನೆ ಯಲ್ಲೇ ಬೆಳೆಸಿ ಹಣ ಉಳಿತಾಯ ಮಾಡುವುದೇ ನನ್ನ ಉದ್ದೇಶವಾಗಿತ್ತು. ನಾಯಕರು ನನ್ನಂತೆಯೇ ರೈತಮನೆತನದಿಂದ ಬಂದವರಾದ್ದರಿಂದ ಅವರು ಸಹ ಖುಷಿಯಿಂದ ಗಿಡ-ಮರಗಳ ಆರೈಕೆ ಮಾಡು ತ್ತಿದ್ದರು.

ಇಷ್ಟೊಂದು ಕೆಲಸಕಾರ್ಯಗಳ ನಡುವೆಯೂ ನಾನು ಬಿಡುವಿನ ವೇಳೆಯಲ್ಲಿ ಬರೆಯುತ್ತಿರುವು ದನ್ನು ಗಮನಿಸಿದ ಅವರು,ನನ್ನಟ್ರಂಕಿನಲ್ಲಿ ಹಿಂದೆ ಬರೆದು ಇರಿಸಿದ್ದ ಮತ್ತು ಇತ್ತೀಚೆಗೆ ಬರೆದಿದ್ದ ಪುಟಗಳನ್ನು ತೆಗೆದು ಓದಿದರು. ಅದರಿಂದ ಒಂದು ಪ್ರಹಸನವನ್ನು ಹೆಕ್ಕಿ ತೆಗೆದು ಇದು ನಿಜಕ್ಕೂ ತುಂಬ ಚೆನ್ನಾಗಿದೆ. ಇನ್ನೊಂದಿಷ್ಟು ಸರಿಯಾಗಿ ಬರೆದು ಆಕಾಶವಾಣಿಗೆ ಕಳುಹಿಸು, ಎಂದು ಸಲಹೆ ಮಾಡಿದರು.

"ಆಕಾಶವಾಣಿ ಎಲ್ಲಿರುತ್ತದೆ?" ಎಂಬ ನನ್ನ ಪ್ರಶ್ನೆಗೆ ವಿವರಿಸಿ ಹೇಳಿ, ನಾನು ತಿದ್ದುಪಡಿಗೊಳಿಸಿದ ನಾಟಕವನ್ನು ಓದಿ ಮೆಚ್ಚುಗೆ ಸೂಚಿಸಿ "ಚಂದ್ರ ಪರಾಭವ" ಎಂಬ ಹೆಸರನ್ನು ಅವರೇ ಸೂಚಿಸಿ ದರು. ಅವರ ಸಲಹೆ ಪ್ರಕಾರ ನಾನು ಧಾರವಾಡ

ಆಕಾಶವಾಣಿಗೆ 1967 ರಲ್ಲಿ ಕಳುಹಿಸಿದ ನಾಟಕ ಸ್ವೀಕೃತಗೊಂಡು 10 ರೂಪಾಯಿ ಸಂಭಾವನೆಯೂ ಲಭ್ಯವಾಯಿತು. ಅತಿಸಂತಾನ ವಸ್ತುವನ್ನು ಒಳಗೊಂಡ ಆ ವಿಡಂಬನೆಯನ್ನು ಸ್ನೇಹಿತರೊಬ್ಬರ ರೇಡಿಯೋದಲ್ಲಿ ಆಲಿಸಿ ಇಬ್ಬರೂ ಆನಂದ ಭರಿತರಾದೆವು.

ಆಕಾಶವಾಣಿಯವರ ಪ್ರೋತ್ಸಾಹ ಹಾಗೂ ಮನೆಯವರ ಮೆಚ್ಚುಗೆ ಇವುಗಳಿಂದ ಸ್ಫೂರ್ತಿ ಪಡೆದ ನಾನು ಒಂದಾದ ಮೇಲೊಂದರಂತೆ ಹತ್ತು ನಾಟಕಗಳನ್ನು ಬರೆದು ಕಳುಹಿಸಿದೆ. ಎಲ್ಲವೂ ಪ್ರಸಾರವಾಗಿ ಬಂದ ಸಂಭಾವನೆಯಲ್ಲಿ ನಾವೊಂದು ರೇಡಿಯೋವನ್ನು ಖರೀದಿಸಿದೆವು.

ನೆರೆಹೊರೆಯವರಿಂದ, ಸಂಬಂಧಿಕರಿಂದ, ಆಕಾಶವಾಣಿ ಶ್ರೋತೃಗಳಿಂದ ಪ್ರಶಂಸೆಗಳು ಬಂದಾಗ ನಾನು ಒಬ್ಬ ಬರಹಗಾರ್ತಿ ಎಂಬ ಆತ್ಮವಿಶ್ವಾಸ ಮೂಡಿ ಬಂದಿತು.

ಪ್ರಜಾವಾಣಿಗೆ ಒಂದು ಜಾನಪದ ಕಥೆಯನ್ನು ಕಳುಹಿಸಿದ್ದು, ದೀಪಾವಳಿ ವಿಶೇಷಾಂಕದಲ್ಲಿ ಅದು ಪ್ರಕಟವಾದಾಗ ರೇಡಿಯೋ ನಾಟಕಗಳ ಗೀಳು ಹೋಗಿ ಕಥೆ ಕವನ ಬರೆಯುವ ಗೀಳು ಹಿಡಿಯಿತು.

'ಸುಧಾ' ಪತ್ರಿಕೆಗೆ ಕಿವಿಮಾತು, ಕಾಮಧೇನು ವಿಭಾಗಕ್ಕೆ ಲೇಖನಗಳು, 'ಮಯೂರ' ಮುಂತಾದ ಮಾಸಪತ್ರಿಕೆಗಳಿಗೆ ಕಥೆ-ಕವನಗಳು-ಹೀಗೆ ಬರೆಯಲಾರಂಭಿಸಿದೆ. ಸಂಭಾವನೆ ಕೊಡದೆ ಪ್ರಕಟಿಸುವ ಪತ್ರಿಕೆಗಳಿಗೆ ಬರಹ ಕಳುಹಿಸುತ್ತಿರಲಿಲ್ಲ.

ಏಕೆಂದರೆ ನಾನು ಪಡುವ ಶ್ರಮಕ್ಕೆ ಅಲ್ಪಪ್ರಮಾಣದ ಸಂಭಾವನೆಯಾದರೂ ಬರಲಿ ಎಂಬುದು ನನ್ನ ಅಭಿಲಾಷೆಯಾಗಿತ್ತು.

ನನ್ನ ಮಕ್ಕಳ ಬಾಣಂತನದಲ್ಲಿ ಒಂದೆರಡು ತಿಂಗಳು ನನ್ನ ಅವ್ವ ಬಂದಾಗ, ಬಟ್ಟೆ ಒಗೆಯಲು ಕೆಲಸದವರಿಗೆ ತಿಂಗಳಿಗೆ 3 ರಿಂದ 5 ರೂ.ಗಳನ್ನು ಕೊಟ್ಟು ಇರಿಸುತ್ತಿದ್ದುದಷ್ಟೆ, ನಂತರ ಮನೆಯ ಕೆಲಸಗಳನ್ನು ನಾವೇ ಮಾಡಿಕೊಳ್ಳುತ್ತಿದ್ದೆವು.

ಮನೆ ಕಸುಗುಡಿಸುವುದು, ಬಟ್ಟೆ ಒಗೆಯುವುದು, ತರಕಾರಿ ಹೆಚ್ಚಿಕೊಡುವುದು ಇಂಥವನ್ನೆಲ್ಲಾ ನಾಯಕರು ಆಗಾಗ ಮಾಡಿಕೊಟ್ಟು ಸಹಕರಿಸುತ್ತಿದ್ದರು. ಆದ್ದರಿಂದಲೇ ನಾನು ಎಲ್ಲಾ ಕೆಲಸಗಳ ನಡುವೆ ಬಿಡುವು ಮಾಡಿಕೊಂಡು ರಾತ್ರಿ ಹನ್ನೆರಡು ಒಂದು ಗಂಟೆಯವರೆಗೂ ಬರೆಯುತ್ತಾ ಕೂರುತ್ತಿದ್ದೆ.

ಆ ಸಮಯದಲ್ಲೆಲ್ಲ ನಾಯಕರು ಸ್ನೇಹಿತರೊಂದಿಗೆ ಇಸ್ಪೇಟ್ ಆಡುತ್ತಾ ಕೂರುತ್ತಿದ್ದರು. ಉಗಾದಿಯ ಕರಿ, ದೀಪಾವಳಿಯ ಲಕ್ಷ್ಮೀಪೂಜೆ ಮುಂತಾದ ಸಂದರ್ಭದಲ್ಲಂತು ಇಡೀ ರಾತ್ರಿ ಇಸ್ಪೇಟ್ ಆಡಿ ಬೆಳಿಗ್ಗೆ ಸ್ನಾನಕ್ಕೆ ಮನೆಗೆ ಬರುತ್ತಿದ್ದರು. ಜೊತೆಗೆ ಸಿಗರೇಟು ಸೇದತೊಡಗಿದ್ದರು.

ಇದರಿಂದ ನಾನು ಕಳವಳಗೊಂಡೆ. ಜೂಜು-ಸಿಗರೇಟು ಇವೆಲ್ಲ ಒಳ್ಳೆಯದಲ್ಲ ಎಂದು ಹೇಳತೊಡಗಿದೆ. ಕೇಳದಾಗ ಪ್ರತಿಭಟಿಸಿದೆ. ಅವರು ತಿರುಗಿಬಿದ್ದರು. "ನಾನು ಮದುವೆ ಮಾಡಿಕೊಂಡು ಬಂದ ಮೂರು ಕಾಸಿನ ಹೆಣ್ಣು ನೀನು. ನಿನ್ನಿಂದ ನನಗೆ ಉಪದೇಶ ಬೇಕಾಗಿಲ್ಲ. ನಾನು ದುಡಿಯುತ್ತೇನೆ-ಕಳೆಯುತ್ತೇನೆ ಅಥವಾ ಸಂಪಾದಿಸುತ್ತೇನೆ. ಅದನ್ನು ಕೇಳುವ ಹಕ್ಕು ನಿನಗಿಲ್ಲ- ತಂದು ಹಾಕಿದ್ದನ್ನು ತಿಂದು ನಿನ್ನ ಕೆಲಸ ನೀನು ಮಾಡಿಕೊಂಡಿರು ಅಷ್ಟೆ." ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರು.

ನಾನು ಚಿಂತಿತಳಾದೆ, ಅವ್ವ ಅಪ್ಪನ ತನಕ ದೂರು ಒಯ್ಯುವುದು ತರವಲ್ಲ ಎಂದು ಸಹಿಸಿಕೊಂಡೆ. ತೌರಿನವರು ಅತ್ತೆ ಮನೆಯವರೆಲ್ಲರೂ ನಮ್ಮನ್ನು ಆದರ್ಶದಂಪತಿಗಳೆಂದೇ ಗುರುತಿಸುತ್ತಿದ್ದರು. ಅವರ ಭಾವನೆಗಳಿಗೆ ಧಕ್ಕೆ ತರುವದು ಬೇಡವೆಂದು ಮೌನವಹಿಸಿದೆ.

## ಮೊಟ್ಟಮೊದಲ ಕೃತಿ

ನನ್ನ ಬೇಸರ-ವ್ಯಥೆ ನನ್ನ ಬರಹದಲ್ಲಿ ಕಾಣಿಸಿಕೊಂಡವು. "ಮೂರು ಕಾಸಿನ ಹೆಣ್ಣು" ಎಂಬ ವಿಡಂಬನೆ ಸುಧಾದಲ್ಲಿ ಪ್ರಕಟವಾದರೆ, "ಅವಳು ನಾನು ಮತ್ತು ಕನ್ನಡಿ" ಎಂಬ ವಿಡಂಬನೆ ಮಯೂರದಲ್ಲಿ ಬಂದಿತು.

ಅದನ್ನು ಓದಿದ ನಾಯಕರು "ನನ್ನ ಮೇಲೆ

ಬರೆದು ಬಿಟ್ಟಿದ್ದೀಯ! ಲೇಖನ ತುಂಬ ಚೆನ್ನಾಗಿದೆ. ನನ್ನ ಸ್ನೇಹಿತರೆಲ್ಲಾ ಮೆಚ್ಚಿಕೊಂಡರು." ಎಂದಾಗ ನನಗೆ ಅವರ ಮೇಲಿದ್ದ ಅಸಮಾಧಾನ ದೂರವಾಗಿ ಅಭಿಮಾನ ಮೂಡಿ ಬಂದಿತು.

ಆದರೆ ಅವರು ಇಸ್ಪೇಟ್-ಸಿಗರೇಟ್ ಬಿಡಲಿಲ್ಲ. ನಾನು ದೈಹಿಕ ಶ್ರಮ, ಮಾನಸಿಕ ವೇದನೆಯಿಂದ ಆಗಾಗ ಖಾಯಿಲೆ ಬೀಳತೊಡಗಿದೆ. ಅಂತಹ ಸಂದರ್ಭದಲ್ಲಿ ಅವರು ಔಷಧಿ, ಉಪಚಾರ, ಅಡುಗೆ ಮಕ್ಕಳಿಗೆ ಶಾಲೆಗೆ ಕಳುಹಿಸುವ ಕೆಲಸ ಇವೆಲ್ಲವನ್ನೂ ನಿಭಾಯಿಸುತ್ತಾ ನನ್ನ ಹಾಗೂ ಮಕ್ಕಳ ಅಚ್ಚುಮೆಚ್ಚಿನವರಾಗಿಬಿಡುತ್ತಿದ್ದರು.

ನನ್ನ ಆರೋಗ್ಯ ಸುಧಾರಿಸಿದೊಡನೆ ಯಾವುದೇ ಆಲಸ್ಯವಿಲ್ಲದೆ ನನ್ನ ದೈನಂದಿನ ಕೆಲಸ ಕಾರ್ಯಗಳಲ್ಲಿ ಬರವಣಿಗೆಯಲ್ಲಿ ಮಗ್ನಳಾಗುತ್ತಿದ್ದೆ. ಪ್ರತಿದಿನ ಮಕ್ಕಳಿಗೆ ರಾತ್ರಿ ಪಾಠ ಹೇಳಿಕೊಡುವ ಹೊಣೆಯೂ ನನ್ನ ಮೇಲಿತ್ತು. 'ಗಣಿತ ಇಂಗ್ಲೀಷ್ ಇವುಗಳನ್ನು ನೀವು ಮಕ್ಕಳಿಗೆ ಹೇಳಿಕೊಡಿ' ಎಂದು ಅವರಿಗೆ ಪೀಡಿಸಿದಾಗ ಒಂದೊಂದು ಗಂಟೆ ಚೆನ್ನಾಗಿ ಹೇಳಿಕೊಡುತ್ತಿದ್ದರು.

ಆದರೆ 'ಮನಸ್ಸು ಸ್ನೇಹಿತರಲ್ಲಿ-ದೇಹ ಮನೆಯಲ್ಲಿ' ಆಗಿರುತ್ತಿತ್ತು.

ಕ್ಯಾಂಪಿನ ಕೆಲವು ಗಂಡಸರು ತಮ್ಮ ಕಛೇರಿ ಕೆಲಸ ಮುಗಿಸಿಕೊಂಡು ಮನೆಗೆ ಬಂದು. ಪತ್ನಿ ಮಕ್ಕಳೊಡನೆ ಸಂಜೆ ವಾಕಿಂಗ್ ಹೋಗುತ್ತಿದ್ದರು. ನಾವೂ ಸಹ ಒಂದು ಮಗು ಹುಟ್ಟುವವರೆಗೂ ವಾಕಿಂಗ್ ಸಂಸ್ಕೃತಿ ಪಾಲಿಸಿದೆವು. ನಂತರ ಅವರು ಎಷ್ಟು ಕರೆದರೂ ತಪ್ಪಿಸಿಕೊಳ್ಳುತ್ತಿದ್ದರು.

'ಮಕ್ಕಳನ್ನು ನೀನೇ ಕರೆದುಕೊಂಡು ವಾಕಿಂಗ್ ಹೋಗಿ ಬಾ. ನೀನು ಒಳ್ಳೆ ಚೆನ್ನಾಗಿ ಕಥೆ ಹೇಳ್ತೀಯಾ. ಕ್ಯಾಂಪಿನ ಎಲ್ಲಾ ಮಕ್ಕಳು ನಿನ್ನನ್ನು ಇಷ್ಟಪಡುತ್ತಾರೆ' ಎಂದು ಹೇಳಿಬಿಡುತ್ತಿದ್ದರು. 'ಅಮ್ಮ ಒಂದು ಕಥೆ ಹೇಳು, ಮಾಮಿ ಒಂದು ಕಥೆ ಹೇಳು, ಆಂಟಿ ಕಥೆ' ಎಂದು ನನ್ನ ಮಕ್ಕಳು, ಹಾಗೂ ಕ್ಯಾಂಪಿನ ಹತ್ತಾರು ಮಕ್ಕಳು ನನ್ನನ್ನು ಸುತ್ತುವರೆದಾಗ ಸಂಜೆಹೊತ್ತು ಕ್ಯಾಂಪಿನ ಆಚೆ ಇದ್ದ ಹೊಲಗಳಲ್ಲಿ ಕುಳಿತು ಕಥೆ ಹೇಳುವುದು-ಮಕ್ಕಳಿಂದ ಹೇಳಿಸುವುದು ಮಾಡಿ ಮಕ್ಕಳ ಮನಸ್ಸಿಗೆ ಮುದನೀಡಿ ಮನೆಗೆ ಕರೆತರುತ್ತಿದ್ದೆ.

ಕಥೆಗಿಥೆ ಬರೆಯುತ್ತೇನೆ ಎಂಬ ಕಾರಣಕ್ಕಾಗಿ ಕ್ಯಾಂಪಿನ ಜನ ನನ್ನನ್ನು ಹೆಚ್ಚು ಆದರದಿಂದ ಕಾಣುತ್ತಿದ್ದರು. ನಾನು ಅವರೆಲ್ಲರ ಜೊತೆ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆ. ಕೆಲವು ಸಭೆ-ಸಮಾರಂಭಗಳಿಗೆ ಭಾಷಣ ಮಾಡಲು ಸುತ್ತಮುತ್ತಲ ಊರಿನವರು ನನ್ನನ್ನು ಆಹ್ವಾನಿಸುತ್ತಿದ್ದರು. ಸಣ್ಣ ಪುಟ್ಟ ಪತ್ರಿಕೆಗಳಿಗೆ ಸ್ಮರಣಸಂಚಿಕೆಗಳಿಗೆ ಲೇಖನಗಳನ್ನೂ ಸಹ ಕೇಳುತ್ತಿದ್ದರು ಪ್ರೀತಿಯಿಂದ ಬರೆದು ಕೊಡುತ್ತಿದ್ದೆ. ಆಗೆಲ್ಲಾ ನಾಯಕರು ತುಂಬ ಸಹಕರಿಸುತ್ತಿದ್ದರು. ಸಭೆ ಸಮಾರಂಭಗಳಲ್ಲಿ ನನ್ನ ಬಗ್ಗೆ ಬಂದ ಪ್ರಶಂಸೆಯಿಂದ ಸಂತಸಗೊಳ್ಳುತ್ತಿದ್ದರು.

ಲಿಂಗಸುಗೂರಿನ ಪರ್ವತಯ್ಯ ಮಾಸ್ತರರು ನನ್ನ ಎಲ್ಲಾ 10 ರೇಡಿಯೋ ನಾಟಕಗಳನ್ನು ಸೇರಿಸಿ "ಚಂದ್ರ ಪರಾಭವ" ಎಂಬ ಹೆಸರಿನ ಸಂಕಲನವನ್ನು 1972ರಲ್ಲಿ ಹೊರತಂದರು. ಅದು ನನ್ನ ಮೊಟ್ಟ ಮೊದಲ ಕೃತಿ, ಜಿ. ಶಾಮಾಚಾರ್ಯರು ಅದನ್ನು ಬಿಡುಗಡೆ ಮಾಡಿದರು.

ಕೃಷ್ಣಾ ಮೇಲ್ದಂಡೆ ಯೋಜನೆ ಬಗ್ಗೆ ಏನೇನು ಅವ್ಯವಹಾರ ನಡೆಯುತ್ತಿದೆ? ಕಾಲುವೆ ತೋಡುವಾಗ, ಅಳತೆ ಮಾಡುವಾಗ ಅಧಿಕಾರಿಗಳು, ಕಾಂಟ್ರಾಕ್ಟರುಗಳು ಶಾಮೀಲಾಗಿ ಸರಕಾರಕ್ಕೆ ಹೇಗೆ ತಪ್ಪು ಮಾಹಿತಿ ಕೊಡುತ್ತಾರೆ? ಆಗದ ಕೆಲಸಗಳಿಗೆ "ಬಿಲ್ ಮಾಡು" ಎಂದು ತಮ್ಮಂತಹ ನೌಕರರನ್ನು ಹೇಗೆ ಪೀಡಿಸುತ್ತಾರೆ-ಇತ್ಯಾದಿಗಳನ್ನೆಲ್ಲಾ ನಾಯಕರು ನನಗೆ ವಿವರಿಸಿ, ಹೇಳಿ, "ಇದರ ಬಗ್ಗೆ ಬರಿ. ಆದರೆ ಯಾರ ಹೆಸರೂ ಬೇಡ-ನಾನು ಅಲ್ಲಿಯ ನೌಕರ, ನೆನಪಿರಲಿ" ಎಂದು ಎಚ್ಚರಿಸುತ್ತಿದ್ದರು.

(ಮುಂದುವರೆಯುವುದು)

(ಕೃಪೆ: ಲೇಖ-ಲೋಕ- ಕರ್ನಾಟಕ ಲೇಖಕಿಯರ ಸಂಘದ ಪ್ರಕಟಣೆ.)

ಪಾಪ ಪ್ರಾಯಶ್ಚಿತ್ತ

87

# ಹಣದ ಹರಣ 'ಹಗರಣ'

ಆಸೆಯನ್ನು ಜಯಿಸುವುದು ಹಗುರಾದ ಕೆಲಸವಲ್ಲ. ಬೆಟ್ಟದಡಿಯಿಂದ ತುಟ್ಟ ತುದಿಯವರೆಗೆ ಏರುವಷ್ಟು ಕಷ್ಟಕರ ಅದು. ಹಣದಾಸೆಗೆ ಈ ಮಾತು ಇನ್ನೂ ಹೆಚ್ಚು ಅನ್ವಯ. ಪರಧನದ ಪ್ರಲೋಭನವನ್ನು ಪ್ರತಿರೋಧಿಸಲು ಆತನು ಎಂಟೆದೆಯ ಬಂಟನಾಗಿದ್ದರೆ ಮಾತ್ರ ಸಾಧ್ಯ. ಮನದಾಳದೊಳಗೆ ನೈತಿಕ ಅಳುಕು ಉಳ್ಳವನು ಮಾತ್ರ ಸಮರ್ಥ. ತನ್ನದಲ್ಲದುದನ್ನು ತನ್ನದಾಗಿಸುವ ತವಕ ಚಿಕ್ಕ ಬಾಲಕನಿಗೆ. ನೆರೆಮನೆಯ ಮಗುವಿನ ಬಳಿಯಿದ್ದ ಆಟದ ಚೆಂಡು, ಗೋಲಿ ಗುಂಡು ಕಂಡೊಡನೆ ಅದನ್ನು ಜೇಬಿಗೆ ಸೇರಿಸಿಕೊಂಡು ಅಲ್ಲಿಂದ ಕಾಲು ಕಿತ್ತುವ ಸ್ವಭಾವ. ತನ್ನ ಹತ್ತಿರ ಅಂತಹ ವಸ್ತು ಇಲ್ಲವೆಂದಲ್ಲ. ಅನ್ಯರದನ್ನು ತನ್ನದಾಗಿಸುವ ಬುದ್ಧಿ ಸಲ್ಲದೆಂದು ತಾಯಿ ಅದೆಷ್ಟು ತಿಳಿ ಹೇಳಿದರೂ ತನ್ನ ನಿಲುವಿನಿಂದ ಒಂದಂಗುಲ ಕೂಡ ಕದಲಲಾರದಂತಹ ಈ ಹಟ ದೊಡ್ಡವನಾದ ಮೇಲೆ ಹಟವಾಗಿ ಬೆಳೆಯುವುದೇನೊ! ಎಷ್ಟಾದರೂ 'ಮಗು ಮಾನವನ ಜನಕ' ಅಲ್ಲವೇ ?

ಅಮಿತ ಪರಾಕ್ರಮದಿಂದ ಅವಿರತ ಪರಿಶ್ರಮದಿಂದ ಪಾಂಡವರು ಸಂಪಾದಿಸಿದ ಸಿರಿ ಸಂಪತ್ತು, ರಾಜಸೂಯಯಾಗದ ಕಾಲಕ್ಕೆ ಕೌರವರ ಕಣ್ಣಿಗೆ ಬಿದ್ದಿತು. ದಾಯಾದಿ ಮತ್ಸರ ಉರಿದೆದ್ದಿತು. ಎಂತಾದರೂ ಅದನ್ನು ಕಬಳಿಸುವ ಆಕಾಂಕ್ಷೆ. ಶಕುನಿ ಪ್ರಚೋದಿತ ಕಪಟ ದ್ಯೂತದ ಹೊಂಚು ಹಾಕಿದ್ದಾಯಿತು. ಪರಧನದ ಪ್ರಲೋಭನ ಅದೆಷ್ಟು ಪ್ರಬಲ ಎಂಬುದಕ್ಕೆ ಈ ಸಂಗತಿಯೆ ಸಾಕ್ಷಿ.

ಮನು ನಿರ್ದೇಶಿಸುವಂತೆ 'ಅರ್ಥದೂಷಣಂ' ಎಂದರೆ 'ಅರ್ಥಾನಾಂ ಅಪಹರಣಂ' ಎಂಬುದು 'ಕ್ರೋಧಜ' ವ್ಯಸನಗಳಲ್ಲಿ ಒಂದೆನಿಸಿದೆ. ಹೆರವರ ಸೊತ್ತನ್ನು ಅಪಹರಿಸುವ ದುಷ್ಕೃತ್ಯ, ಕಿಸೆಗಳ್ಳತನ ಕಳುವು, ದರೋಡೆಗಳಂತಹ ಪ್ರಕರಣಗಳಲ್ಲಿ ಅಭಿವ್ಯಕ್ತ. ಸರ್ಕಾರಿ, ಅರೆಸರ್ಕಾರಿ ಕಚೇರಿಗಳಲ್ಲಿ ಬೇರುಬಿಟ್ಟ ಲಂಚಗುಳಿತನ, ಭ್ರಷ್ಟ ವ್ಯವಹಾರಕೂಡ ಹೆರವರ ಜೇಬಿಗೆ ಕತ್ತರಿ ಹಾಕಿ ಅನ್ಯರಿಗೆ ಸೇರಿದ ಸೊತ್ತನ್ನು ಎತ್ತಿ ಹಾಕುವ ತಂತ್ರವೇ ಎನಿಸಿದೆ.

ಪ್ರಾಚೀನ ಭಾರತದ ಅರ್ಥಶಾಸ್ತ್ರಜ್ಞ ಕೌಟಿಲ್ಯ ವಿವರಿಸುವಂತೆ. ರಾಜಸೇವಾ ಕಾರ್ಯದಲ್ಲಿ ನಿರತರಾದ ವಿವಿಧ ಇಲಾಖೆಯ ಅಧಿಕಾರಿಗಳು ಮೀನುಗಳಿದ್ದಂತೆ. ಕೆರೆ ಹೊಂಡಗಳಲ್ಲಿನ ಈ ಜಲಚರಗಳು ಯಾವ ಕಾಲಕ್ಕೆ ಅಲ್ಲಿನ ಹುಳು ಹುಪ್ಪಡಿಗಳನ್ನು ತಿನ್ನುತ್ತವೆಯೊ. ನೀರು ಕುಡಿಯುತ್ತವೆಯೋ ಎಂಬುದನ್ನು ಗುರುತಿಸುವುದು ಬಲು ದುಸ್ತರ. ಹಾಗೆಯೆ ಯಾವ ಹೊತ್ತು ಯಾವ ನೆಪ ಮುಂದೊಡ್ಡಿ ಅಧಿಕಾರಿಗಳು ರಾಜನ ಬೊಕ್ಕಸದಿಂದ ರಹಸ್ಯವಾಗಿ ಹಣ ಪಡೆಯುತ್ತಾರೊ ಹೇಳಲಿಕ್ಕಾಗದು.

ಮೀನು ಮತ್ತು ಮಾನವರಲ್ಲಿ ಒಂದು ಅಂತರ. ನಾಳೆಗಾಗಿ, ಮುಂದಿನ ಪೀಳಿಗೆಗಾಗಿ ಎಂದು ಮೀನು ಒಂದಿಷ್ಟು ಕೂಡ ತೆಗೆದಿರಿಸುವುದಿಲ್ಲ. ಮಾನವ ಹಾಗಲ್ಲ. ಶೇಖರಿಸಿ ಇಡುತ್ತಾನೆ. ಅಲ್ಲದೆ, ಸ್ವದೇಶಿಯರ

ಕಾಕದೃಷ್ಟಿ ಅದರ ಮೇಲೆ ಬಿದ್ದೀತೆಂಬ ಯೋಚನೆಯಿಂದ, ಬೇರೊಂದು ತಂತ್ರ ಹೂಡುತ್ತಾನೆ. ಖಂಡಾಂತರ ಕ್ಷಿಪಣಿಗೆ ಅದನ್ನು ಕಟ್ಟಿ ಹಾಕಿ ವಿದೇಶಕ್ಕೆ ಸಾಗಿಸಿ ಅಲ್ಲಿ ಗುಟ್ಟಾಗಿ ಇರಿಸುತ್ತಾನೆ. ಆದರೇನು? ಸೂರ್ಯ ಚಂದ್ರ, ಭೂಮಿ ಆಕಾಶಗಳಂತಹ ಹದಿನಾಲ್ಕು ಪ್ರತ್ಯಕ್ಷ ವೀಕ್ಷಕರಿಂದ ಇದನ್ನು ಬಚ್ಚಿಡಲಾದೀತೆ? ಸುಗಂಧ ದುರ್ಗಂಧ. ಬೀರುವ ವಸ್ತುವನ್ನು ಅದೆಂತು ಮುಚ್ಚಿಡಲಾದೀತು? ಗುಟ್ಟು ರಟ್ಟಾಗುತ್ತದೆ.

ಮಾನವ ಮರುಳನೋ, ಮರೆಗುಳಿಯೋ! ಆತನನ್ನು, ರೂಪಿಸಿದ ಪ್ರಕೃತಿಗಾದರೂ ಗೊತ್ತಿದೆಯೋ ಇಲ್ಲವೊ? 'ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ' ಎಂದರು. ಪುರಾತನರು. ಸುದ್ದಿ ಇಂದು ಬಿಸಿ ಬಿಸಿ ಅದುವೆ ನಾಳೆ ಹಸಿ ಬಿಸಿ ನಾಡಿದ್ದು? ಎಲ್ಲ ಹುಸಿ, ಹಸಿ ಹುಸಿ ಯಾರನ್ನು ಕುರಿತು ಹಗರಣದ ಹುಯಿಲು ಎದ್ದಿತ್ತೋ, ಆತನು ಕಿಸಿ ಕಿಸಿ ನಗುತ್ತಾನೆ. ಮೊಗವೆತ್ತಿ ಮೆರೆದಾಡುತ್ತಾನೆ, 'ಕೊನೆಗೂ ಪಾರಾದೆನಲ್ಲ!' ಎಂದು.

ಅಧಿಕಾರದ ಹುದ್ದೆಯಲ್ಲಿದ್ದುಕೊಂಡು ಹಣ ಹರಣ ಗೈಯುವ ಹವ್ಯಾಸ ಇರುವವರಿಗೆ ಹಗರಣದ ಪ್ರಕರಣ ಇದ್ದುದೆ, 'ಪ್'ಕಾರಕ್ಕೆ ಹ್ ಕಾರವು, 'ಕ್' ಕಾರಕ್ಕೆ 'ಗ್' ಕಾರವು ಆದೇಶವಾಗಿ ಪ್ರಕರಣದ ರೂಪಾಂತರವೇ 'ಹಗರಣ' ಎನ್ನಬಹುದಲ್ಲವೆ?

ಅಳತೆಗೆಟ್ಟು ಗಂಟಲಿಗಿಳಿಸಿದರೆ ತಿಂದುದನ್ನು ಅರಗಿಸುವುದು ಹಗುರಾದ ಮಾತಲ್ಲ. ಸರಕಾರಿ ಬೊಕ್ಕಸ ತನಗೆ ತೀರ ಹತ್ತಿರ ಎಂದು ಬಗೆದು ಅಧಿಕಾರಿಯು ಹಣಕ್ಕೆ ಬಾಯಿ ಬಿಡುವುದೆ? ಎಂಥದೋ ಬಿಲ್ಲು ತಯಾರಿಸಿ ಹಣ ಗುಳುಂ! ಧನದಾಸೆ ಹಗರಣಕ್ಕೆ ಪ್ರಬಲ ಕಾರಣ, 'ದುಡ್ಡೇ ದೊಡ್ಡಪ್ಪ' ಎನ್ನುವವನಿಗೆ ಹಣವೇ 'ಹರ' ಅದುವೆ ಅವನಿಗೆ 'ಹರಣ' ಅಂದರೆ 'ಪ್ರಾಣ' ಕೂಡ.

ಮಾನವ ಶರೀರ ಪಂಚಮಹಾಭೂತಾತ್ಮಕ, 'ಹಗರಣ' ಶಬ್ದವೂ ಪಂಚ ಪದಾತ್ಮಕ. ಹರ ಗರ,ಹಣ, ರಣ ಗಣ ಎಂಬಿವು ಇಲ್ಲಿ ಸಮಾವಿಷ್ಟ. ಇಲ್ಲಿ ಅಂತರ್ಗತನಾದ ಹರನ ರಕ್ಷೆ ತಮಗಿರುವಾಗ ಶಿಕ್ಷೆಯ ಭಯವೆಲ್ಲಿ? ಎಂಬ ಭರವಸೆ ಇವರಿಗುಂಟೋ ಏನೊ? ಹರನಾದರೊ ಸಮಸ್ತರ ಕಲ್ಯಾಣಕ್ಕಾಗಿ ಹಾಲಾ ಹಲ ಸೇವಿಸಿದವ, ತಾವಾದರೊ, ಸ್ವಂತ ಕಲ್ಯಾಣಕ್ಕಾಗಿ, ಹಣ ಸೇವಿಸುವವರು. ಇದೊಂದೆ ಅಂತರ. ಸಮಸ್ತ ಮತ್ತು 'ಸ್ವಂತ' ಪದಗಳ ವ್ಯತ್ಯಾಸ ಅಳಿಸಿ ಹಾಕಲು ಹಗರಣದ ಉದಾಹರಣೆಗಳು ಬೇಕೆ ಮಾದರಿಗಾಗಿ? ಹಸುಗಳ ಬಾಯಿಗೆ ಮೇವು ಲಭಿಸಿತೋ ಇಲ್ಲವೊ, ಹಗರಣ ಧುರೀಣರ ಜೇಬಿಗೆ ಮಾತ್ರ ಹಣ ಭರ್ತಿ. ಸೇತುವೆಯನ್ನು ಕಟ್ಟುವ ಕೆಡಹುವ ನೆಪದಲ್ಲಿ ಹಣದ ಮಂಜೂರಿ. ಬಣ್ಣದ ಟೀವಿ,ರಸಗೊಬ್ಬರ ಮೊದಲಾದ ಖರೀದಿ, ಕಾಗದದ ಮೇಲೆಯೇ, ಕಾಮಗಾರಿ ಪೂರ್ತಿ. ಸುಭದ್ರ ಕೊಠಡಿಯಿಂದ ಅದೃಶ್ಯ 'ಶಕ್ತಿ' ಗಳ ಮೂಲಕ ಉತ್ತರ ಪತ್ರಿಕೆಗಳನ್ನು ಹೊರತಂದು, ಅವುಗಳ 'ರೂಪ ಬದಲಜಾ, ರಂಗ ಬದಲಜಾ' ಜರುಗಿಸಿ ಯಾರಿಗೊ ಅಧಿಕ 'ಗುಣ' ತಮಗೋ ಅತ್ಯಧಿಕ 'ಹಣ' ಇಂತಹವು ನೂರೆಂಟು ಪ್ರಕರಣಗಳು. ವ್ಯಾಸನು ಮರಳಿ ಉದಯಿಸಿ ಬಂದುದಾದರೆ ಇದ್ದ ಹದಿನೆಂಟಕ್ಕೆ 'ಹಗರಣ' ಪುರಾಣ' ಎಂಬ ಹೊಸದೊಂದನ್ನು ಸೇರಿಸಿಯಾನು! ಎಪ್ರಿಲ್ ಒಂದರಂದು 'ಹಗರಣ ಧುರಂಧರ' ರನ್ನು ಸನ್ಮಾನಿಸಿ ಇತರರಿಗೆ ಮೂರ್ಖರ ದಿನದ ಸಾರ್ಥಕತೆಯನ್ನು ದೃಢಪಡಿಸಬಹುದಲ್ಲವೆ?

• ಶ್ರೀನಿವಾಸ ತೋಫಖಾನೆ

# ವ್ಯಾಕರಣ ಪಿತಾಮಹ ಪಾಣಿನಿ

ಅದೊಂದು ಗುರುಕುಲ. ಆಚಾರ್ಯರು ಬಾಲಕರಿಗೆ ಪಾಠ ಬೋಧಿಸುತ್ತಿದ್ದರು. ಎಲ್ಲರೂ ಶ್ರದ್ಧೆಯಿಂದ ಕಲಿಯುತ್ತಿದ್ದರು. ಅವರಲ್ಲೊಬ್ಬ ಬಾಲಕನಿದ್ದ. ಅವನಿಗಿದು ಮೂರನೇ ಗುರುಕುಲ. ವಿದ್ಯೆ ಹತ್ತಲಿಲ್ಲವೆಂದು ಎರಡೂ ಗುರುಕುಲಗಳಿಂದ



ಅವನನ್ನು ಕಳಿಸಿಬಿಟ್ಟಿದ್ದರು. ಇಲ್ಲೂ ಆಚಾರ್ಯರ ಪಾಠ ಅರ್ಥ ಆಗುತ್ತಿರಲಿಲ್ಲ, ಕಣ್ಣೀರು ತಾವೇ ತಾವಾಗಿ ಸುರಿಯುತ್ತಿದ್ದವು. ಪಾಠದ ನಂತರ ಆಚಾರ್ಯರು ಆ ಬಾಲಕನನ್ನು ಕರೆದು "ಮಗೂ ನಿನಗೆ ವಿದ್ಯೆ ದೊರಕದಪ್ಪಾ" ಎಂದು ಆರ್ದ್ರತೆಯಿಂದ ಹೇಳಿದರು. ಬಾಲಕ ಪ್ರಶ್ನಿಸಿದ. "ಏಕೆ ಗುರುಗಳೇ?" ಯಾರೂ ಹೇಳದ ಸತ್ಯವನ್ನು ಗುರುಗಳು ಹೇಳಿದರು. "ನಿನ್ನ ಅಂಗೈಯಲ್ಲಿ ವಿದ್ಯಾರೇಖೆ ಇಲ್ಲಪ್ಪಾ" ಸಿಟ್ಟಿನಿಂದ ಕುದಿದ ಬಾಲಕ ಕೂಡಲೇ ಪರ್ಣಕುಟಿಯಲ್ಲಿ ಹೋಗಿ ಒಂದು ಹರಿತವಾದ ಚಾಕುವಿನಿಂದ ತನ್ನ ಅಂಗೈ ಮೇಲೆ ರೇಖೆ ಬರುವಂತೆ ಸೀಳಿಕೊಂಡು. "ನೋಡಿ ಗುರುಗಳೇ ನನಗೆ ವಿದ್ಯಾರೇಖೆ ಪ್ರಾಪ್ತವಾಗಿದೆ. ಈಗ ವಿದ್ಯೆ ಹೇಳಿಕೊಡಿ" ಎಂದ. ಅವನ ಶ್ರದ್ಧೆಯನ್ನು ಗಮನಿಸಿದ ಗುರುಗಳು ತಮ್ಮೆಲ್ಲಾ ವಿದ್ಯೆಯನ್ನು ಧಾರೆಯೆರೆದರು. ಆತ ಪ್ರಕಾಂಡ ಪಂಡಿತನಾದ. ಇದು ಒಂದು ದಂತಕಥೆ. ಕೇವಲ ದಂತಕಥೆ. ಆದರೆ ಆ ಬಾಲಕ ಎಂತಹ ಮಹತ್ತರವಾದ ಗ್ರಂಥ ರಚಿಸಿದನೆಂದರೆ, ಇಂದಿಗೂ ಜಗತ್ತು ಸಂಸ್ಕೃತ ಸಾಹಿತ್ಯದಲ್ಲಿ ಅವನಿಗೊಂದು ವಿಶಿಷ್ಟಸ್ಥಾನ ನೀಡಿ ಗೌರವಿಸುತ್ತಿದೆ.

ಕಳೆದ ವರ್ಷವನ್ನು ಕೇಂದ್ರ ಸರ್ಕಾರ ಸಂಸ್ಕೃತ

ಸುಹೃದ್ ಜೋಶಿ

ವರ್ಷವನ್ನಾಗಿ ಘೋಷಿಸಿತ್ತು. ಇದರಿಂದ ಸಂಸ್ಕೃತ ಭಾಷೆಗೆ ಗೌರವ ನೀಡುವುದರ ಮೂಲಕ ತನ್ನನ್ನು ತಾನೇ ಗೌರವಿಸಿಕೊಂಡಿದೆ. ಇಂದು ಸಂಸ್ಕೃತ ಭಾಷೆಗೆ ಮನ್ನಣೆ ಸಿಕ್ಕಿರುವುದು ಅದರ ವಿಪುಲ ಶಬ್ದ ಸಂಪತ್ತಿನಿಂದ. ಅದರಲ್ಲಿ ರಚಿತವಾಗಿರುವ ಸಾವಿರಾರು ಕಾವ್ಯನಾಟಕಗಳಿಂದ, ಅದರಲ್ಲಿರುವ ಅಮೂಲ್ಯ ಜ್ಞಾನಭಂಡಾರದಿಂದ. ಈ ಭಾಷೆ ಇಷ್ಟು ಸರಳವಾಗಬೇಕಾದರೆ ಅದಕ್ಕೆ ಕಾರಣ ಆ ಭಾಷೆಯ ವ್ಯಾಕರಣ. ಮುಂದೆ ಬರಲಿರುವ ಕಾಳಿದಾಸಾದಿ ನಾಟಕಕಾರರ ಪ್ರತಿಭೆಗೆ ಅವರು ಬರೆಯಲಿರುವ ಕಾವ್ಯನಾಟಕಗಳಿಗೆ ಮುನ್ನುಡಿಯೇನೋ ಎಂಬಂತೆ ಒಬ್ಬ ಶ್ರೇಷ್ಠ ಋಷಿ ರಚಿಸಿದ ವ್ಯಾಕರಣ ಗ್ರಂಥ ಇದಕ್ಕೆ ಮೂಲ ಕಾರಣ. ಈತನ ಹೆಸರನ್ನು ಇಂದಿಗೂ ಕೂಡ ಸಂಸ್ಕೃತಾಭಿಮಾನಿಗಳು, ಜಗತ್ತಿನ ಭಾಷಾ

ವಿದ್ವಾಂಸರು ಆವರದಿಂದ, ಪ್ರಾತಃಸ್ಮರಣೀಯನೆಂದು ಗೌರವದಿಂದ ನೆನೆಯುತ್ತಾರೆ. ಸಂಸ್ಕೃತ ಭಾಷಾ ಸಾಹಿತ್ಯದಲ್ಲಿ ಈತನ ಹೆಸರೊಂದು ಧ್ರುವನಕ್ಷತ್ರ. ಈ ಒಂದು ಕಾರಣಕ್ಕಾಗಿ ತನ್ನ ಜೀವ ಸವೆಸಿದ ಈತನ ಶ್ರಮ ಸಾರ್ಥಕವಾಗಿದೆ. ಈತ ನಿಜಾರ್ಥದಲ್ಲಿ ಚಿರಂಜೀವಿಯಾಗಿದ್ದಾನೆ. ಜಗತ್ತೇ ತುಂಬು ಅಭಿಮಾನದಿಂದ ನೆನೆಯುವ ಈತನ ಹೆಸರು ಪಾಣಿನಿ.

ವ್ಯಾಕರಣ ಪಿತಾಮಹ ಪಾಣಿನಿ
ಈತನು ಬರೆದ ಅವಿಸ್ಮರಣೀಯ ಗ್ರಂಥ
ಅಷ್ಟಾಧ್ಯಾಯಿ

### ವ್ಯಾಕರಣವೆಂದರೇನು?

ವ್ಯಾಕರಣ ಎಂಬ ಶಬ್ದವನ್ನು "ವ್ಯಾಕ್ರಿಯಂತೆ ವ್ಯುತ್ಪಾದ್ಯಂತೆ ಇತಿ ವ್ಯಾಕರಣಂ" ಎಂದು ಬಿಡಿಸುತ್ತಾರೆ. ಅಂದರೆ ಯಾವುದೇ ಒಂದು ಶಬ್ದವನ್ನು ಅಥವಾ ಶಬ್ದಗಳ ಗುಂಪನ್ನು ಸ್ಪಷ್ಟವಾದ ಅರ್ಥ ಬರುವಂತೆ ಪ್ರಯೋಗಿಸಲು ಬಳಸಲನುವಾಗುವಂತೆ ರೂಪಿಸುವುದಕ್ಕೆ ವ್ಯಾಕರಣ ಎನ್ನುತ್ತಾರೆ.


> **ಸಂಸ್ಕೃತ ಭಾಷಾ ಸಾಹಿತ್ಯದಲ್ಲಿ ಈತನ ಹೆಸರೊಂದು ಧ್ರುವ ನಕ್ಷತ್ರ.**


ಇದರಲ್ಲಿ ಒಂದು ಭಾಷೆಯ ಎಲ್ಲಾ ಶಬ್ದಗಳನ್ನು ವಿವಿಧಾರ್ಥದಲ್ಲಿ ಹೇಗೆ ಪ್ರಯೋಗಿಸಬೇಕೆಂಬ ವಿವರಣೆ ಇರುತ್ತದೆ. ವ್ಯಾಕರಣ ಶಾಸ್ತ್ರವನ್ನು ಕಲಿತವರಿಗೆ ಹಾಗೂ ಬೋಧಿಸುವವರಿಗೆ "ವೈಯಾಕರಣಿ" ಎನ್ನುತ್ತಾರೆ. ಇಂತಹ ಒಂದು ಬಳಕೆಯಲ್ಲಿರುವ ಭಾಷೆಯ ಎಲ್ಲಾ ಶಬ್ದಗಳ ಜ್ಞಾನ, ಅವಕ್ಕಿರುವ ವಿವಿಧಾರ್ಥಗಳು ಅವುಗಳ ವಿಂಗಡನಾ ಚಾತುರ್ಯ ಇವು ಮುಖ್ಯವಾಗಿರುತ್ತವೆ. ಇವೆಲ್ಲವನ್ನೂ ಎಲ್ಲೂ ಯಾವುದೇ ತಪ್ಪಿಲ್ಲದಂತೆ ಮಾಡಿದುದಕ್ಕಾಗಿಯೇ ಪಾಣಿನಿಗೆ ಇಂತಹ ಮನ್ನಣೆ ದೊರೆತಿರುವುದು. ಹಾಗಾದರೆ ಪಾಣಿನಿಗೂ ಮೊದಲೇ ವ್ಯಾಕರಣ ಶಾಸ್ತ್ರ ಇರಲಿಲ್ಲವೇ? ಎಂಬ ಪ್ರಶ್ನೆ ಸಹಜವಾಗಿಯೇ ಬರುತ್ತದೆ. ಪಾಣಿನಿಗಿಂತಲೂ ಮುಂಚೆ ವ್ಯಾಕರಣವನ್ನು ವೇದಾಂಗ ಎಂದು ಪ್ರತ್ಯೇಕವಾಗಿ ಗುರುತಿಸುತ್ತಿದ್ದರು. ಅವನಿಗಿಂತಲೂ ಮೊದಲು ವ್ಯಾಕರಣಕ್ಕೆ ಸಂಬಂಧಪಟ್ಟ ವಿಷಯಗಳನ್ನು ತಿಳಿಸುವ ಗುರುಕುಲಗಳೂ, ಗ್ರಂಥಗಳೂ ಇದ್ದವು. 12ನೆಯ ಶತಮಾನದಲ್ಲಿದ್ದ ವೋಪದೇವನು ತನ್ನ "ಧಾತುಪಥ" ಗ್ರಂಥದಲ್ಲಿ ಒಟ್ಟು ಎಂಟು ಬಗೆಯ ವ್ಯಾಕರಣವನ್ನು ಬೋಧಿಸುತ್ತಿದ್ದ ಗುರುಕುಲಗಳನ್ನು ಹೆಸರಿಸಿದ್ದಾನೆ. ಅವೆಂದರೆ.

ಇಂದ್ರ, ಚಂದ್ರ, ಕಾಶಕೃತ್ಸ್ನ, ಅಪಿಶಾಲಿ, ಶಾಕಟಾಯಣ, ಅಮರ, ಜಿತೇಂದ್ರ ಹಾಗೂ ಜಯಂತಿ.

ಎ.ಸಿ. ಬರ್ನೆಲ್‌ರು ವಿವಿಧ ಕಾಲದ ಪುಸ್ತಕಗಳು, ಬೌದ್ಧರ ಹಾಗೂ ಬ್ರಾಹ್ಮಣ ಸಂಹಿತೆಗಳು, ಹಾಗೂ ಭಾರತದ ವಿವಿಧ ಭಾಗಗಳಲ್ಲಿ ಈ ವಿಷಯವನ್ನು ಅಧ್ಯಯನ ಮಾಡಲಾಗಿ ಮೊದಲು ಐಂದ್ರ ವ್ಯಾಕರಣವೆಂಬುದು ಪ್ರಚಲಿತವಿತ್ತೆಂದೂ ಹಾಗೂ ಅದೇ ಬಹಳ ಪ್ರಾಚೀನವಾದುದೆಂದೂ ಅಭಿಪ್ರಾಯ ಪಡುತ್ತಾರೆ. ಈ ವ್ಯಾಕರಣವು ಪಾಣಿನಿಯ ಅಷ್ಟಾಧ್ಯಾಯಿಯ ರಚನೆಯ ನಂತರ ಜನಪ್ರಿಯತೆಯನ್ನು ಕಳೆದುಕೊಂಡಿತೆಂದು ಹೇಳುತ್ತಾರೆ.

### ಪಾಣಿನಿಯ ದೇಶ, ಕಾಲ ಇತ್ಯಾದಿ

ನಮ್ಮ ಪುರಾತನರು ಎಷ್ಟೇ ಬುದ್ಧಿವಂತರಾದರೂ ತಮ್ಮ ಬಗೆಗೆ, ತಮ್ಮ ವಂಶದ ಬಗೆಗೆ, ತಮ್ಮ ಸಮಕಾಲೀನ ಪ್ರಮುಖರ ಹಾಗೂ ಪ್ರಮುಖ ಘಟನೆಗಳ ಬಗೆಗೆ, ಯಾವುದೇ ದಾಖಲೆಯನ್ನು ಬರಹದಲ್ಲಿ ವ್ಯಕ್ತಪಡಿಸದೇ ಇದ್ದುದು ಐತಿಹಾಸಿಕ ದೃಷ್ಟಿಯಿಂದ ಇತಿಹಾಸಕಾರರಿಗೆ ನಿಜಕ್ಕೂ ತೊಂದರೆಯಾಗಿದೆ. ಪಾಣಿನಿಯ ವಿಷಯದಲ್ಲೂ ಹೀಗೇ ಆಗಿದೆ.

ಎ.ಸಿ. ಬರ್ನೆಲ್‌ರ ಪ್ರಕಾರ ಭಾರತೀಯ ಭಾಷಾ ಇತಿಹಾಸದಲ್ಲಿ ಪಾಣಿನಿಯ ಕಾಲ ಬಹಳ ಮುಖ್ಯವಾದುದು ಹಾಗೂ ಇದರ ಬಗ್ಗೆ ಬಹಳ ಎಚ್ಚರಿಕೆಯಿಂದ ಚರ್ಚೆಯಾಗಿದೆ. ಅದರಂತೆ ಈತನ ಕಾಲ ಕ್ರಿ.ಪೂ. ನಾಲ್ಕನೆಯ ಶತಮಾನವೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಜರ್ಮನ್ ವಿದ್ವಾಂಸರಾದ ಥಿಯೋಡೋರ್ ಗೋಲ್ಡ್‌ಸ್ಟಕರ್ ಹಾಗೂ ವೆಬರ್‌ರವರು ಈತನ ಕಾಲ ಕ್ರಿ.ಪೂ. 5ನೆಯ ಶತಮಾನವೆಂದೂ, ಈತನು ಗೌತಮ ಬುದ್ಧನಿಗಿಂತಲೂ ಪ್ರಾಚೀನನೆಂದೂ ಅಭಿಪ್ರಾಯ ಪಡುತ್ತಾರೆ. ಈತನ ಕಾಲದ ಬಗ್ಗೆ ಇದಕ್ಕಿಂತ ಹೆಚ್ಚಿನದೇನೂ ತಿಳಿಯುವುದಿಲ್ಲ.

ಪಾಣಿನಿಯು ಭಾರತದ ವಾಯುವ್ಯ ಗಡಿಯಲ್ಲಿದ್ದ "ಶಾಲ ತುರೀಯ" ಎಂಬ ಗ್ರಾಮದ ನಿವಾಸಿಯಾಗಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. 629 ರಿಂದ ಕ್ರಿ.ಶ. 645ರ ವರೆಗೂ ಭಾರತದ ಪ್ರವಾಸಮಾಡಿದ ಚೀನಾದ ಪ್ರವಾಸಿ ಹ್ಯೂಯನ್‌ತ್ಸಾಂಗ್ ಕೂಡಾ ಈತನ ಗ್ರಾಮ ಶಾಲತುರೀಯವೆಂದು ಪ್ರಚಲಿತವಿದ್ದುದಾಗಿ ತಿಳಿಸುತ್ತಾರೆ. ಶಂಕರ ಎಂಬಾತನು ಬರೆದಿರುವ" ಸಂಘುಮೀ ನಾಮ ಮಾಲಿಕಾ"ದಲ್ಲಿ "ಶಾಲತುರೀಯಕೋ ದಾಕ್ಷೀಪುತ್ರೋ ಪಾಣಿನಿರ್ ಆಹಿಕ:' ಅಂದರೆ ಶಾಲತುರೀಯವಾಸಿಯಾದ ದಾಕ್ಷಿ ಎಂಬುವಳ ಮಗನಾದ ಪಾಣಿನಿ ಎಂದು ತಿಳಿಸುತ್ತಾನೆ. ಈ ವಿಷಯಗಳಿಂದ ಈತನ ಊರು ಶಾಲತುರೀಯವೆಂದೂ, ದಾಕ್ಷಿ ಎಂಬುವಳು ಈತನ ತಾಯಿಯೆಂದೂ ತಿಳಿಯಬಹುದು. ಇಷ್ಟಲ್ಲದೇ ಈತನ ಬಗೆಗೆ ಹೆಚ್ಚಿನದೇನೂ ತಿಳಿಯುವುದಿಲ್ಲ.

ಮೊಟ್ಟಮೊದಲು ಪಾಣಿನಿಯ ಹೆಸರು ಜೈಮಿನಿಗೆ ಅರ್ಪಿತವಾದ ಶಬರಸ್ವಾಮಿಯಿಂದ ರಚಿತವಾದ "ಮಿಮಾಂಸಸೂತ್ರ"ದಲ್ಲಿ ಕಂಡುಬರುತ್ತದೆ. ಆದರೆ ಶಬರಸ್ವಾಮಿಯ ಕಾಲ ನಮಗೆ ತಿಳಿದಿಲ್ಲ. ಖಚಿತವಾಗಿ ಪಾಣಿನಿಯ ಹೆಸರು ಏಳನೆಯ ಶತಮಾನದಲ್ಲಿದ್ದ ಜಗದ್ಗುರು ಆದಿ ಶಂಕರಾಚಾರ್ಯರ ಕೃತಿಗಳಲ್ಲಿ ಕಾಣಬರುತ್ತದೆ. ಆದರೆ ಅವರ ಕೃತಿಗಳಲ್ಲಿ ಪಾಣಿನಿಯ ಹೆಸರು ಅಪರೂಪಕ್ಕೊಮ್ಮೆ ಸಿಗುತ್ತದೆ. ವೇದಗಳಿಗೆ ಭಾಷ್ಯಕಾರರಾದ, ಸುಮಾರು ಕ್ರಿ.ಶ. 1000 ದಲ್ಲಿದ್ದ ಭಟ್ಟಭಾಸ್ಕರ ಹಾಗೂ ನಂತರದ ಭರತಸ್ವಾಮಿ ಮತ್ತು ಸಾಯಣಾಚಾರ್ಯರ ಕೃತಿಗಳಲ್ಲಿ ಪಾಣಿನಿಯ ಹೆಸರು ಆಗಾಗ್ಗೆ ಹಾಗೂ ವ್ಯಾಪಕವಾಗಿ ಬಳಸಲ್ಪಟ್ಟಿದೆ.

ಕಾಶ್ಮೀರದ ಸೋಮದೇವನಿಂದ ರಚಿತವಾದ "ಕಥಾಸರಿತ್ಸಾಗರ"ದಲ್ಲಿ ಪಾಣಿನಿಯ ಬಗ್ಗೆ ಒಂದು ಕಥೆ ಬರುತ್ತದೆ. ಅದರಲ್ಲಿ ಈತನು ವರ್ಷ ಎಂಬ ಗುರುವಿನ ಬಳಿ ಅಭ್ಯಸಿಸುತ್ತಿದ್ದನೆಂದೂ, ಬಹಳ ಸೋಮಾರಿ ಹಾಗೂ ದಡ್ಡನಾಗಿದ್ದನೆಂದೂ, ನಂತರ ಶಿವನ ತಪಸ್ಸು ಮಾಡಿ ವ್ಯಾಕರಣದ ಬಗೆಗಿನ ಜ್ಞಾನವನ್ನು ಪಡೆದನೆಂದೂ ತಿಳಿಸಿದೆ.

ಈತನ ಜೀವನ ಯಾವುದೇ ಏರಿಳಿತಗಳಿಲ್ಲದೆ, ಅಘಟಿತ ಘಟನೆಗಳಿಲ್ಲದೆ ಶಾಂತವಾಗಿ ಸಾಗಿತ್ತೆಂದು ಊಹಿಸಬಹುದು. ಆದರೆ ಈತನ ಅಂತ್ಯವು ದುರ್ಮರಣವಾಗಿತ್ತೆಂದೂ, ಒಂದು ಸಿಂಹವು ಈತನನ್ನು ಕೊಂದಿತೆಂದೂ ಪಂಚತಂತ್ರದ ಒಂದು ಶ್ಲೋಕ "ಸಿಂಹೋ ವ್ಯಾಕರಣಸ್ಯ ಕರ್ತುರ್ ಆಹಾರಾತ್ ಪ್ರಾಣಾನ್ ಪ್ರಿಯಾನ್ ಪಾಣಿನೇ:" ಎಂದು ತಿಳಿಸುತ್ತದೆ. ಇದು ನಿಜವಾಗಿದ್ದಲ್ಲಿ ದುಃಖದಾಯಕವಾದ ಸಂಗತಿಯೇ ಸರಿ.

### ಅಷ್ಟಾಧ್ಯಾಯಿಃ

ಸಂಸ್ಕೃತ ಭಾಷೆಗೆ ಸರಿಯಾದ ವ್ಯಾಕರಣ ನಿಯಮಗಳನ್ನುಳ್ಳ "ಅಷ್ಟಾಧ್ಯಾಯಿ" ಪಾಣಿನಿಯಿಂದ ರಚಿಸಲ್ಪಟ್ಟಿತು. ಹೆಸರೇ ತಿಳಿಸುವಂತೆ ಇದರಲ್ಲಿ ಎಂಟು ಅಧ್ಯಾಯಗಳಿವೆ. ಪ್ರತಿ ಅಧ್ಯಾಯದಲ್ಲೂ ನಾಲ್ಕು ಪಾದಗಳಂತೆ ಒಟ್ಟು ಮೂವತ್ತೆರಡು ಪಾದಗಳಿವೆ. ಶಿವನನ್ನು ಕುರಿತು ಪಾಣಿನಿ ತಪಸ್ಸು ಮಾಡಿದಾಗ ಪ್ರತ್ಯಕ್ಷನಾದ ಶಿವನು ತನ್ನ ಡಮರುಗವನ್ನು ಬಾರಿಸಿದನೆಂದೂ, ಆಗ ಹೊರಟ ಶಬ್ದವು ಸೂತ್ರಗಳ ರೀತಿಯಲ್ಲಿ ಪಾಣಿನಿಗೆ ಕೇಳಿಸಿತೆಂದೂ, ಅವುಗಳನ್ನು ಆಧಾರವಾಗಿಟ್ಟುಕೊಂಡು "ಅಷ್ಟಾಧ್ಯಾಯಿ"

ರಚಿಸಿದನೆಂದೂ ಒಂದು ಕಥೆಯಿದೆ. ಈ ಗ್ರಂಥವು ಎಲ್ಲ ದೃಷ್ಟಿಯಿಂದಲೂ ಪರಿಪೂರ್ಣವಾಗಿದೆ. ಪಾಣಿನಿಯ ವ್ಯಾಕರಣವು ತನ್ನ ನಿಖರತೆಯಿಂದ, ವಿಂಗಡನಾ ಚಾತುರ್ಯದಿಂದ, ಕ್ರಮಬದ್ಧತೆಯಿಂದ ಹಾಗೂ ವೈಜ್ಞಾನಿಕವಾಗಿ ವಿಭಾಗಿಸಲ್ಪಟ್ಟು ಸರಳವಾದುದರಿಂದ ಅಪಾರ ಜನಪ್ರಿಯತೆ ಹೊಂದಿ ಎಲ್ಲರೂ ಇದನ್ನೇ ಅನುಸರಿಸಲು ಸಾಧ್ಯವಾಗುವಂತೆ ಮನೆ ಮಾತಾಯಿತು.

**ಇತರ ಕೃತಿಗಳು**

ಬಹುಶಃ "ಅಷ್ಟಾಧ್ಯಾಯಿ" ಗ್ರಂಥ ರಚನೆಗಾಗಿಯೇ ತನ್ನೆಲ್ಲಾ ಜೀವಮಾನವನ್ನು ಧಾರೆಯೆರೆದ ಪಾಣಿನಿಯು ಇನ್ನಾವುದೇ ಗ್ರಂಥಗಳನ್ನು ರಚಿಸಿರುವ ದಾಖಲೆಗಳಿಲ್ಲ, ಆದರೆ ಬರಹದ ಶೈಲಿಯಿಂದ ಈತನದೆಂದು ಹೇಳಲಾಗುವ ಕೆಲವು ಗ್ರಂಥಗಳಿವೆ. ಆದರೆ ಯಾರೂ ಇದನ್ನು ನಿಖರವಾಗಿ ಹೇಳುವುದಿಲ್ಲ.

ಪಾಣಿನಿಯು ತನ್ನ ಗ್ರಂಥದಲ್ಲಿ ಸಣ್ಣ ವಿಷಯಗಳಿಗೂ ಬಹಳ ಮಹತ್ವವನ್ನು ಕೊಟ್ಟಿದ್ದಾನೆ. ಈತನದು ಬಹಳ ಸೂಕ್ಷ್ಮದೃಷ್ಟಿ. ಇದನ್ನು ಇಂದು ಬಳಕೆಯಲ್ಲಿರುವ ಎರಡು ಪದಗಳೊಡನೆ ಸಮೀಕರಿಸಿದಾಗ ಇದರ ಮಹತ್ವ ಗೊತ್ತಾಗುತ್ತದೆ.

**ಪುನಾರಚನೆ-ಪುನರ್ರಚನೆ/ ಅಂತಾರಾಷ್ಟ್ರೀಯ-ಅಂತರರಾಷ್ಟ್ರೀಯ**

ಈಗ ನಮಗೆ ಮೇಲಿನ ಎರಡೂ ಪದಗಳು ಬಳಕೆಯಲ್ಲಿದ್ದು, ಯಾವುದುಸರಿ ಎಂಬ ಗೊಂದಲ ಉಂಟಾಗಬಹುದು. ಇದನ್ನು ಪಾಣಿನಿಯ ಸೂತ್ರದೊಂದಿಗೆ ಹೋಲಿಸಿ ನೋಡಿದಾಗ ನಿಜವಾಗಿ ಬಳಸಲು ಯಾವುದು ಸರಿ ಎಂದು ತಿಳಿಯುತ್ತದೆ. "ರೋರಿ" ಎಂಬ ಸೂತ್ರದ ಪ್ರಕಾರ 'ರ' ಕಾರದ ಮುಂದೆ ಇನ್ನೊಂದು 'ರ' ಕಾರವು ಬಂದಾಗ ಎರಡು 'ರ'ಗಳೂ ಸೇರಿ ಕರ್ಕಶವಾಗುತ್ತದೆ. ಆದ್ದರಿಂದ ಮೊದಲ 'ರ' ಕಾರದ ಹಿಂದಿನ ಅಕ್ಷರವು ದೀರ್ಘವಾಗಬೇಕು ಎಂದು ತಿಳಿಸುತ್ತಾನೆ. ಅಂತೆಯೇ ಪುನರ್ ರಚನೆ ಎಂಬುದು ಪುನಾರಚನೆ ಎಂದೂ ಅಂತರ್+ರಾಷ್ಟ್ರೀಯ ಎಂಬುದು ಅಂತಾರಾಷ್ಟ್ರೀಯ ಎಂದೂ ಪ್ರಯೋಗಿಸಲ್ಪಡಬೇಕು.

**ಕರ್ನಾಟಕ-ಕರ್ಣಾಟಕ**

ಈ ಎರಡರಲ್ಲಿ ಯಾವುದು ಸರಿ? ಕರ್ನಾಟಕ ಬ್ಯಾಂಕಿನವರು "ಕರ್ಣಾಟಕ" ಎಂದೇ ಬಳಸುತ್ತಾರಲ್ಲಾ? ಅದೇಕೆ ಹೀಗೆ ಎಂಬ ಪ್ರಶ್ನೆ ಸಹಜ. ಇದಕ್ಕಾಗಿ ಪಾಣಿನಿ ಏನು ಹೇಳಿರುವನೆಂದು ನೋಡೋಣ. "ರಷಾಭ್ಯಾಂ ನೋಣಃ ಸಮಾನಪದೇ" ಎಂಬ ಸೂತ್ರದ ಪ್ರಕಾರ "ರ" ಅಥವಾ "ಷ"ಗಳ ನಂತರ ಒಂದೇ ಪದದಲ್ಲಿ 'ನ' ವ್ಯಂಜನ ಬಂದರೆ 'ಣ' ಎಂದು ಬದಲಾಗುತ್ತದೆ ಎಂದು ತಿಳಿಸಿದ್ದಾನೆ. ಅದರಂತೆ "ಕರ್ಣಾಟಕ" ಎಂಬುದೇ ಸರಿಯಾದ ಪದ. ಆದರೆ ಅಪಾಣಿನೀಯವಾದರೂ "ಕರ್ನಾಟಕ" ಪದವು ಸರ್ವಮಾನ್ಯತೆ ಪಡೆದಿದೆ ಹಾಗೂ ತಪ್ಪಾಗಿ ಪರಿಗಣಿಸಲ್ಪಟ್ಟಿಲ್ಲ.

ಈ ರೀತಿಯಾಗಿ ಪಾಣಿನಿಯು ಇಡೀ ಒಂದು ಭಾಷೆಯನ್ನೇ ತನ್ನ ಸೂಕ್ಷ್ಮದೃಷ್ಟಿಯಿಂದ ನೋಡಿ ರಚಿಸಿದ ಗ್ರಂಥ "ಅಷ್ಟಾಧ್ಯಾಯಿ"

**ಸಂಸ್ಕೃತ ಮೃತಭಾಷೆಯೇ?**

ಭಾರತದ ಭಾಷಾಸಮೂಹಕ್ಕೇ ಮಾತೃಸ್ಥಾನದಲ್ಲಿರುವ ಭಾಷೆ ಸಂಸ್ಕೃತ. ಎಲ್ಲ ಭಾರತೀಯ ಭಾಷೆಗಳಲ್ಲೂ ಸಂಸ್ಕೃತ ಪದಗಳು ಹಾಸುಹೊಕ್ಕಾಗಿವೆ.

"ಸಂಸ್ಕೃತ ಭಾಷೆಯ ರಚನೆ ಗ್ರೀಕ್ ಭಾಷೆಗಿಂತಲೂ ನಿಷ್ಕೃಷ್ಟ, ನಿಖರ, ಲ್ಯಾಟಿನ್ ಭಾಷೆಗಿಂತಲೂ ಅತ್ಯಂತ ಪ್ರಾಚೀನ, ಸಮೃದ್ಧ, ಇಷ್ಟೊಂದು ಸುಸಂಸ್ಕೃತ, ಗೌರವಾನ್ವಿತ ಭಾಷೆ ಜಗತ್ತಿನಲ್ಲಿ ಬೇರೊಂದಿಲ್ಲ" ಎಂದು ಸರ್ ವಿಲಿಯಂ ಜೋನ್ಸ್ 1782 ರಲ್ಲಿ ಏಷ್ಯಾಟಿಕ್ ಸೊಸೈಟಿಯನ್ನು ಉದ್ಘಾಟಿಸುತ್ತಾ ಹೇಳಿದ ಮಾತು ಉಲ್ಲೇಖನೀಯ.

ಪಾಣಿನಿಯಾದಿಯಾಗಿ ಸಂಸ್ಕೃತಕ್ಕಾಗಿ ಶ್ರಮಿಸಿದ ಎಲ್ಲರಿಗೂ ಗೌರವ ಸೂಚಿಸುವುದರೊಂದಿಗೆ ಈ ದೇವಭಾಷೆಗೆ ಒಂದು ನಮನ.

# ಇದುವೆ ಜೀವನ...

## ಪ್ರಾಮಾಣಿಕತೆ

ಸುಮಾರು ನಲವತ್ತೈದು ವರ್ಷ ಹಿಂದಿನ ಘಟನೆ. ಪೂನಾ-ಬೆಂಗಳೂರು ಎಕ್ಸ್‌ಪ್ರೆಸ್ ರೈಲನ್ನು ಹಿಡಿಯಲು ಪ್ಲಾಟ್‌ಫಾರಂನ ಮೇಲೆ ಕಾಯುತ್ತಿದ್ದೆ. ಬೇಸಿಗೆಯ ಕಾಲ, ಮದುವೆಗಳ ಸೀಸನ್ ಆಗಿದ್ದುದರಿಂದ ಮತ್ತು ಹಿಂದಿನ ಒಂದೆರಡು ದಿನಗಳ ರೈಲುಗಳು ರದ್ದಾಗಿದ್ದುದರಿಂದ ಪ್ರಯಾಣಿಕರ ಸಂಖ್ಯೆ ಎಂದಿಗಿಂತ ಜಾಸ್ತಿಯಾಗಿ ಇಡೀ ಪ್ಲಾಟ್‌ಫಾರಂ ತುಂಬಾ ಜನಗಳು ಕಿಕ್ಕಿರಿದು ಜಮಾಯಿಸಿದ್ದರು. ಓಡಾಡುವುದಕ್ಕೂ ಕಷ್ಟವಾಗಿದ್ದಿತು.

ಆಗ ಈಗಿನಂತೆ ರಿಸರ್ವೇಶನ್ನಿನ ಅನುಕೂಲತೆ ಇರಲಿಲ್ಲ, ಗಾಡಿ ಬಂದೊಡನೆ, ನಿರ್ವಾತ ಪ್ರದೇಶದೊಳಕ್ಕೆ ಗಾಳಿ ನುಗ್ಗುವಂತೆ ರಭಸದಿಂದ ಒಳನುಗ್ಗಿ ಜಾಗ ಹಿಡಿಯಬೇಕಾಗಿದ್ದಿತು. ನನ್ನ ಬಳಿ ಒಂದು ಟ್ರಂಕ್ ಇದ್ದಿತು. ಅದನ್ನು ಇರಿಸಲು ಮತ್ತು ಜಾಗ ಹಿಡಿಯಲು ಒಬ್ಬ ಕೂಲಿಯವನನ್ನು ಗೊತ್ತು ಮಾಡಿದ್ದೆ.

ಟ್ರೈನ್ ನಿಧಾನವಾಗಿ ಪ್ಲಾಟ್‌ಫಾರಂನ ಪಕ್ಕದಲ್ಲಿ ಬರತೊಡಗಿತು. ಎಲ್ಲ ಕಡೆ ಗಡಿಬಿಡಿ ಚಲನೆ ಶುರುವಾಯಿತು. ಅಷ್ಟರಲ್ಲಿ, ನಾಲ್ಕಾರು ಟ್ರಂಕು ಹೋಲ್ಡಾಲ್‌ಗಳಿದ್ದ ಇನ್ನೊಬ್ಬನನ್ನು ನೋಡಿ, ನಾನು ಗೊತ್ತು ಮಾಡಿದ್ದ ಕೂಲಿ ನನ್ನನ್ನು ಬಿಟ್ಟು ಅವರ ಕಡೆಗೆ ಓಡಿ ಹೋಗಿ ಅವರ ಸಾಮಾನುಗಳನ್ನು ತೆಗೆದುಕೊಳ್ಳತೊಡಗಿದ.

ನಾನು ಬೇರೊಬ್ಬ ಕೂಲಿಗಾಗಿ ಅತ್ತ, ಇತ್ತ ನೋಡತೊಡಗಿದೆ. ಕಾಣಿಸಿದ ಒಬ್ಬನನ್ನು ಕರೆದು ಟ್ರಂಕ್ ತೋರಿಸಿ "ಎಷ್ಟು?" ಎಂದೆ. "ಎಂಟಾಣೆ" ಎಂದ. "ಸರಿ, ತೊಗೋ" ಎಂದು ಟ್ರಂಕನ್ನು ಅವನ ತಲೆಯ ಮೇಲಿರಿಸಿರಿಕೊಳ್ಳಲು ಸಹಾಯ ಮಾಡಿದೆ, ಬೇಗ ಬೇಗನೆ ಧಾವಿಸತೊಡಗಿದ. ಅವನ ಹಿಂದೆ ನಾನೂ ಧಾವಿಸತೊಡಗಿದೆ. ರೈಲು ಇನ್ನೂ ನಿಧಾನವಾಗಿಯೇ ಚಲಿಸುತ್ತಿತ್ತು. ಅವನು ಮುನ್ನುಗ್ಗಿ, ಬಾಗಿಲಿನ ಬಳಿಯ ಕಂಬಿಯನ್ನು ಹಿಡಿದು, ಅದರ ಜತೆಗೇ ಸ್ವಲ್ಪ ಓಡಿ ಮಿಂಚಿನಂತೆ ಒಳನುಗ್ಗಿ ಒಂದು ಜಾಗ ಹಿಡಿದು ಕುಳಿತುಕೊಂಡ.

ಅಷ್ಟು ಹೊತ್ತಿಗಾಗಲೇ ಬಾಗಿಲಿನ ಬಳಿ ಒಳಗೆ ನುಗ್ಗುವವರ ಗುಂಪು ಬೆಳೆದು ಬಿಟ್ಟಿತು. ನಾನೂ ಅದರೊಳಗೆ ಸೇರಿ ಪ್ರಯಾಸದಿಂದ ಸಾಹಸದಿಂದ ಒಳಗೆ ತೂರಿಕೊಂಡೆ.

ನಾನು ಒಳಗೆ ಸೇರಿದ ಮೇಲೆ ಕೂಲಿ ಜಾಗ ಬಿಟ್ಟುಕೊಟ್ಟ, ದುಡ್ಡುಕೊಡಲು ಪರ್ಸ್ ತೆಗೆದೆ. ಎಂಟಾಣೆ (ಐವತ್ತು ಪೈಸೆ) ಇರಲಿಲ್ಲ. ಒಂದು ರೂಪಾಯಿ ಕೊಟ್ಟೆ. ಅವನ ಹತ್ತಿರವೂ ಚಿಲ್ಲರೆ ಇರಲಿಲ್ಲ. "ತಂದು ಕೊಡ್ತೀನಿ" ಎಂದು ಅದನ್ನು ತೆಗೆದುಕೊಂಡು ಹೊರಟ.

ಎರಡೂ ಕಡೆಯ ಕಿಟಕಿಗಳ ಸಾಲಿನ ಮಧ್ಯಭಾಗದ ಬೆಂಚಿನ ಮೇಲೆ ನನಗೆ ಕೂಡಲು ಜಾಗ ಸಿಕ್ಕಿದ್ದಿತು. ಕೆಲವೇ ನಿಮಿಷಗಳಲ್ಲಿ ಇಡೀ ಕಂಪಾರ್ಟ್‌ಮೆಂಟ್ ತುಂಬಿ ಹೋಗಿ ನನ್ನ ಹಿಂದೆ, ಮುಂದೆ ಜನ ನಿಂತಿದ್ದರು. ಬಾಗಿಲಿನ ಬಳಿಯಂತೂ ಯಾರಾದರೂ ಇಳಿಯುವುದು

ಹತ್ತುವುದು ಅಸಾಧ್ಯ ಎನ್ನುವಷ್ಟರ ಮಟ್ಟಿಗೆ ಜನ ಕಿಕ್ಕಿರಿದು ತುಂಬಿದ್ದರು. "ಎಂಟಾಣೆ ಹೋಯಿತು" ಎಂದು ತೆಪ್ಪಗೆ ಕುಳಿತೆ.

ಗಾಡಿ ಹೊರಡುವ ಬೆಲ್ಲಾಗಿ ರೈಲು ಮೆಲ್ಲನೆ ಚಲಿಸತೊಡಗಿತು. ನನ್ನ ಹಿಂದಿದ್ದ ಪ್ರಯಾಣಿಕರೊಬ್ಬರು ನನ್ನ ಗಮನವನ್ನು ಕಿಟಕಿಯ ಕಡೆಗೆ ಸೆಳೆದರು. ತಿರುಗಿ ನೋಡಿದೆ. ಅಲ್ಲಿ ಆ ಕೂಲಿ "ಸಾಬ್...ಸಾಬ್" ಎಂದು ಕೂಗುತ್ತಾ ರೈಲಿನ ಜತೆಗೇ ನಡೆಯುತ್ತಿದ್ದ. ನನ್ನ ಮುಖ ಕಂಡ ಕೂಡಲೇ "ಚಿಲ್ಲರ್" ಎಂದು ಗಟ್ಟಿಯಾಗಿ ಹೇಳಿ ಅವನ ಕೈಯನ್ನು ಒಳಕ್ಕೆ ತೂರಿ ಅಲ್ಲಿ ಕುಳಿತಿದ್ದ ಒಬ್ಬರ ಕೈಗೆ ನಾಣ್ಯವೊಂದನ್ನು ತುರುಕಿ "ಇದನ್ನು ಅವರಿಗೆ ಕೊಟ್ಟು ಬಿಡಿ" ಎಂದು ಅವರಿಗೆ ಹೇಳಿದ. ಎರಡು ಕೈಗಳನ್ನು ದಾಟಿ ಅದು ನನ್ನ ಕೈಗೆ ಬಂದಿತು.

ಅದನ್ನು ನಾನು ಕೈಗೆ ತೆಗೆದುಕೊಂಡು "ಎಂಟಾಣೆ!" ಎಂದು ಗ್ರಹಿಸುವಷ್ಟರಲ್ಲಿ ರೈಲಿನ ವೇಗವು ಜಾಸ್ತಿಯಾಗಿ ಕೂಲಿಯೂ ಮರೆಯಾಗಿದ್ದ.

ಅಷ್ಟು ಬಡವನಾಗಿದ್ದರೂ ಅತ್ಯಂತ ಪ್ರಾಮಾಣಿಕನಾಗಿದ್ದ ಅವನ ವರ್ತನೆಯಿಂದ ನನ್ನ ಹೃದಯ ತುಂಬಿ ಬಂದಿತು.

ಈಗಲೂ ಎಷ್ಟೋ ವೇಳೆ ಆ ಘಟನೆ ನೆನಪಿಗೆ ಬರುತ್ತದೆ. ಅದರ ಜತೆಗೇ ಅವನಿಗೆ ಆ ಎಂಟಾಣೆಯನ್ನು "ನೀನೇ ಇಟ್ಟುಕೋ" ಎಂದು ನಾನೇಕೆ ಹೇಳಲಿಲ್ಲ ಎಂದು ಆ ನೆನಪಾದಾಗಲೆಲ್ಲಾ ಖೇದವಾಗುತ್ತದೆ.

• ಎನ್.ಪಿ. ಅನಂತರಾಂ

## ವಿಚಿತ್ರ ಹವ್ಯಾಸಗಳು

ನೊಬೆಲ್ ಪ್ರಶಸ್ತಿ ವಿಜೇತ ಸಿ.ವಿ. ರಾಮನ್‌ರವರಿಗೆ ವಜ್ರಗಳನ್ನು ಖರೀದಿಸಿ, ಸಂಗ್ರಹಿಸುವುದಷ್ಟೇ ಅಲ್ಲ! ಅವುಗಳನ್ನು ಸಂಶೋಧಿಸುವ ಹವ್ಯಾಸ! ಅವರು ಹೀಗೆ ವಜ್ರ, ರತ್ನ ಇತರ ಅಮೂಲ್ಯ ಹರಳುಗಳ ಸಂಶೋಧನೆ ನಡೆಸಿ, ಬರೆದ ಪುಸ್ತಕವೇ 'ಫಿಜಿಕ್ಸ್ ಆಫ್ ಕ್ರಿಸ್ಟಲ್ಸ್'

ಕೋಟಿಗೆ ಗುಲಾಬಿ ಹೂ ಸಿಕ್ಕಿಸುವುದು ನಮಗೆಲ್ಲ ಗೊತ್ತೇ ಇದೆ. ಆದರೆ ಫ್ರಾನ್ಸ್‌ನ ದೊರೆಯಾದ ಹದಿನಾರನೆಯ ಲೂಯಿ ತಮ್ಮ ಕೋಟಿನ ಬಟನ್‌ಗೆ ಹೊಂದಿಕೊಂಡಿರುವಂತೆ ಯಾವಾಗಲೂ ಒಂದು ಆಲೂಗಡ್ಡೆಯನ್ನು ಸಿಕ್ಕಿಸಿಕೊಳ್ಳುತ್ತಿದ್ದನಂತೆ. ಈ ಆಲೂಪ್ರಿಯಾ ದೊರೆಯ ಹವ್ಯಾಸ ವಿಚಿತ್ರವಲ್ಲವೇ?

• ಸಾವಿತ್ರಿ, ಹೊಳ್ಳ, ಕಟೀಲು.

ಲಲಿತ ಪ್ರಬಂಧ

# ಕಾಲೇಜ್ ಬಸ್ಸಿನಲ್ಲಿ....

ಡಾ. ಜಾನಕಿ ಸುಂದರೇಶ್

ಸಿಟ್ಟಿಗೆದ್ದು ಧುಮುಗುಡುತ್ತಾ ದಡಬಡನೆ ಬಂದ ಬಸ್ಸು ತುಂಬಿದ ಬಸುರಿಯಂತೆ ನಿಂತು ಉಸ್ಸನೆ ನಿಟ್ಟುಸಿರೆಳೆಯಿತು. ಹುಲ್ಲು ಬಣವೆಯೊಳಗೆ ಮುಳ್ಳು ಹಂದಿ ನುಗ್ಗಿದಂತೆ ಅವರಿವರ ಕಣ್ಣುಗಳಿಗೆ ಮೊಣಕೈಯಿಂದ ತಿವಿಯುತ್ತ ಯಾರದೋ ತಲೆಗೆ ಸೂಟ್‌ಕೇಸಿಂದ ಕುಟ್ಟುತ್ತಾ ಇನ್ಯಾರದೋ ಕಾಲನ್ನು ಮುಲಾಜಿಲ್ಲದೆ ಮೆಟ್ಟುತ್ತಾ ಒಳಗೆ ನುಗ್ಗಿ ಸೇರಿಕೊಂಡೆ. ನನ್ನಿಂದ ತುಳಿಸಿ ಒದೆಸಿ ಬಡಿಸಿಕೊಂಡ ಹತಭಾಗ್ಯರೆಲ್ಲ ಏಳೇಳು ಜನ್ಮಕ್ಕೂ ಸಾಕಾಗಿ ಮಿಗುವಷ್ಟು ಶಾಪಗಳ ಸುರಿಮಳೆ ಸುರಿಸಿರಬಹುದು.

ಅಂತೂ ಹಾಗೂ ಹೀಗೂ ಒಳಗೆ ಹೊಕ್ಕು ಬೆವರೊರೆಸಿಕೊಳ್ಳುತ್ತೇನೆಂದು ಕೈ ಎತ್ತಿದರೆ ಕೈಯ ಜೊತೆಗೇ ಪಕ್ಕದಲ್ಲಿದ್ದ ಹುಡುಗಿಯ ಚೂಡಿದಾರ ದುಪಟ್ಟವೂ ನನ್ನ ಮುಖದ ತನಕ ಬಂತು. ಇದೇನು ಇಷ್ಟು ರಶ್ ಇದೆಯಲ್ಲ ಎಂದು ಸುತ್ತ ಮುತ್ತ ನೋಡಿದಾಗ ಬರೀ ಕಾಲೇಜು ಸ್ಟೂಡೆಂಟ್ಸೇ ತುಂಬಿಕೊಂಡಿರುವುದು ಗಮನಕ್ಕೆ ಬಂತು. ಕಾಲೇಜು ಟೈಮಿಗೆ ಸರಿಯಾಗುವಂತೆ ಹೊರಡುವ ಈ ಬಸ್ಸಿಗೆ ಹತ್ತಿಬಿಟ್ಟಿದ್ದೆ. ಸುತ್ತಮುತ್ತ ಆಗಷ್ಟೇ ಅರಳಿದ ಹೂವುಗಳಂತೆ ಫ್ರೆಶ್ಶಾದ ಮುಖದ, ನಗೆಗಣ್ಣಿನ, ಗುಸು ಗುಸು ಮಾತು ಕಿಸಿಕಿಸಿ ನಗುವಿನ ಚಿವುಟಿ ಕೆಂಪಾದ ಮೊಡವೆಗಳ ಏರುಜವ್ವನೆಯರು. ಬಸ್ಸಿನ ಹಿಂಭಾಗದಲ್ಲಿ ಜೀನ್ಸ್ ಪ್ಯಾಂಟ್ ಟೀ ಶರ್ಟ್, ಕುಡಿಮೀಸೆಯ ಮೀಸೆ ಮೂಡದ, ಬಾರದ ಗಡ್ಡವನ್ನು ಕರೆದುಕೊಂಡು ಬ್ಲೇಡಿನ ಕಲೆ ಮಾಡಿಕೊಂಡ ಹುಡುಗರು.

ಬಸ್ಸನ್ನು ಸ್ಟಾರ್ಟಿಂಗ್‌ನಲ್ಲೇ ಇಟ್ಟು ಡ್ರೈವರ್ ಕೆಳಗಿಲ್ಲೋ ಇಳಿದು ಹೋದರು. ಇಷ್ಟೊಂದು ಪ್ರಮಾಣದಲ್ಲಿ ಹೊಟ್ಟೆಯೊಳಗೆ ಜಮೆಯಾಗಿರುವ ತುಂಬಿ ತುಳುಕುವ ಯೌವ್ವನದ ಪುಳಕವನ್ನು ತಡೆದುಕೊಳ್ಳಲಾರೆ ಎನ್ನುವಂತೆ ಬಸ್ಸು ಗುರುಗುರೆನ್ನುತ್ತ ಗಡಬಡಿಸುತ್ತ ನಡುಗುತ್ತಾ ನಿಂತಿತ್ತು. ಅದರಲ್ಲೂ ಬಸ್ಸಿನ ಹೃದಯ ಭಾಗದಲ್ಲಿ ಬಾನೆಟ್‌ನ ಸುತ್ತಮುತ್ತ ಜಿಗಿಯುವ ಜಿಂಕೆಗಳಂತೆ ಅಷ್ಟೊಂದು ಮಂದಿ ಚಂದದ ಹುಡುಗಿಯರು ತುಂಬಿಕೊಂಡರೆ ಬಸ್ಸಿನ ಕೈಕಾಲು ನಡುಗದಿರುತ್ತದೆಯೇ ಹೃದಯ ಪಟಪಟಿಸದೇ? ಮನಸ್ಸು ಎಲಿ ಎಲಿಗುಟ್ಟದೇ? ಅದಕ್ಕಾಗಿ ಬಹುಶಃ ಡ್ರೈವರಣ್ಣ ತನ್ನ ಆರೋಗ್ಯದ ದೃಷ್ಟಿಯಿಂದ ಆದಷ್ಟು ಹೊತ್ತು ಕೆಳಗೇ ನಿಂತಿದ್ದು ಕೊನೆಯ ಗಳಿಗೆಯಲ್ಲಿ ಒಂದು ಬಸ್ಸು ಹತ್ತಿದರಾಯ್ತೆಂದು ಇಳಿದು ನಿಂತಿದ್ದಿರಬಹುದು. ಹೈವೋಲ್ಟೇಜ್ ಚದುರೆಯರ ಕಣ್ಣಂಚಿನ ಮಿಂಚಿನ ಝಳಕ್ಕೆ ಸಿಕ್ಕಿ ಆತನ

> **ಬಸ್ಸು ಸ್ಮಶಾನದಂತಾಗಿ ನೀರವವಾಯ್ತು. ವಸಂತಕಾಲದಲ್ಲಿ ಹೂ ಚಿಗುರುಗಳಿಂದ ತುಂಬಿದ ಮರದ ಕೊಂಬೆ ರೆಂಬೆಗಳನ್ನೆಲ್ಲ ಯಾರೋ ಮರಕಟುಕ ಕಡಿದು ಹಾಕಿದ ಮೇಲೆ ಬಣ್ಣವಿಲ್ಲದ ಬರಡು ಕಾಂಡ ನಿಟ್ಟುಸಿರೆಳೆದಂತೆ ಖಾಲಿ ಬಸ್ಸು ಉಸ್ಸೆನ್ನುತ್ತಾ ಮುಂದುವರಿಯಿತು.**



ತಲೆಕೂದಲು ಗಡ್ಡಮೀಸೆಯೆಲ್ಲ ಸುಟ್ಟು ಬೆಳ್ಳಗಾಗಿ ಮುಖ ನೆರಿಗೆ ಗಟ್ಟಿ ಹೋಗಿತ್ತು ಪಾಪ. ಚಾಕಲೇಟ್ ರಾಶಿಯ ಮಧ್ಯೆ ಕುಳಿತಿದ್ದರೂ ಒಂದನ್ನು ಬಿಡಿಸಿ ಬಾಯಿಗೆ ಎಸೆದುಕೊಳ್ಳಲಾರದ ಮಗುವಿನ ನಿರಾಸೆ, ತಬ್ಬಲಿತನ ಆತನ ಮುಖದಲ್ಲಿ!

"ಓ ಅಜ್ಜೇರೇ...ಬೇಗ ಬರೋಡು..." (ಅಜ್ಜಾ ಬೇಗ ಬನ್ನಿ) ಹಿಂದಿನ ಡೋರ್‌ನಲ್ಲಿ ಹುಪ್ಪಟೆಗಳಂತೆ ಕಟ್ಟಿಕೊಂಡು ನೇತಾಡುತ್ತಿದ್ದ ಹುಡುಗರು ಕಿರಿಚಿಕೊಂಡರು. ನರೆತ ತಲೆಗೂದಲಿನ, ಕೊಳಕು ಪಂಚೆಯ ವ್ಯಕ್ತಿಯೊಬ್ಬರು ತಾಂಬೂಲವನ್ನು ಪಟಕ್ಕೆಂದು ಉಗಿದು ತುಟಿಯಿಂದ ಇಳಿದ ರಸವನ್ನು ಒರೆಸಿಕೊಳ್ಳಲು ಪುರಸೊತ್ತಿಲ್ಲದೆ ಓಡೋಡಿ ಬಂದರು. ಅವರ ಕೈಯಲ್ಲಿದ್ದ ಬಟ್ಟೆಯ ಚೀಲದಿಂದ ಬಾಟ್ಲಿಗಳ ಕಣ ಕಣಕ...ಕಣ್ ಕಣ ಕಣಕ್ ಶಬ್ದ ಲಯಬದ್ಧವಾಗಿ ಕೇಳುತ್ತಿತ್ತು. ಒಬ್ಬ ಹುಡುಗ ಕಂಡಕ್ಟರಂತೆಯೇ ರಾಗವಾಗಿ 'ಬೇಗ.....ಬೇಗ.....ಬೇSಗಾ ಬೇಗಾ....ಎಂದು ಕೂಗಿದ. ಪಾಪ ಅಜ್ಜ ಗ್ರೀಸಿಲ್ಲದ ಕ್ಲಚ್ ಪ್ಲೇಟಂತೆ ಕಿರುಗುಡುವ ಕಾಲ್ಗಂಟುಗಳನ್ನು ದಂಡಿಸುತ್ತಾ, ಬಸ್ಸು ಹೊರಡುವುದೆನ್ನುವ ಧಾವಂತದಲ್ಲಿ ಓಡೋಡಿ ಬಂದ. ಛೀ ಏನು ಹುಡುಗರಪ್ಪ ಡ್ರೈವರು ಇಳಿದು ಹೋಗಿರುವುದು ಗೊತ್ತಿಲ್ಲದ ಅಜ್ಜನನ್ನು ಹೀಗೆ ಸತಾಯಿಸುತ್ತಿದ್ದಾರಲ್ಲ ಎನಿಸಿತು. ಮ್ಯಾನರ್ಸ್ ಇಲ್ಲ, ಬೇಜವಾಬ್ದಾರಿ ಹುಡುಗರು, ಈಗಿನ ಕಾಲದ ಹುಡುಗರೇ ಹೀಗೆ.....ಇತ್ಯಾದಿಯಾಗಿ ಮಧ್ಯವಯಸ್ಸಿನ ಮಾಮೂಲು ಗೊಣಗಾಟಗಳು ಮನಸ್ಸಿನ ನಾಲಿಗೆ ತುದಿಯಲ್ಲಿ ಮೂಡಿದವು. ಅಜ್ಜ ಹತ್ತಿರ ಬಂದಂತೆ ಹುಡುಗರೆಲ್ಲ ಒಟ್ಟಿಗೆ 'ಬೇಗ...ಬೇಗ...ಬೇಗ..ಬೇಗಾ' ಎಂದು ಹುಯ್ಲಿಡುತ್ತಾ ಅಜ್ಜನ ರಟ್ಟೆ ಹಿಡಿದು ಒಳಗೆಳೆದುಕೊಂಡರು. ಕೂತಿದ್ದ ಹುಡುಗನೊಬ್ಬ 'ಬಾರಜ್ಜಾ ಇಲ್ಲಿ ಕೂತುಕೊ' ಎನ್ನುತ್ತಾ ಸೀಟು ಬಿಟ್ಟುಕೊಟ್ಟ. ಪರವಾಗಿಲ್ವೇ? ಈ ಹುಡುಗರಿಗೆ

ದಯಾಳು ಬುದ್ಧಿ ಇದೆಯೇ ಹೊರತು ದುಷ್ಟ ಬುದ್ಧಿ ಇಲ್ಲ.

ಮುಂದಿನ ಬಾಗಿಲಿಂದ ಹುಡುಗಿಯರು ಹಿಂದಿನ ಬಾಗಿಲಿಂದ ಹುಡುಗರು ತುಂಬಿಕೊಂಡು, ಮುಂದಿದ್ದವರು ಹಿಂದೆ, ಹಿಂದಿದ್ದವರು ಮುಂದೆ ಒತ್ತರಿಸಲ್ಪಟ್ಟು ನಡುವೆ ಸ್ವಲ್ಪವೇ ಸ್ವಲ್ಪ ಜಾಗ, No man's land ಥರ ಖಾಲಿ ಉಳಿದಿತ್ತು. ಹಿಂದಿನ ಬಾಗಿಲಿಂದ ಒಂದು ಗಡಸು ದನಿ ಕೇಳಿ ಬಂತು. "ಓ ಅಣ್ಣಾ ಮುಂದೆ ಹೋಗಿ...ದಯಮಾಡಿ ಮುಂದೆ ಹೋಗಿ. ಅಲ್ಲಿ ಅಷ್ಟು ಜಾಗ ಇದೆ. ಹಾಸಿಗೆ ಹಾಸಿ ಮಲಗುವಷ್ಟು. ಮುಂದೆ ಹೋಗಿ ಅಲ್ಲೇನೂ ಬೇಲಿ ಹಾಕಿಲ್ಲ. ಯಾರದೂ ಕುಮ್ಕಿ ಜಾಗ ಅಲ್ಲ. 'ಒಂತೆ ದುಂಬು ಪೋಲೆ' (ತುಳು) (ಸ್ವಲ್ಪ ಮುಂದೆ ಹೋಗಿ) ಹುಡುಗರು ಮುಂದೆ ಮುಂದೆ ಸರಿದರು. ಅದೇ ಗಡಸುದನಿ ಮತ್ತೆ ಕೇಳಿಸಿತು.

"ಓ ಅಕ್ಕಾ, ಸ್ವಲ್ಪ ಹಿಂದೆ ಬರಬೇಕು. ಇನ್ನು...ಇನ್ನು...ಹಾಗೆ...ಬನ್ನಿ...." ಅಲ್ಲೇನೂ ಕಲ್ಲುರ್ಟಿ ಗುಡಿ ಇಲ್ಲ...ನಾಗನ ಕಲ್ಲೂ ಇಲ್ಲ. ಬರಬಹುದು...ಬನ್ನಿ"

ಹುಡುಗಿಯರು ಕಿಸಿಕಿಸಿ ನಗುತ್ತಾ, ಸೆಕೆಗೆ, ಬೆವರಿಗೆ ನೂಕುನುಗ್ಗಾಟಕ್ಕೆ ಸ್ವಲ್ಪವೂ ಬೇಸರಿಸದೆ ಇನ್ನಷ್ಟು ಸೇರಿಕೊಂಡು ನಿಂತರು.

ಅದೇ ದಪ್ಪದನಿ ಮತ್ತೆ ಕೇಳಿಸಿತು. "ಓ ಅಜ್ಜ. ಸ್ವಲ್ಪಮುಂದೆ...ಅಣ್ಣಾ ಓ ಜಗದ್ಗುರು...ಮುಂದೆ...ಸ್ವಲ್ಪ ಮುಂದೆ...ಗುರುಗಳು ಮುಂದೆ ಹೋದರೆ ಭಕ್ತರೂ ಮುಂದ ಹೋಗ್ತಾರೆ...ಹೋಗಿ!"

ಯಾರಪ್ಪಾ ಈ ಕಂಡಕ್ಟರು ಇಷ್ಟೊಂದು ಒರಿಜಿನಲ್ಲಾಗಿ. ಹಾಸ್ಯಮಯವಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾನಲ್ಲ ಎಂದು ತಿರುಗಿ ನೋಡಿದರೆ ಅದು ಕಂಡಕ್ಟರ್ ಅಲ್ಲ, ಒಬ್ಬ ಕಾಲೇಜು ಹುಡುಗ ಮುಖಕ್ಕೆ ಪುಸ್ತಕ ಮರೆ ಮಾಡಿ ಗಡಸು ದನಿಯಲ್ಲಿ ಕಿರುಚುತ್ತಿದ್ದ.

ಅಲ್ಲ, ಈ ಹುಡುಗರಿಗೆ ಅಷ್ಟೆಲ್ಲ ಐಡಿಯಾಗಳು ಡೈಲಾಗುಗಳು ಕುಚೇಷ್ಟೆಯ ಮಾತುಗಳು ಅದೆಲ್ಲಿಂದ ಬರುತ್ತವೋ! ವಿಶೇಷತಃ ಹುಡುಗಿಯರ ಮುಖ ಕಂಡಕೂಡಲೇ ಮೆದುಳಿನಲ್ಲಿ ನೂರೆಂಟು ರಾಸಾಯನಿಕಗಳ ಬುಗ್ಗೆ ಸಿಡಿದು ಕೆಮಿಕಲ್ ರಿಯಾಕ್ಷನ್‌ಗಳು ನಡೆದು, ಅಣುವಿದಳನದಿಂದ ಹೊರಡುವ ವಿಕಿರಣಗಳಂತೆ ಡೈಲಾಗುಗಳು ಸಾಲು ಸಾಲಾಗಿ ಹರಿದು ಬರುತ್ತವೆಯೇ?

ಈ ಗೌಜಿ ಗದ್ದಲದ ನಡುವೆ ಕೂತಿದ್ದ ಸ್ಟೂಡೆಂಟ್ ಒಬ್ಬ ಕೈಯಲ್ಲಿದ್ದ ನ್ಯೂಸ್‌ಪೇಪರನ್ನು ಆಚೆ ಈಚೆ ಇದ್ದವರ ಮುಖಕ್ಕೆ ಅಡರುವಂತೆ ಅಗಲವಾಗಿ ಬಿಡಿಸಿ ಹಿಡಿದು ಓದತೊಡಗಿದ. ಪಕ್ಕದಲ್ಲಿದ್ದವನು "ತೆಗಿ ಮಾರಾಯ, ಆ ಪೇಪರಲ್ಲಿ ಏನುಂಟು ಹೊಸದು! ಮೂರು ಆಕ್ಸಿಡೆಂಟ್ ಎರಡು ಸೂಸೈಡು. ನಾಲ್ಕು ಉದ್ಘಾಟನೆ ಅಷ್ಟೇ ತಾನೇ" ಎಂದ ನಿಂತಿದ್ದವನೊಬ್ಬ "ಇರುತ್ತೆ ಇರುತ್ತೆ ತಡಿ" ಎನ್ನುತ್ತಾ ಪೇಪರಿನ ಒಳಗೆ ತಲೆ ಹಾಕಿ ಗಟ್ಟಿಯಾಗಿ ಓದಿದ "ಪ್ರಿಯಕರನೊಂದಿಗೆ ತರುಣಿ ಪರಾರೀ..."

"ಕೇಳಿ ನಮಗೆಲ್ಲಾ ಹೊಟ್ಟೆ ಉರೀ...." ಇನ್ನೊಬ್ಬ ಪ್ರಾಸ ಕೂಡಿಸಿದ.

"ಲಾರಿ ಬಡಿದು ಪಾದಚಾರಿ ಸಾವು..."

"ಛೀ ಅದೇನು ಮಾರಾಯ, ಯಾವಾಗಲೂ ಆಚಾರಿಗಳೆ ಸಾಯುವುದು!"

ಇನ್ನೊಬ್ಬ ಹುಡುಗ ಪೇಪರಿನೊಳಗೆ ಬಗ್ಗಿ ಅರ್ಧ ಈ ಸುದ್ದಿ ಅರ್ಧ ಆ ಸುದ್ದಿ ಸೇರಿಸಿ ಓದತೊಡಗಿದ.

"ತ್ರಿವಳಿ ಶಿಶುಗಳ ಜನನ. ಜಯಲಲಿತಾಗೆ ಜೈಲು ಶಿಕ್ಷೆ"

"ಕೋಲಾರ ಬಳಿ ಅಪಘಾತ. ಕರುಣಾನಿಧಿ ಸಮರ್ಥನೆ"

"ವಿದ್ಯಾರ್ಥಿ ಸಾಹಿತ್ಯ ಸಮ್ಮೇಳನ ಅಕ್ರಮ ಶ್ರೀಗಂಧ ಪತ್ತೆ"

"ಡಯಾಬಿಟಿಸ್‌ಗೆ ಹೊಸ ಔಷಧಿ ಕ.ರಾ.ರ. ಸಾರಿಗೆ ಸಂಸ್ಥೆ'

"ಚಂದ್ರಿಕಾ ಕುಮಾರ ತುಂಗೆಯ ರಕ್ಷಣಾ ಸಲಹೆಗಾರರಾಗಿ"

ಕಸಮುಸುರೆ ಬುಲೆತ್ತಿನ ಬೆಂಡೆ! (ಕುಸುಮ ಸಿರಿ ಬಲೆಪತಿ ಬೆಂಡಿ) ಕೇಳುತ್ತಿರುವವರ ಹುಬ್ಬುಗಳು

ಆಶ್ಚರ್ಯದಿಂದ ಮೇಲೇರಿ ತಲೆಕೂದಲಲ್ಲಿ ಸಿಕ್ಕಿ ಹಾಕಿಕೊಳ್ಳಬೇಕು. ಅಷ್ಟು ಸಹಜವಾಗಿ ನೈಜ ಸುದ್ದಿಯೇನೋ ಎನ್ನುವಂತೆ ಅವನು ಜೋಡಿಸಿ ಓದುತ್ತಾ ಹೋದ. ಅವನು ಓದಿದಂತೆಲ್ಲಾ ಬಸ್ಸೊಳಗೆ ನಗೆ ಬಾಂಬುಗಳು ಸಿಡಿಯತೊಡಗಿದವು. ಗಲಾಟೆ ತಡೆಯಲಾರದೆ ಓದುವವನು ಪೇಪರ್ ಮಡಚಿಟ್ಟು ತೆಪ್ಪಗೆ ಕೂತ.

ಬಸ್ಸು ಹೊರಟಿತು. ಊರ ಹೊರಗಿನ ತಿರುವಿನಲ್ಲಿ ರೊಯ್ಯನೆ ತಿರುಗಿದಂತೆ ದೊಡ್ಡದೊಂಡು ಧೂಳಿನ ಮೋಡ ಎದ್ದು, ಹೇಳದೆ ಕೇಳದೆ, ಚಲಿಸುವ ಬಸ್ಸೊಳಗೆ ನುಗ್ಗಿ ಬಿಟ್ಟಿತು. ಒಂದಿಬ್ಬರು ಹುಡುಗರು ಸುಳ್ಳು ಸುಳ್ಳೇ ಕೆಮ್ಮಿದ್ದರು. ಇನ್ನಿಬ್ಬರು ಕ್ಯಾಕರಿಸಿದರು. ಒಬ್ಬ ಮಾತ್ರ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ವಿ.ವಿ.ಐ. ಪಿ. ಗಳಿಗೆ ಕೊಡುವ ಗೌರವ ರಕ್ಷೆಯ ಕುಶಾಲು ತೋಪಿನ ಉಡಾವಣೆಗಳಂತೆ ಧಂ, ಡಮಾರೆಂದು ಸಾಲುಗಟ್ಟಿ ಸೀನತೊಡಗಿದ.

"ಯಾಕೋ ಮಾರಾಯಾ? ಏನಾಯ್ತೊ? ಹನಿಮೂನಿಗೆ ಕಾಶ್ಮೀರಕ್ಕೋಗಿದ್ಯಾ? ಥಂಡಿ ಹಿಡೀತಾ?" ಸೀನಣ್ಣನ ಭುಜದ ಮೇಲೆ ಫಟ್ಟನೆ ಹೊಡೆದು ಒಬ್ಬ ಕೇಳಿದ.

ಕಾಲೇಜು ಹುಡುಗರ ಶಬ್ದ ಭಾಂಡಾರದಲ್ಲಿ ಕನ್ನಡ ಶಬ್ದ ಸಂಪತ್ತಿನ ತೀವ್ರ ಕೊರತೆ ಆಗಾಗ ತಲೆದೋರುವುದುಂಟು. ಕೆಲವು ಸಲ ಯಾವ ಯಾವುದೋ ಪದಗಳನ್ನು ಎಲ್ಲೆಲ್ಲಿಂದಲೋ ಹುಡುಕಿ ತಂದು, ಕೊಡವಿ, ಧೂಳು ಜಾಡಿಸಿ ಪ್ರಯೋಗಿಸಿದರೆ ಇನ್ನು ಕೆಲವು ಸಲ, ಎಡವಿ ಬೀಳುವಂತೆ ಕಾಲ ಬುಡದಲ್ಲೇ ಬಿದ್ದಿರುವ ಪದಗಳು ಕಣ್ಣಿಗೆ ಬೀಳದೆ ಏನೇನೋ ಬದಲೀ ಪದ ಪ್ರಯೋಗ ಮಾಡಿ ಬಿಡುವುದುಂಟು. ಒಂದು ಸಲ ನನ್ನ ಪರಿಚಯದ ಹುಡುಗಿಯೊಬ್ಬಳು "ನಾಯಿಯನ್ನು ಕೊಂದರು" ಎಂದು ಹೇಳಬೇಕಾಗಿದ್ದಲ್ಲಿ 'ನಾಯಿಯನ್ನು ಕೊಲೆ ಮಾಡಿದರು" ಎಂದು ಭೀಕರವಾಗಿ ಘೋಷಿಸಿದ್ದಳು. ಈ ಸೀನಣ್ಣನಿಗೂ ಹಾಗೆಯೇ



ಏಳೇಳು ಜನ್ಮಕ್ಕೂ ನೀವು ಭಾರತದಲ್ಲೇ -ಹುಟ್ಟಿ...ಮಂತ್ರಿಯೂ ಆಗಿಬಿಟ್ಟರೆ.... ಈ ದೇಶ ಉದ್ಧಾರವಾಗಲು ಸಾಧ್ಯವೆ ?!

ಸ್ವಲ್ಪ ತಡಬಡಾಯಿಸಿರಬೇಕು. ಸೀನುಗುಂಡುಗಳು ನಿಂತ ನಂತರ "ಹಿಕ್ಸೋ. ಅದೇ ಧೂಳಿಗೆ ಕಣೋ. ತುಂಬಾ ಅಕ್ಷಿ ಬಂತು" ಎಂದ. ಅವನ ಶಬ್ದಾರ್ಥ ಕೋಶದಲ್ಲಿ ಅಕ್ಷಿ ಎಂದರೆ ಕಣ್ಣಲ್ಲ, ಸೀನು!

ಇನ್ನೊಬ್ಬ ಮಧ್ಯೆ ಬಾಯಿ ಹಾಕಿದ "ಹೌದಾ ಪುಟ್ಟಾ ಅಕ್ಷಿ ಬರುತ್ತಾ? ಡಾಕ್ಟ್ರು ಮಾಮನತ್ರ ಕರ್ಕಂಡೋಗಿ ಚುಂಯ್ಯ ಮಾಡಿಸಣ...ಆಯ್ತಾ?"

ಹುಡುಗರ ಗುಂಪು ಮತ್ತೊಮ್ಮೆ ಗಹಗಹಿಸಿತು.

ನನ್ನ ಮುಂದೆ ನಿಂತಿದ್ದವಳೊಬ್ಬಳು ತನ್ನ ಗೆಳತಿಯನ್ನು ಕೇಳಿದಳು "ಏ ಎಲೆಕ್ಟ್ರಿಸಿಟೀಯ ಸೆಕೆಂಡ್ ಚಾಪ್ಟರ್ ಮಾಡಿದ್ದಾರಾ?" ಅವಳು 'ಹೌದು' ಎಂದರೆ ಪಕ್ಕದವಳು 'ಇಲ್ಲ' ಎಂದಳು "ಪಾಠ ಮಾಡಿಲ್ಲ. ಬರೀ ಹೆಡ್ಡಿಂಗ್ ಕೊಟ್ಟಿದ್ದಾರೆ ಅಷ್ಟೇ"

ಮೊದಲನೆಯವಳು ಸೋಲಲಿಲ್ಲ "ಅಯ್ಯೋ ಹೆಡ್ಡಿಂಗ್ ಕೊಟ್ರೆ ಆಯ್ತು. ಪಾಠ ಮುಗೀತು ಅಂತನೇ ಲೆಕ್ಕ" ಎಂದಳು. ಶಂಕುಸ್ಥಾಪನೆ ಆದರೆ ಸರಿ, ಸೇತುವೆ ಕಟ್ಟಿದಂತೆಯೇ ಎಂದಂತೆ. ಅಷ್ಟರಲ್ಲಿ ಇನ್ನೊಬ್ಬಳಿಗೆ ಒಂದು ಡೌಟು ಬಂತು. "ನಿನಗೆ ಓಮ್ಸ್ ಲಾ ಕರೆಕ್ಟಾಗಿ ಅರ್ಥ ಆಯ್ತಾ" ಎಂದು ಕೇಳಿದಳು.

"ಹ್ಞೂ" ಎಂದಳು ಪಕ್ಕದವಳು.

"ಹಾಗಾದರೆ ಅದೇನು ಹೇಳು ನೋಡೋಣ"

ಇವಳು ಉತ್ತರಿಸಲು ಹ್ಞಾ ಊ ಎನ್ನುವಷ್ಟರಲ್ಲಿ ಹಿಂದಿನಿಂದ ಒಂದು ಗಂಡು ದನಿ ಜೋರಾಗಿ ಹೇಳತೊಡಗಿತು.

"ಬಿಟ್ಟೀ ಊಟ ಗಟ್ಟಿಯಾಗಿ ಉಂಡು ಹೊಟ್ಟೆ ಕೆಟ್ಟು ಸೊಟ್ಟ ಮೂತಿ ಮಾಡಿ ಕಟ್ಟೆ ಮೇಲೆ ಕೂತವನು ಮುಷ್ಟಿ ಓಮದ ಕಟ್ಟಗಿನ ಕಷಾಯ ಕುಡಿದು ಚಟ್ಟಂತೆ ನೆಟ್ಟಗಾಗಿ ತೊಟ್ಟೆ ಹುಡುಕಿಕೊಂಡು ಹೋಗುವುದೇ ಓಮ್ಸ್ ಲಾ" ಎಲ್ಲರೂ ಮತ್ತೆ ನಕ್ಕರು. ಇನ್ನೊಂದು ದನಿ ಕಿರುಚಿತು. "ಬೇಡ ಕಣ್ರೋ ಮೊದಲೇ ರಶ್ಶಲ್ಲಿ ಉಸಿರುಕಟ್ಟಿ ಸಾಯ್ತಾ ಇದೀವಿ. ನೀವು ಎಲೆಕ್ಟ್ರಿಸಿಟಿ ಡಿಸ್ಕಸ್ ಮಾಡಿ ಶಾಕ್ ಹೊಡಿಸಬೇಡಿ." ನಿಜವೇ. ಬಸ್ಸಲ್ಲಿ ಎದುರು ಭಾಗದಲ್ಲಿದ್ದ ಕ್ಯಾಥೋಡ್‌ಗಳು ಮತ್ತು ಹಿಂದೆ ತುಂಬಿಕೊಂಡಿದ್ದ ಆ್ಯನೋಡ್‌ಗಳ ಮಧ್ಯೆ ಸ್ಥಿರವಾಗಿದ್ದ ಸ್ಟಾಟಿಕ್ ಎಲೆಕ್ಟ್ರಿಸಿಟಿ, ಕಣ್ಣೋಟಗಳ ಸುಳಿದಾಡುವ ಕೋಲ್ಮಿಂಚು, ಸ್ಪರ್ಶದ ಕಂಡಕ್ಷನ್ ಆಫ್ ಹೀಟ್, ಮತ್ತು ಪರಸ್ಪರ ಮ್ಯಾಗ್ನೆಟಿಕ್ ಅಟ್ರಾಕ್ಷನ್ ಮುಂತಾದ ಭೌತಶಾಸ್ತ್ರದ ವಿವಿಧ ಜೀವಂತ ಉದಾಹರಣೆಗಳಿರುವಾಗ ಮತ್ತೆ ಒಣ ಪಠ್ಯದ ಡಿಸ್ಕಷನ್ ಒಂದು ಏಕಾದರೂ ಬೇಕು?

ಹುಡುಗರ ನಡುವಿನಲ್ಲಿ ಗ್ಯಾರೇಜು ಕೆಲಸದ ಹುಡುಗನೊಬ್ಬ ಕೈಮೈ ತುಂಬಾ, ಬಟ್ಟೆ ತುಂಬಾ ಗ್ರೀಸ್ ಮೆತ್ತಿಕೊಂಡು, ಬಟ್ಟೆ ಬರೆಯ ಮತ್ತು ಹುಡುಗನ ಒರಿಜಿನಲ್ ಕಲರ್ ಯಾವುದೆಂದು ಸ್ವಯಂ ಸೃಷ್ಟಿಕರ್ತನೂ ಹೇಳಲು ಸಾಧ್ಯವಿಲ್ಲದಂತೆ ಸ್ಥಿತಿಯಲ್ಲಿ ನಿಂತಿದ್ದ. ಅವನ ಪಕ್ಕದ ಸೀಟಿನಲ್ಲಿ ಕೂತಿದ್ದ ಸ್ಟೂಡೆಂಟ್ ತೊಡೆಯ ಮೇಲೆ ಮೂರ್‍ನಾಲ್ಕು ದಪ್ಪದ ಪುಸ್ತಕಗಳಿದ್ದವು. ಗ್ಯಾರೇಜ್ ಹುಡುಗ ತಲೆ ಬಗ್ಗಿಸಿ, ತಿರುಗಿಸಿ ಮುರುಗಿಸಿ ಆ ಪುಸ್ತಕಗಳನ್ನೇ ನೋಡುತ್ತಿದ್ದ. ಇಂಥಾ ಪುಸ್ತಕಗಳನ್ನು ಹಿಡಿದುಕೊಂಡು ಬಹಳ ಬುದ್ಧಿವಂತನಂತೆ ಕಾಲೇಜಿಗೆ ಹೋಗುವ ಭಾಗ್ಯ ತನಗಿಲ್ಲವೆಂದು ಹಳಹಳಿಸುತ್ತಿದ್ದನೋ ಅಥವಾ ಇಷ್ಟೆಲ್ಲ ಭೀಮಗಾತ್ರದ ಪುಸ್ತಕಗಳನ್ನು ಓದಬೇಕಾದ ಗ್ರಹಚಾರ ತನಗಿಲ್ಲವಲ್ಲ ಎಂದು ಖುಶಿಪಡುತ್ತಿದ್ದನೊ ಹೇಳುವಂತಿರಲಿಲ್ಲ. ಅವನನ್ನು ನೋಡುತ್ತಿದ್ದ ಹುಡುಗನೊಬ್ಬ ಲೇವಡಿಯ ದನಿಯಲ್ಲಿ 'ಏನಣ್ಣಾ ಬುಕ್ಕು ಬೇಕಾ?" ಎಂದು ಕೇಳಿದ.

ಗ್ಯಾರೇಜು ಹುಡುಗ ಅಷ್ಟೇ ಸಲೀಸಾಗಿ "ಬ್ಯಾಡ ಸಾರ್. ಗ್ಯಾರೇಜಲ್ಲಿ ಮೂರ್‍ನಾಕು, ಜಾಕ್ ಇದಾವೆ. ನಿಮ್ಮ ಬುಕ್ಕು ನೀವೇ ತಲೆ ಅಡಿಗಿಟ್ಕಂಡು ಮನೀಕ್ಕಳಿ" ಎಂದು ಬಿಟ್ಟ. ಲೇವಡಿ ಮಾಡಿದವನು ಮುಂದೆ ಮಾತಾಡಲಿಲ್ಲ.

"ಏ, ಸೂಪರ್ ಕಂಡಕ್ಟರ್ಸ್ ಪೂರ್ತಿ ಮಾಡಿ ಮುಗಿಸಿದ್ದಾರಾ?" ಟಿಕೇಟ್ ಕೊಡುತ್ತಾ ಬಂದ ಕಂಡಕ್ಟರನ್ನು ನೋಡಿ ಒಬ್ಬಳು ನೆನಪಿಸಿಕೊಂಡು ಕೇಳಿದಳು.

"ಹ್ಞೂ ಮೊನ್ನೇನೇ ಮುಗೀತು. ಫಿಸಿಕ್ಸ್ ಸರ್, ಇವತ್ತು ಪ್ರಾಪರ್ಟೀಸ್ ಆಫ್ ಸೂಪರ್ ಕಂಡಕ್ಟರ್ಸ್ ಕಲಿತ್ಕೊಂಡು ಬರಲು ಹೇಳಿದ್ದಾರಲ್ಲ. ಹಾಗಾದ್ರೆ ನೀನು ಕಲೀಲಿಲ್ವಾ?"

"ಅಯ್ಯೋ...ಇಲ್ಲವಲ್ಲ..!"

ಹಿಂದಿನಿಂದ ಒಂದು ಗಂಡು ದನಿ ಮತ್ತೆ ಮೂಗು..ಅಲ್ಲಲ್ಲ... ಬಾಯಿ ತೂರಿಸಿತು.

"ಪ್ರಾಪರ್ಟೀಸ್ ಆಫ್ ಸೂಪರ್ ಕಂಡಕ್ಟರ್ಸ್ ಏನು ಅಂತ ನಾನು ಹೇಳ್ತೀನಿ ಕೇಳಿ. ಮೊದಲನೆಯದಾಗಿ ಸೂಪರ್ ಕಂಡಕ್ಟರ್ ತೆಳ್ಳಗೆ ಚಪ್ಪಟೆಯಾಗಿರಬೇಕು. ಒಂದು ವೇಳೆ ದುಂಡಗೆ ದಪ್ಪಗೆ ಇದ್ದರೂ ರಶ್ಶಲ್ಲಿ ತೂರಿಕೊಂಡು ಹೋಗುವಾಗ ಇರುವ ಜಾಗಕ್ಕೆ ಅನುಗುಣವಾಗಿ ಹಿಗ್ಗುವ ಕುಗ್ಗುವ ಸ್ಥಿತಿ ಸ್ಥಾಪಕತ್ವ ಇರಬೇಕು. ಎರಡನೇಯದಾಗಿ ಅವರ ಸ ಲೈವರಿ ಗ್ಲಾಂಡ್ಸ್ (Salivary glands) ಚೆನ್ನಾಗಿ ಬೆಳೆದು ದಿನಕ್ಕೆ ಕನಿಷ್ಠ ಎರಡು ಲೀಟರ್ ಜೊಲ್ಲು ಕೊಡಬೇಕು. ಇಲ್ಲದಿದ್ದರೆ ಟಿಕೇಟಿಗೆ ಎಂಜಲು ಹಚ್ಚೀ ಹಚ್ಚೀ ಮೈಯ ನೀರೆಲ್ಲ ಇಂಗಿ ಹೋಗಿ ಡೀ ಹೈಡ್ರೇಟ್ ಆಗುತ್ತಾರೆ. ಮೂರನೇಯದಾಗಿ ಅವರಿಗೆ ಹೈವಾಲ್ಯೂಂನ ಕರಾವೊಕೆ ಸೌಂಡ್ ಬಾಕ್ಸ್

ಇರಬೇಕು.ಇಲ್ಲದಿದ್ದರೆ, 'ಬೇಗಾ ಬೇಗಾ ಬೇಗಾ" ದುಂಬು ದುಂಬು 'ರೈಟ್ ಪೋಯ್" ಅಂತೆಲ್ಲ ಕಿರುಚಿ ದನಿ ಬಿದ್ದು ಹೋದರೆ ಮತ್ತೆ ಉಪಯೋಗಕ್ಕಿಲ್ಲ. ಇದೆಲ್ಲದರ ಜೊತೆಗೆ ನಿಜವಾದ ಸೂಪರ್ ಡ್ಯೂಪರ್ ಕಂಡಕ್ಟರನ ಮಾವ ಬ್ಯಾಂಕಿನಲ್ಲಿ ಕ್ಯಾಶಿಯರ್ ಆಗಿರಬೇಕು. ಇಲ್ಲಾಂದ್ರೆ ...ಪ್ಲಾಬ್ಲಂ ಶುರುವಾಗಿ ಟಿಕೇಟು ಕೊಡದೇ ಟಿಕೇಟು ಕೊಟ್ರೂ ಚೇಂಜು ಕೊಡಲು ಮರೆತು ನೂರೆಂಟು ರಾಮಾಯಣಗಳಾಗುತ್ತೆ."

ಈ ಹುಡುಗನ ತರಲೆ ಭಾಷಣ ಟಿಕೇಟ್ ಇಶ್ಯೂ ಮಾಡುತ್ತಿದ್ದ ಕಂಡಕ್ಟರನ ಕಿವಿಗೆ ಬಿತ್ತೋ ಇಲ್ಲವೋ ಗೊತ್ತಿಲ್ಲ.ಇದನ್ನೆಲ್ಲ ಆತ ಬಹಳಸಲ ವಿಜ್ಞಾನದ ವಿದ್ಯಾರ್ಥಿಗಳ ಬಾಯಿಂದ ಕೇಳಿ ಕೇಳಿ ಬೇಸತ್ತು ನಿರ್ಲಿಪ್ತನಾಗಿದ್ದಿರಬಹುದು. ಕಿವಿಯ ಒಳಗೆ ಪ್ಲಾಸ್ಟರ್ ಆಫ್ ಪ್ಯಾರೀಸ್ ಸುರಿಸಿಕೊಂಡು ತಲೆಯನ್ನು ಸೌಂಡ್ ಪ್ರೂಫ್ ಮಾಡಿಸಿಕೊಂಡವನಂತೆ ತನ್ನ ಕೆಲಸ ತಾನು ಮಾಡಿಕೊಂಡು ಹೋದ.

ಎಡಸಾಲಿನ ಸೀಟೊಂದರಲ್ಲಿ ಒಬ್ಬ ಮಧ್ಯವಯಸ್ಕ ಕಿಟಕಿಯ ಪಕ್ಕ ಕೂತಿದ್ದ. ಅವನ ಪಕ್ಕದಲ್ಲಿ ಒಬ್ಬಳು ಕಾಲೇಜು ಹುಡುಗಿ. ಸುತ್ತಮುತ್ತ ಹರಿಯುತ್ತಿರುವ ಯೌವ್ವನದ ಪ್ರವಾಹ ನೋಡುತ್ತಾ ನೋಡುತ್ತಾ ಅವನ ಹೊಟ್ಟೆಯಲ್ಲಿ ಗಬ್ಬು ನಾರುತ ಅವಿತಿದ್ದ ಸಾರಾಯಿ ಸೀದಾ ನೆತ್ತಿಗೇರಿರಬೇಕೇನೊ. ಎಂದೋ ಸತ್ತು ಹೋದ ಪರೆಯದ ಭೂತ ಮೈಗೆ ಅಮರಿಕೊಂಡು ಹುಳ್ಳಿಂಕರಿಸಿರಬೇಕು. ಜೊತೆಗೇ ಕಳೆದ ದಿನಗಳ ನೆನಪು ಭಯಂಕರವಾಗಿ ಕಾಡಿರಬೇಕು. ಗಾಳಿಯಿದ್ದರೂ ಬಳುಕುವ ಅಡಿಕೆ ಮರದಂತೆ, ನೇರವಾದ ರಸ್ತೆಯಲ್ಲಿ ಬಸ್ಸು ನೆಟ್ಟಗೆ ಓಡುತ್ತಿದ್ದರೂ ಕೂಡ ಪಕ್ಕದಲ್ಲಿದ್ದ ಮಗಳ ವಯಸ್ಸಿನ ಹುಡುಗಿಯ ಮೈಮೇಲೆ ವಾಲತೊಡಗಿದ. ಹತ್ತು ಡಿಗ್ರಿ...ಹದಿನೈದು ಡಿಗ್ರಿ ಮೂವತ್ತು ಡಿಗ್ರಿ ಪೀಸಾ ಗೋಪುರ. ಅವಳು ಪಾಪ ಮುಜುಗರದಿಂದ ಮುದುರಿಕೊಳ್ಳುತ್ತಾ ಸೈಡಿಗೆ ಸರಿದು ಗುಬ್ಬಿಯಂತೆ ಕೂತಳು. ಅವನು ಮತ್ತಷ್ಟು ವಾಲುತ್ತಾ 75 ಡಿಗ್ರಿಗೆ ಬಂದು ಇನ್ನೇನು 90 ಡಿಗ್ರಿ ತಲುಪಿ ಧಡಾರನೆ ತೊಡೆಯ ಮೇಲೆ ಅಡ್ಡಡ್ಡ ಬಿದ್ದು ಬಿಡುತ್ತಾನೆನ್ನುವ ಪರಿಸ್ಥಿತಿ ಬಂದಾಗ ಅವಳು ಧಡಕ್ಕನೆ ಮೇಲೆದ್ದು ನಿಂತಳು. ಸುತ್ತ ನಿಂತವರೆಲ್ಲ ಅವನಿಗೆ ಬೈಯ್ಯತೊಡಗಿದಾಗ ಕಂಡಕ್ಟರು ಆ ಸಾರಾಯಿಸೇವಕ ರಸಿಕ ಚಕ್ರವರ್ತಿಯನ್ನು ಗದರಿಸಿ ಎಬ್ಬಿಸಿ ಹಿಂದಕ್ಕೆ ಕಳಿಸಿದ. ಆತ ತೂರಾಡುತ್ತಾ ಎದ್ದು ತನ್ನೆಲ್ಲ ಕಮಟು ವಾಸನೆಗಳ ಸಹಿತ ಹಿಂದಕ್ಕೆ ಹೊರಡುತ್ತಿದ್ದಂತೆ "ನಿಮಗೆಲ್ಲಿಗೆ? ಟಿಕೇಟಾಗಿದೆಯೊ?" ಎಂದುಕೇಳಿದ. ಅದು ಅವನ ಕಿವಿಗೆ ಬೀಳಲಿಲ್ಲವೋ ಅಥವಾ ಉತ್ತರಿಸಬೇಕಾದ ನಾಲಿಗೆ ದಪ್ಪಗಾಗಿ ಕೂತಿತ್ತೋ ಏನೋ. ಉತ್ತರಿಸಲಿಲ್ಲ. ಕಂಡಕ್ಟರು ಮತ್ತೆ ಪುನಃ "ನಿಮಗೆ ಎಲ್ಲಿಗೆ ಟಿಕೇಟು ಕೊಡಲಿ ಅಂತ ಕೇಳಿದ್ದು" ಎಂದ ಏರಿದ ದನಿಯಲ್ಲಿ. ಆ ಮದ್ಯಮನಸ್ಕ ಉತ್ತರಿಸುವ ಮೊದಲೇ ಹುಡುಗರ ಗುಂಪಿನಿಂದ ಉತ್ತರ ಬಂತು "ಅವರಿಗೆ ಕಲ್ಕತ್ತಾಕ್ಕೆ ಟಿಕೇಟು ಕೊಡಿ ಮಾರಾಯ್ರೇ. ಅದಷ್ಟು ದೂರ ಹೋಗಲಿ ಇಲ್ಲಿ ವಾಸನೆ ತಡ್ಕೊಳ್ಳೋಕಾಗ್ತಾ ಇಲ್ಲ!"

ಅಷ್ಟರಲ್ಲಿ ಕಾಲೇಜ್ ಸ್ಟಾಪ್ ಬಂತು. ಹುಡುಗರೆಲ್ಲ ಒಕ್ಕೊರಲಿಲ್ಲ 'ಓಲ್ರೈಟ್' ಎಂದು ಕಿರುಚಿದವು. ಬಸ್ಸು ನಿಂತೊಡನೆ ತಮ್ಮ ನೂರೆಂಟು ತರಲೆ ಮಾತುಗಳು ಹಾಸ್ಯ ಚಟಾಕಿಗಳು, ಗಲಗಲ ನಗು, ಉತ್ಸಾಹ, ಹುಮ್ಮಸ್ಸು, ಕೀಟಲೆಗಳೊಂದಿಗೆ ಇಳಿದು ಹೋದರು. ಬಸ್ಸು ಸ್ಮಶಾನದಂತಾಗಿ ನೀರವವಾಯ್ತು. ನಾಲ್ಕೈದು ಜನ ಹಿರಿಯರು ಮತ್ತು ಅವರ ತಲೆಬಿಸಿ,ಯೋಚನೆ, ಗಂಟು ಮುಖಗಳು ಮಾತ್ರ ಉಳಿದಿದ್ದು ವಸಂತಕಾಲದಲ್ಲಿ ಹೂಚಿಗುರುಗಳಿಂದ ತುಂಬಿದ ಮರದ ಕೊಂಬೆ ರೆಂಬೆಗಳನ್ನೆಲ್ಲ ಯಾರೋ ಮರಕಟುಕ ಕಡಿದು ಹಾಕಿದ ಮೇಲೆ, ಬಣ್ಣವಿಲ್ಲದ ಬರಡು ಕಾಂಡ ನಿಟ್ಟುಸಿರೆಳೆದಂತೆ ಖಾಲಿ ಬಸ್ಸು ಉಸ್ಸೆನ್ನುತ್ತಾ ಮುಂದುವರೆಯಿತು. ●

## ಕೆಲವು ನೈಜಘಟನೆಗಳು

# ಅಂತಿಮ ಆಸೆಯ ಹಲವು ಮುಖಗಳು

ತಾನು ಸಾಯುವುದರೊಳಗೆ ಇದೊಂದು ಆಸೆ ಪೂರೈಸಿಕೊಳ್ಳಬೇಕೆಂಬ ಹಂಬಲ, ಎಲ್ಲರಲ್ಲೂ ಇರುತ್ತದೆ. ಅದು ನೆರವೇರುವುದು ಮಾತ್ರ ದೈವಚಿತ್ತ.

ಭಾರತೀಯರ ಪವಿತ್ರಗ್ರಂಥ ಭಗವದ್ಗೀತೆಯಲ್ಲಿ 'ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ತಂತಮೇವೈತಿ ಕೌಂತೇಯ ಸದಾ ತದ್ಭಾವಭಾವಿತ| ಎಂಬ ಒಂದು ಶ್ಲೋಕವಿದೆ. ಕೊನೆಯ ಕ್ಷಣದಲ್ಲಿ ಮನದಲ್ಲಿ ಏನನ್ನು ಸ್ಮರಿಸುತ್ತ ಪ್ರಾಣತ್ಯಾಗ ಮಾಡುತ್ತಾರೋ ಅದೇ ಭಾವವನ್ನು ಹೊಂದುತ್ತಾರೆ ಎಂಬುದು ಇದರ ಅರ್ಥ. ಆದ್ದರಿಂದ ಭಗವಂತನನ್ನು ನಮ್ಮ ಜೀವಿತದ ಕೊನೆಯಕ್ಷಣಗಳಲ್ಲಿ ಸ್ಮರಿಸುತ್ತಿರಬೇಕು. ಅಜಮಿಳನ ಕಥೆಯಲ್ಲಿ ಬರುವಂತೆ ಮೊದಲೊಂದು ದಿನವೂ ಭಗವಂತನನ್ನು ನೆನೆಯದೆ ಮರಣ ಕಾಲದಲ್ಲಿ

ಎಸ್. ಹೇಮಲತಾ

ಅವನ ಹೆಸರನ್ನು ಉಚ್ಚರಿಸುವುದು ಸಾಧ್ಯವೇ? 'ಪ್ರಯಾಣ ಕಾಲೇ ಮನಸಾಚಲೇನ' ಎಂಬಂತೆ ಅಚಲವಾದ ಮನಸ್ಸು ಅಷ್ಟು ಸುಲಭವಾಗಿ ಬರಲಾರದು. ಮನೋ ದುರ್ನಿಗ್ರಹಂ ಚಲಂ. ಅದು ಚಂಚಲವಾದುದು. ಅಭ್ಯಾಸದಿಂದ ಮಾತ್ರ ಅದರ ನಿಗ್ರಹ ಸಾಧ್ಯ. ಇಷ್ಟಾದರೂ ಮುಕುಂದ ಮಾಲೆಯಲ್ಲಿ ಹೇಳುವಂತೆ 'ಕಫ ವಾತ ಪಿತ್ತೇನ; ಕಂಠಾವರೋಧನ ವಿದೌ ಸ್ಮರಣಂ ಕುತಸ್ತೆ?



ಕಡೆಯಲ್ಲಿ ನೋವಿನಿಂದ ನರಳುತ್ತಿರುವಾಗ ಅವ ಸ್ಮರಣೆ ಬಂದೀತೋ ಇಲ್ಲವೋ?

ಇಷ್ಟೆಲ್ಲ ಯೋಚನೆ ಮಾಡುತ್ತ ನನ್ನ ಮನ ಈಗ ಮರಣೋನ್ಮುಖರಾಗಿರುವವರ ಗಮನಿಸುತ್ತದೆ. ಹಾಗೇ ಮಾಡುತ್ತ ಅಂತಿ ಆಸೆಯ ಹಲವು ಮುಖಗಳ ಪರಿಚ ದೊರೆತಂತೆ ಅವುಗಳನ್ನು ನಿಮ್ಮೊಂದಿ ಇಲ್ಲಿಹಂಚಿಕೊಳ್ಳಲು ಹೊರಟಿದ್ದೇನೆ.

ಸಾಮಾನ್ಯವಾಗಿ ಕೊನೆಯ ಆಸೆಯ ತೀರಿಸಲೇಬೇಕೆಂದು ಹೇಳುತ್ತಾರೆ. ಬದುಕು

(72ನೇ ಪುಟಕ್ಕೆ)

ಭರವಸೆ ಕಳೆದುಕೊಂಡ ರೋಗಿಯ ಬಗ್ಗೆ ವೈದ್ಯರೂ ಕೂಡ 'ಇನ್ನೇನೂ ಉಪಯೋಗವಿಲ್ಲ ಅವರೇನು ಕೇಳುತ್ತಾರೋ ಅದನ್ನು ನಡೆಸಿಕೊಟ್ಟು ಬಿಡಿ' ಎಂದು ಹೇಳುವುದನ್ನು ಕೇಳುತ್ತಿರುತ್ತೇವೆ.

ಇಂತಹ ಕೊನೆಯ ಆಸೆ ಕೊನೆಯಲ್ಲಿ ತಕ್ಷಣ ಬರುವುದಿಲ್ಲ. ನಾನು ಸಾಯುವುದರೊಳಗಾಗಿ ಇದೊಂದು ಆಸೆಯನ್ನು ಪೂರೈಸಿಕೊಳ್ಳಬೇಕು ಎಂಬ ಹಂಬಲ ಎಲ್ಲರಲ್ಲಿಯೂ ಇರುತ್ತದೆ. ಅದು ನೆರವೇರುವುದು ಮಾತ್ರ ದೈವ ಚಿತ್ತ. ನನ್ನ ತಂದೆಯವರಿಗೆ ಇದ್ದುದು ಒಂದೇ ಆಸೆ. ಕಡೆಯವರೆಗೂ ಯಾರ ಆಶ್ರಯಕ್ಕೂ ಒಳಗಾಗದೆ ಬದುಕಬೇಕು ಎಂಬುದು. ಇದು ಸುಮಾರು ಎಲ್ಲರಿಗೂ ಇರುವ ಬಯಕೆಯೇ. ಆದರೆ ಕೈಗೂಡುವುದು ಬಹಳ ವಿರಳ. ಆದರೆ ಅವರಿಗೆ ಮಾತ್ರ ದೇವರು ಅಂತಹ ಆಸೆಯನ್ನು ಶತಾಂಶ ಕೈಗೂಡಿಸಿಕೊಟ್ಟ. ಬೆಳಿಗ್ಗೆ ಹನ್ನೊಂದು ಗಂಟೆಯವರೆಗೆ ಮಕ್ಕಳೊಡನೆ ಹರಟುತ್ತ ಕುಳಿತಿದ್ದವರು ನಂತರ ರೂಮಿಗೆ ಹೋಗಿ ಪೇಪರ್ ಓದುತ್ತ ಕುಳಿತರು. ಊಟಕ್ಕೆ ಕರೆಯಲು ಒಳಗೆ ಹೋದರೆ, ಹಿಡಿದ ಪೇಪರ್, ಹಾಕಿದ ಕನ್ನಡಕ ಎಲ್ಲವೂ ಹಾಗೆಯೇ ಇತ್ತು. ಕುಳಿತಿದ್ದಂತೆಯೇ ದೇವರ ಪಾದ ಸೇರಿದ್ದರು ಒಂದು ದಿನವೂ ಒಂದು ಹನಿ ಔಷಧವನ್ನು ಜೀವನದಲ್ಲಿ ಅವರು ಸೇವಿಸಲಿಲ್ಲ!

ತಂದೆಯವರ ಆಸೆ ಇದಾದರೆ ತಾಯಿಯವರಿಗಿದ್ದ ಆಸೆಯೇ ಬೇರೆ. 'ತಾನು ಮುತ್ತೈದೆಯಾಗಿ ಕಣ್ಣು ಮುಚ್ಚಬೇಕು' ಎಂಬುದು ಅದಕ್ಕಾಗಿ ಅವರು ಮಾಡಿದ್ದಷ್ಟು ವ್ರತ ಪೂಜಾದಿಗಳನ್ನು ನಾವು ಬೇರೆಲ್ಲೂ ನೋಡಿಲ್ಲ. ಹಾಗೆಯೇ ಜಾಂಡೀಸಿನಿಂದಾಗಿ ಆಸ್ಪತ್ರೆ ಸೇರಿದ ಅವರು ಎಲ್ಲರನ್ನು ಕರೆದು ಗಂಗೋದಕ ಹಾಕಿಸಿಕೊಂಡು, ಕುಂಕುಮ ವಿರಿಸಿಕೊಂಡು ತಂದೆಯವರ ತೊಡೆಯ ಮೇಲೆ ನಿಶ್ಚಿಂತೆಯಾಗಿ ಪರಲೋಕ ಯಾತ್ರೆ ಕೈಗೊಂಡರು.

ಹೀಗೆ ಸದಾ ತದ್ಭಾವ ಭಾವಿತರಾದರೆ ಪರಮಾತ್ಮ ಅವರ ಬಯಕೆಯನ್ನು ಕೈಗೂಡಿಸುತ್ತಾನೇನೋ. ಆದರೆ ಇನ್ನೂ ಏನೇನೋ ಲೌಕಿಕವಾದ ಆಸೆಗಳಲ್ಲಿ ಮುಳುಗಿರುವ ನಮ್ಮಂಥವರ ಗತಿ!

ತಾಯಿಯವರಂತೆ ಮುತ್ತೈದೆಯಾಗಿ ಸಾಯಬೇಕೆಂದು ಬಯಸುವವರು ಬಹಳ ಜನ. ಆದರೆ ನಮ್ಮ ಕಮಲಮ್ಮನವರಂತೆ ಹೇಳುವವರು ಬಹಳ ವಿರಳ. ಕಮಲಮ್ಮ ಎಂಭತ್ತರ ಅಂಚಿನಲ್ಲಿರುವ ವೃದ್ಧೆ ತೊಂಭತ್ತನ್ನು ಸಮೀಪಿಸುತ್ತಿದ್ದ ಪತಿಯ ಶುಶ್ರೂಷೆಯನ್ನು ಒಂದು ಸಲವೂ ಬೇಸರಿಸದೆ ಮಾಡುತ್ತಿದ್ದರು. ಮೊನ್ನೆ ರಾಯರು ನಿಧನರಾದ ಸುದ್ದಿ ಕೇಳಿ ನಾನಲ್ಲಿಗೆ ಹೋದಾಗ ಸಹಜವಾಗಿ ನಿರೀಕ್ಷಿಸಿದ್ದ ಕಣ್ಣೀರಿನ ಕೋಡಿ ಹರಿಸುತ್ತ ಗೋಳಾಡುತ್ತಿರುವ ಕಮಲಮ್ಮನವರನ್ನಲ್ಲ, ಶಾಂತವಾಗಿ ನಡೆಯುತ್ತಿರುವುದನ್ನೆಲ್ಲ ನೋಡುತ್ತ ತಮಗೆ ಏನೇನೂ ಸಂಬಂಧವಿಲ್ಲವೋ ಎಂಬಂತೆ ಕುಳಿತಿದ್ದ ಅವರನ್ನು 'ಪಾಪ ಈ ವಯಸ್ಸಿನಲ್ಲಿ ನೀವು ವೈಧವ್ಯ ಅನುಭವಿಸುವಂತಾಯಿತಲ್ಲ' ' ಎಂದು ನಾನು ಮರುಕತೋರಿಸಿದಾಗ ಅವರು 'ನಾನು ಮದುವೆಯಾದಾಗ ಹತ್ತು ವರ್ಷದ ಹುಡುಗಿ. ಈ ಎಪ್ಪತ್ತು ವರ್ಷಗಳಿಂದ ಒಂದು ಸಲವೂ ಅವರನ್ನು ಬಿಟ್ಟು ಹೋಗಿಲ್ಲ. ಈಗ ಕೊನೆಯವರೆಗೂ ಅವರ ಆಸೆಯಂತೆ ಅವರ ಜೊತೆಯಲ್ಲೇ ಇದ್ದು ನನ್ನ ಕರ್ತವ್ಯ ಮಾಡಿದ್ದೀನಿ. ನಾನು ಮೊದಲೇನಾದರೂ ಹೋಗಿ ಬಿಟ್ಟಿದ್ದರೆ ಅವರನ್ನು ನೋಡಿಕೊಳ್ಳಲು ಯಾರಿದ್ದರು? ಈಗ ಇಲ್ಲಿ ನನ್ನ ಕೆಲಸ ಮುಗಿಯಿತು. ಇನ್ನು ಅವನು ಕರೆಸಿಕೊಂಡಾಗ ಹೋಗಿ ನನ್ನವರನ್ನು ಸೇರಿಕೊಳ್ಳುತ್ತೇನೆ." ಎಂದು ಹೇಳಿದರು ಮುತ್ತೈದೆಯಾಗಿ ಸಾಯಬೇಕು ಎಂದು ಬಯಸುವುದು ಸ್ವಾರ್ಥ. ಯಜಮಾನರ ಸೇವೆ ಕಡೆಯವರೆಗೂ ಕೊಡು ದೇವರೇ ಎಂದೇ ನಾನು ಬೇಡುತ್ತಿದ್ದೆ. ನಾನು ಮಲಗಿ ಅವರ ಕೈಲಿ ಸೇವೆ ಮಾಡಿಕೊಳ್ಳಲಿಲ್ಲ ಅದೇ ನನಗೆ ಸಂತೋಷ. ಈಗ ಇಬ್ಬರ ಕೊನೆಯಾಸೆ ಫಲಿಸಿತು" ಎಂದರು.

## ಕರುಣಾಜನಕ ಕತೆ

ಮನಸ್ಸು ನಿಶ್ಚಿಂತವಾಗಿದ್ದರೆ ಇಂತಹ

ಪಾರಲೌಕಿಕ ವಿಷಯಗಳಲ್ಲಿ ಮಗ್ನವಾಗಬಹುದು. ಆದರೆ ಏನಾದರೂ ಚಿಂತೆ ಮನಸ್ಸನ್ನು ಕೊರೆಯತೊಡಗಿದರೆ ಪರಿಸ್ಥಿತಿ ವಿಷಮಿಸಬಹುದು. ನನ್ನ ಸ್ನೇಹಿತೆಯೊಬ್ಬಳ ಕರುಣಾಜನಕ ಕಥೆ ನನಗೆ ಇಲ್ಲಿ ನನಗೆ ನೆನಪಿಗೆ ಬರುತ್ತದೆ. ಮದುವೆಯಾದ ಎರಡು ವರ್ಷಗಳಲ್ಲೆ ಆಕೆ ಮುದ್ದಾದ ಗಂಡುಮಗುವಿಗೆ ತಾಯಿಯಾದಳು. ಮುಂದೆ ಆರೇಳು ವರ್ಷ ಗಂಡನ ಮನೆಯವರಿಗೂ ತವರು ಮನೆಯವರಿಗೂ ಉಂಟಾದ ಮನಸ್ತಾಪದಲ್ಲಿ ಅತ್ತೆಯ ಮನೆಯಲ್ಲಿ ಪಡಬಾರದ ನೋವನ್ನು ಅನುಭವಿಸುತ್ತ ಕಾಲಕಳೆದಳು. ಶಾಲೆಯೊಂದರಲ್ಲಿ ಅಧ್ಯಾಪಕಿಯಾಗಿದ್ದ ಆಕೆ ತನ್ನ ಮಗುವನ್ನು ಬೆಳೆಸಲು ಪಟ್ಟಪಾಡು ಕಣ್ಣೀರುತರಿಸುವಂಥದು. ತನ್ನ ತಾಯಿಯ ಅಂತಿಮ ದರ್ಶನಕ್ಕೆ ಹೋಗಲು ಅವಳಿಗೆ ಅನುಮತಿ ದೊರೆಯಲಿಲ್ಲ. ದುರದೃಷ್ಟವೋ ಎಂಬಂತೆ ತಾಯಿಸತ್ತ ಎರಡು ಮೂರು ತಿಂಗಳಲ್ಲೇ ಆಕೆ ಮತ್ತೆ ಗರ್ಭಿಣಿಯಾದಳು. ಬಂದವರಾರೋ 'ನಿನ್ನ ತಾಯೀನೇ ನಿನ್ನ ಹೊಟ್ಟೇಲಿ ಹುಟ್ಟಿ ಬರ್ತಾಳೆ, ಬಿಡು ಅವರ ಹೆಸರೇ ಮಗುವಿಗೆ ಇಟ್ಟು ಬಿಡು' ಎಂದು ಹೇಳಿದ್ದೇ ತಡ, ಅತ್ತೆ ಒಂದೇ ಸಮನೆ ಕಾಡಲು ಪ್ರಾರಂಭಿಸಿದರು. ತನ್ನ ಪರಿಸ್ಥಿತಿಯೇ ಹೀಗಾದಾಗ ಮುಂದೆ ತನ್ನ ತಾಯಿಯ ಪ್ರತಿರೂಪವಾಗಿ ಬರುವ ಮಗುವನ್ನು ಸಾಕುವುದು ಅಸಾಧ್ಯವೆನಿಸಿ, ಜೊತೆಗೆ ತನಗೆ ಬಾಣಂತಿತನ ಮಾಡುವರು ಯಾರೂ ಇಲ್ಲದ ಪರಿಸ್ಥಿತಿಯನ್ನು ನೋಡಿ ಗರ್ಭಪಾತ ಮಾಡಿಸಿಕೊಂಡಳು. ಆದರೆ ಪಾಪಪ್ರಜ್ಞೆ ಆಕೆಯನ್ನು ಕಾಡಲು ಹೊರಟು, ದಿನ ದಿನಕ್ಕೆ ಕ್ಷೀಣಿಸಿದ ಆಕೆ ಸದಾ 'ನನ್ನ ಮಗು ಸತ್ತು ಹೋಯಿತು ನಾನೇ ಕತ್ತು ಹಿಸುಕಿ ಸಾಯಿಸಿಬಿಟ್ಟೆ' ಎಂದು ಕೊರಗುತ್ತ ಕೊನೆಯುಸಿರೆಳೆದಳು. ಇಂತಹ ಮನಸ್ಥಿತಿಯಲ್ಲಿ ಬೇರಾವ ಯೋಚನೆ ಬರಲು ಸಾಧ್ಯ. ಆಗಲೂ ಅತ್ತೆ ಮನೆಯವರು 'ಆ ರಾಕ್ಷಸಿ ಸಾಯುವಾಗಲೂ ಬಿಡಲಿಲ್ಲ. ಮಗಳ ಮೇಲೆ ದೆವ್ವವಾಗಿ ಬಂದು ಅವಳನ್ನು ಸೆಳೆದುಕೊಂಡು ಹೋದಳು, ಎಂದು ಅವರು ಮನೆಯವರನ್ನೆ ದೂರಿದರೆ ಹೊರತು, ತಮ್ಮ ತಪ್ಪನ್ನು ಅರ್ಥಮಾಡಿಕೊಳ್ಳಲಿಲ್ಲ. ಸಾಯುವಾಗ ಅವಳಿಗಿದ್ದುದು ತನ್ನ ಮೊದಲ ಮಗುವಿನ ಚಿಂತೆಯೇ. ಅಂತಹ ಮನೋವಿಕಾರ ಸ್ಥಿತಿಯಲ್ಲಿಯೇ ಒಂದು ಸಲ ಎಚ್ಚರಾದಾಗ 'ನನ್ನ ಪುಟ್ಟುನಾದ್ರೂ ಚೆನ್ನಾಗಿ ನೋಡಿಕೊಳ್ಳಿ' ಎಂದು ಅತ್ತೆಕೈಲಿ ಭಾಷೆ ತೆಗೆದುಕೊಂಡಳು?

ಸಾಯುವವರ ಕೊನೆಯ ಆಸೆಯನ್ನು



ತೀರಿಸಲೇ ಬೇಕೆಂಬುದು ಸಾಮಾನ್ಯವಾದ ಅಭಿಪ್ರಾಯ. ಆದರೆ ಅದರ ಪರಿಣಾಮವನ್ನು ಯೋಚಿಸಬೇಕಲ್ಲವೆ? ಸುಬ್ಬಮ್ಮನವರು ಮರಣಶಯ್ಯೆಯಲ್ಲಿ ಜೀವ ಹೋಗದೆ ಚಡಪಡಿಸುತ್ತಿದ್ದರು. ಮೊಮ್ಮಗಳು ರತ್ನಳ ಮದುವೆ ನೋಡದೆ ಸಾಯಬೇಕಲ್ಲ ಎಂದು ಅವರ ಜೀವ ಇರಲಾರದೆ, ಹೋಗಲಾರದೆ ತಳಮಳಿಸುತ್ತಿತ್ತು. ಕಡೆಗೆ ಅವರ ಅಣ್ಣ ರಾಮಯ್ಯನವರು ತಮ್ಮ ಮಗನಿಗೆ ಅವಳನ್ನು ತಂದುಕೊಳ್ಳುವುದಾಗಿ ಭಾಷೆ ಕೊಟ್ಟ ಬಳಿಕ ನಿಶ್ಚಿಂತೆಯಾಗಿ ಕಣ್ಣುಮುಚ್ಚಿದರು. ಆದರೆ ಮಗ ಸುರೇಶನಿಗೆ ಆ ಹುಡುಗಿ ಇಷ್ಟವಿರಲಿಲ್ಲ. ತಂದೆ 'ಕೊಟ್ಟ ಭಾಷೆಗೆ ತಪ್ಪಲು ಸಾಧ್ಯವೇ ಇಲ್ಲ, ನೀನು ಅವಳನ್ನು ಮದುವೆಯಾಗದೆ ಇದ್ದರೆ ನಾನು ಬಾವಿಗೆ ಬೀಳುತ್ತೇನೆ.' ಎಂದು ಉಪವಾಸ ಸತ್ಯಾಗ್ರಹ ಆರಂಭಿಸಿದಾಗ ವಿಧಿಯಿಲ್ಲದೆ ಒಪ್ಪಿಕೊಂಡ. ಅವರ ಸಂಸಾರ 'ಎತ್ತು ಏರಿಗೆಳೆದರೆ........ ' ಎಂಬಂತೆ ನಾಲ್ಕಾರು ವರ್ಷ ಎಳೆದಾಡಿ ಕೊನೆಗೆ ವಿವಾಹ ವಿಚ್ಛೇದನದಲ್ಲಿ ಮುಕ್ತಾಯವಾಯಿತು.

ಕೊನೆಯ ಆಸೆ ಪೂರೈಸದೆ ಜೀವ ಹೋಗುವುದಿಲ್ಲ ಎಂದಾಗ ಮತ್ತೊಂದು ಘಟನೆ ನೆನಪಿಗೆ ಬರುತ್ತದೆ. ನಮ್ಮಜ್ಜ ತಮ್ಮ ವಿಧವೆ ಮಗಳ ಹಣವನ್ನು ಬಡ್ಡಿಯ ಆಸೆಗೆ ಯಾರಿಗೋ ಕೈಸಾಲ ಕೊಟ್ಟುಬಿಟ್ಟಿದ್ದರು. ಅವರು ಹಣವನ್ನು ಸಮಯಕ್ಕೆ ಸರಿಯಾಗಿ ಹಿಂದಿರುಗಿಸಲಿಲ್ಲ, ಅವರಿಗೆ ಅದೇ ಕೊರಗು ಮನಸ್ಸಿನಲ್ಲಿತ್ತು. ಕಡೆಗಾಲ ಬಂದಿತು. ಮಾತನಾಡಲೂ ಆಗುತ್ತಿಲ್ಲ, ಏನೋ ಹೇಳಲು ಚಡಪಡಿಸುತ್ತಾರೆ. ಆಗುತ್ತಿಲ್ಲ ಹತ್ತಿರದಲ್ಲಿದ್ದವರು ಯಾರೋ ಅವರಿಗೇನೋ ಆಸೆ ಇದೆ. ಅದನ್ನು ಪೂರೈಸಿಬಿಡಿ. ಇಲ್ಲದಿದ್ದರೆ ಜೀವ ಹೀಗೆ ಚಡಪಡಿಸುತ್ತದೆ ಎಂದರು. ತಕ್ಷಣ ಸಾಲ ಪಡೆದಿದ್ದವರನ್ನು ಕರೆಸಲಾಯಿತು. ಅವರೂ ಸಭ್ಯರೇ. ಏನೋ ಅನಾನುಕೂಲಗಳಿಂದ ಹಣ ಹಿಂದಿರುಗಿ ಕೊಡಲು ಆಗಿರಲಿಲ್ಲ, ವಿಷಯ ತಿಳಿದು ಮತ್ತೆ ಕಷ್ಟಪಟ್ಟು ಎಲ್ಲೆಲ್ಲೋ ಸಾಲ ಮಾಡಿ ಹಣವನ್ನು ತಂದು ಇವರ ಕೈಗೆ ಕೊಟ್ಟರು. ಅದನ್ನೊಮ್ಮೆ ತೃಪ್ತಿಯಾಗಿ ನೋಡಿ ಮಾರನ ದಿನವೇ ಪರಂಧಾಮವನ್ನೈದಿದರು.

ಮತ್ತೊಬ್ಬ ವೃದ್ಧರು ಪಾರ್ಶ್ವವಾಯುವಿನಿಂ ಹಾಸಿಗೆ ಹಿಡಿದಿದ್ದರು. ಮೊಮ್ಮಗಳನ್ನು ಕಂಡ ಅವರಿಗೆ ಬಹಳ ಪ್ರೀತಿ. ಅವಳಿಗೊಂದ ಕಾಗದವನ್ನು ಕಷ್ಟಪಟ್ಟು ಬರೆದರು. ಬರೆದದ್ದೆ ಕಲಸುಮೇಲೋಗರ. ಒಂದು ಅಕ್ಷರವನ್ನು ಓದಲ ಸಾಧ್ಯವಿರಲಿಲ್ಲ, ವಿಳಾಸವನ್ನು ಮಾತ್ರ ಸರಿಯಾ ಬರೆದಿದ್ದರು! ಅದನ್ನು ನೋಡಿ ಹಾಸ್ಟಲ್‌ನ ಓದುತ್ತಿದ್ದ ಆಕೆ ಓಡಿ ಬಂದರು. ಮಾತನಾಡಲು ಆಗದ ಸ್ಥಿತಿ. ಮೊಮ್ಮಗಳನ್ನು ನೋಡಿ ಗಟ್ಟಿಯಾ ಅತ್ತುಬಿಟ್ಟರು. ಹಾಗೆಯೇ 5-6 ವರ್ಷ ಕಳೆಯಿತ ಊಟವನ್ನು ಇನ್ನೊಬ್ಬರು ಮಾಡಿಸಬೇಕ ಇಷ್ಟರಲ್ಲಿ ಆ ಹುಡುಗಿಗೆ ಮದುವೆಯಾಯಿತ ದಂಪತಿಗಳು ಬಂದು ಕಾಲುಮುಟ್ಟಿ ನಮಸ್ಕಾ ಮಾಡಿದರು. ಇಬ್ಬರನ್ನು ಕಣ್ಣು ತುಂಬ ನೋ ಒಮ್ಮೆ ನಕ್ಕರು. ಮಾರನೇದಿನ ಏಳಿಸಲು ಹೋದ ಅವರ ಪ್ರಾಣ ಅನಂತದಲ್ಲಿ ಲೀನವಾಗಿತ್ತು.

ಕೆಲವು ಸಲ ಆಸೆ ತೀರಿದ ಮೇ ಚೇತರಿಸಿಕೊಳ್ಳುವುದೂ ಉಂಟು. ಕೆಲವರಂತು ಸ್ವಲ್ಪ ಖಾಯಿಲೆಯಾದರೂ ಮುಗಿದೇಹೋದಂ ಚಡಪಡಿಸುತ್ತಾರೆ. ನಂತರ ಏನೂ ಆಗದವರಂ ಚೇತರಿಸಿಕೊಳ್ಳುತ್ತಾರೆ. ನಮ್ಮ ಊ ಆಚಾರ್ಯರಿಗೆ ಹಯಗ್ರೀವ ಎಂದರೆ ಬಲು ಆ ಒಮ್ಮೆ ವಿಪರೀತ ಖಾಯಿಲೆಯಾಗಿ ವೈದ್ಯರು ಇ ಬದುಕೋಲ್ಲ ಅವರಿಗೆ ಏನು ಬೇಕೋ ಕೊ ಬಿಡಿ ಎಂದು ಹೇಳಿದರು. ಆಚಾರ್ರು ಹಯಗ್ರೀ ಮಾಡಿ ಬಡಿಸಿ ಬಿಡಿ ತೃಪ್ತಿಯಾಗಿ ತಿಂದುಬಿಡ್ತೇ ಅಂತ ಅಂದಾಗ ಮನೆಯಾಕೆ ಸ್ವಲ್ಪ ಹೆಚ್ಚಾಗಿಯ ಮಾಡಿ ಬಡಿಸಿದರು. ಆಶ್ಚರ್ಯ! ಮಾರ ದಿನದಿಂದಲೇ ಗುಣಮುಖರಾದ ಆಚಾರ್ಯ ಈಗ 'ಹಯಗ್ರೀವಾಚಾರ್ಯ' ರೆಂ ಪ್ರಸಿದ್ಧಿಯಾಗಿದ್ದಾರೆ.

ಅಂತೂ ಆಸೆಗೆ ಕೊನೆಯೇ ಇಲ್ಲ ಅಲ್ಲವೆ?

# ಪೆಂಟಾಟೋಮಿಡ್ ತಿಗಣೆಗಳ ಜೀವನಶೈಲಿ

ಕೀಟ ಪ್ರಪಂಚದಲ್ಲಿ ವೈವಿಧ್ಯಮಯ ಕೀಟಗಳಿವೆ. ನಾನಾ ಬಗೆಯ ಕೀಟಗಳು ತಮ್ಮದೇ ಆದ ಜೀವನ ಶೈಲಿಯನ್ನು ರೂಪಿಸಿಕೊಂಡು ಪರಿಸರದ ವಿವಿಧ ಸ್ತರಗಳಲ್ಲಿ ಬಾಳಿ. ಭೂಮಿಯ ಮೇಲಿರುವ ಸಸ್ಯ ಮತ್ತು ಪ್ರಾಣಿಗಳಿಗೆ ಉಪಯುಕ್ತವೂ ನಿರುಪಯುಕ್ತವೂ ಆಗಿವೆ. ಅವುಗಳಲ್ಲಿ ಹೆಟಿರಾಪ್‌ಟಾರ ತಳಿಗೆ ಸೇರಿದ ಪೆಂಟಾಟೋಮಿಡೇ ಕುಟುಂಬದ ಅನೇಕ ಜಾತಿಯ ತಿಗಣೆಗಳು ಅನೇಕ ಬಹೂಪಯೋಗಿ ಸಸ್ಯಗಳಾದ ತರಕಾರಿ ಹಾಗೂ ಮರಗಿಡಗಳ ರಸಹೀರಿ ಬದುಕುತ್ತವೆ.

ಆಂಗ್ಲ ಭಾಷೆಯಲ್ಲಿ ಪೆಂಟಾಟೋಮಿಡ್ ಅಥವಾ ಸ್ಟಿಂಕ್ ಬಗ್ಸ್ ಎಂದು ಕರೆಯುವ ಈ ತಿಗಣೆಗಳು ವೈಜ್ಞಾನಿಕವಾಗಿ ಸೈಕ್ಲೊಪೆಲ್ಟಾ, ಲಿಂಟಿಸ್ಸೆಯೋಪ್ಸಿಸ್, ಬಾಗ್ರಡಾ ಕ್ಯಾಲಿಡಾ, ಡಿಪ್ಲೊಕ್ಸಸಿಸ್, ಮತ್ತು ನಜೆರಾ ಜಾತಿಗಳಿಗೆ ಸೇರಿವೆ. ಸೈಕ್ಲೊಪೆಲ್ಟಾ ಜಾತಿಯ ತಿಗಣೆಗಳು ಹೊಂಗೆ ಮತ್ತು ಮುಳ್ಳಡಿಕೆ ಮರಗಳ ಮೇಲೆ ಸಾವಿರಾರು ಸಂಖ್ಯೆಯಲ್ಲಿ ಕಂಡುಬರುತ್ತವೆ. ಇವುಗಳ ಜೀವನಶೈಲಿ ವಿಚಿತ್ರವಾಗಿದೆ. ಉಳಿದ ಜಾತಿಯ ತಿಗಣೆಗಳಿಗೆ ಅತೀ ಪ್ರೀಯವಾದ ತಾಣವೆಂದರೆ, ವಿವಿಧ ಬಗೆಯ ತರಕಾರಿ ಮತ್ತು ಆಹಾರದ ಬೆಳೆಗಳು. ಇವು ಮರದ ರೆಂಬೆ-ಕೊಂಬೆಗಳಿಗೆ ಅಂಟಿಕೊಂಡು ರಸಹೀರಿ ಬದುಕುತ್ತವೆ.

ಒಂದು ಮರದ ವಿವಿಧ ಕೊಂಬೆಗಳಲ್ಲಿ ಪೆಂಟಾಟೋಮಿಡ್ ತಳಿಯ ನೂರಾರು ತಿಗಣೆ ಕುಟುಂಬಗಳು ವಾಸಿಸುತ್ತಿವೆ. ವಿಶೇಷವೆಂದರೆ ಪ್ರತಿ ಕುಟುಂಬದಲ್ಲಿ ನಾಲ್ಕರಿಂದ ಹನ್ನೆರಡರವರೆಗೆ ಪ್ರೌಢವಯಸ್ಸಿನ ತಿಗಣೆಗಳಿದ್ದು ಇವುಗಳಲ್ಲಿ ಒಂದು ಹೆಣ್ಣಿಗೆ ಒಂದೇ ಗಂಡು ಸಂಗಾತಿಯಾಗಿ ಜೊತೆಯಾಗಿ ವಾಸಿಸುತ್ತವೆ. ಆಕಾರ ಮತ್ತು ಗಾತ್ರದಲ್ಲಿ ಗಂಡು ಹೆಣ್ಣು ತಿಗಣೆಗಳು ಭಿನ್ನವಾಗಿವೆ. ಗಂಡು ಹೆಣ್ಣಿಗಿಂತ ಗಾತ್ರದಲ್ಲಿ ದೊಡ್ಡದಾಗಿದ್ದು, ದೇಹದ ತೂಕವೂ ಸಹ ಜಾಸ್ತಿಯಾಗಿರುತ್ತದೆ. ಪ್ರತಿವರ್ಷ ಮಳೆಗಾಲದ ದಿನಗಳಲ್ಲಿ ಪ್ರಾಯಕ್ಕೆ ಬಂದ ಗಂಡು ಮತ್ತು ಹೆಣ್ಣು ತಿಗಣೆಗಳು ಜೊತೆಗೂಡುತ್ತವೆ. ನಂತರ 20-25 ದಿನಗಳ ಕಾಲ ಸಂಭೋಗ ಕ್ರಿಯೆ ನಡೆಸುತ್ತವೆ.ಈ ಕ್ರಿಯೆ ಜೂನ್ ಜುಲೈ ತಿಂಗಳಲ್ಲಿ ಪೂರ್ಣಗೊಂಡ ನಂತರ, ಗರ್ಭಧರಿಸಿದ ಹೆಣ್ಣು ತನ್ನ ಉದರದಿಂದ ಕನಿಷ್ಠ 50-200 ರಷ್ಟು ಮೊಟ್ಟೆಗಳನ್ನು ಮರದ ಎಳೆಯದಾದ ರೆಂಬೆಗಳ ಮೇಲೆ ಸಾಲು ಸಾಲಾಗಿ ಮುತ್ತಿನಂತೆ ಜೋಡಿಸಿಡುತ್ತದೆ.

## ಬೆಳವಣಿಗೆಯ ಹಂತಗಳು

ಪ್ರಾರಂಭದಲ್ಲಿ ಮೊಟ್ಟೆಗಳು ಪಾರದರ್ಶಕ ಬಣ್ಣವಾಗಿದ್ದು, ಗಾಳಿಯ ಸಂಪರ್ಕ ಬಂದಾಗ 30-40 ಸೆಕೆಂಡುಗಳಲ್ಲಿ ಕಂದುಬಣ್ಣಕ್ಕೆ ತಿರುಗುತ್ತವೆ. ಸುಮಾರು 10 ದಿನಗಳಲ್ಲಿ ಮೊಟ್ಟೆಯೊಳಗಿನ ಭ್ರೂಣ ಬೆಳೆದು ಚಿಕ್ಕ ಮರಿ ತಿಗಣೆಗಳು ಹೊರಬರುತ್ತವೆ. ಮರಿತಿಗಣೆಗಳು ಹುಟ್ಟಿದಾಕ್ಷಣ ಕೆಂಪಗೆ ಇದ್ದು, ಕ್ರಮೇಣ ನಸುಗೆಂಪು

ಡಾ. ಬಿ.ಬಿ. ಹೊಸಟ್ಟಿ

ಬಣ್ಣಕ್ಕೆ ತಿರುಗುತ್ತವೆ.

ಒಟ್ಟು 80-85 ದಿನಗಳ ಬೆಳವಣಿಗೆಯ ಹಂತದಲ್ಲಿ ಏಳು ಬಾರಿ ಹೊರಕವಚ ಕಳಚಿ ಪ್ರೌಢಾವಸ್ಥೆ ತಲುಪುತ್ತವೆ. ಈ ಬೆಳವಣಿಗೆಯ ಹಂತವನ್ನು ಎರಡು ಭಾಗವಾಗಿ ವಿಂಗಡಿಸಿ, ಎಳೆಯ ವಯಸ್ಸಿನ ಒಂದರಿಂದ ನಾಲ್ಕು ಬಾರಿ ಹೊರಮೈ ಕಳಚುವ ಮರಿಗಳು ತಂದೆ ತಾಯಿಯರ ಜೊತೆ ವಾಸಿಸುತ್ತವೆ. ಈ ಹಂತವು ತುಂಬಾ ಸೂಕ್ಷ್ಮವಾಗಿದ್ದು, ವೈರಿ ಪ್ರಾಣಿಗಳಾದ ಮೈನಾ ಹಕ್ಕಿ, ಇರುವೆ ಹಾಗೂ ಇನ್ನಿತರ ಶತ್ರುಗಳ ದಾಳಿಯಿಂದ ರಕ್ಷಿಸಿಕೊಳ್ಳಲು ಮರಿತಿಗಣೆಗಳು ತಂದೆ ತಾಯಿಯರ ಜೊತೆಗಿದ್ದು, ಅವುಗಳ ಆಶ್ರಯದಲ್ಲಿ ಬೆಳೆಯುತ್ತವೆ. ಇದರ ಜೊತೆಗೆ ಪ್ರಕೃತಿದತ್ತವಾಗಿ ತಮ್ಮ ದೇಹದಲ್ಲಿರುವ ಗ್ರಂಥಿಗಳಿಂದ ದುರ್ವಾಸನೆಯುಕ್ತ ದ್ರವವನ್ನು ಸ್ರವಿಸಿ, ವೈರಿಗಳನ್ನು ಓಡಿಸುತ್ತವೆ. ಮತ್ತು ಸಮರ್ಥವಾಗಿ ಎದುರಿಸುತ್ತವೆ. ನಂತರ ಮಧ್ಯವಯಯಸ್ಸಿಗೆ ಕಾಲಿಡುವ ಹಂತದಲ್ಲಿ ತಂದೆ ತಾಯಿಗಳ ಆಶ್ರಯದಿಂದ ಕಳಚಿಕೊಂಡು, ಸ್ವತಃ ಮರದತುಂಬೆಲ್ಲಾ ಹರಿದಾಡುತ್ತವೆ. ಈ ಸಮಯದಲ್ಲಿ ಸಾವಿರಾರು ತಿಗಣೆಗಳು ಕಲೆತು ಒಂದೊಂದು ದೊಡ್ಡ ಸಮೂಹಗಳಲ್ಲಿ ದೊಡ್ಡ ಕಾಂಡಗಳ ರಸಹೀರುತ್ತಾ ವಾಸಿಸುವುದು ಇವುಗಳ ವಿಶೇಷತೆಯಾಗಿದೆ. ಏಳು ಬಾರಿ ದೇಹದ ಹೊರಕವಚ ಕಳಚಿದ ನಂತರ ಪರಿಪೂರ್ಣ ಪ್ರೌಢಾವಸ್ಥೆ, ಸೇರಿದ ನಂತರ ನಸುಗೆಂಪು ಬಣ್ಣದಿಂದ ಕಪ್ಪುಬಣ್ಣಕ್ಕೆ ತಿರುಗಿ ಗಟ್ಟಿಯಾದ ಹೊರಮೈ ಹೊಂದಿ 12-15 ತಿಂಗಳುಗಳ ಕಾಲವಾಸಿಸುತ್ತವೆ.

ತಿಗಣೆಗಳ ಸಂಖ್ಯೆ ವಯಸ್ಸು, ಮತ್ತು ಭಕ್ಷಿಸುವ ಅವಧಿ ಮುಂತಾದ ವಿಚಾರಗಳನ್ನು ಅರಿತುಕೊಂಡು ತಿಗಣೆಗಳ ಬಾಧೆಯಿಂದ ನರಳುವ ಗಿಡ ಮರಗಳ ಜೀವಿತ ಅವಧಿ ನಿರ್ಧರಿಸಬಹುದಾಗಿದೆ. ನಾನಾ ರೀತಿಯಿಂ[illegible] ಉಪಯೋಗಕ್ಕೆ ಬರುವ ಮರಗಳಾದ ಹೊಂ[illegible] ಮತ್ತು ಮುಳ್ಳಡಿಕೆ ಮರಗಳ ರಸವನ[illegible] ಸೈಕ್ಲೋಪೆಲ್ಲಾ ಜಾತಿಗೆ ಸೇರಿದ ತಿಗಣೆಗಳ[illegible] ರಸಹೀರಿ, ಕಾಂಡವನ್ನು ನಿರುಪಯುಕ್ತಗೊಳಿಸಿ[illegible] ನಾಶಪಡಿಸುತ್ತವೆ. ಈ ತಿಗಣೆಗಳ ನಿಯಂತ್ರಣ[illegible] ಅತ್ಯವಶ್ಯಕವಾಗಿವೆ.

ಅತೀ ದಪ್ಪನೆಯ ದೇಹದ ಹೊರಕವಚ[illegible] ಹೊಂದಿರುವ ಈ ತಿಗಣೆಗಳ ನಿಯಂತ್ರಣ[illegible] ಕಷ್ಟಸಾಧ್ಯ. ರಾಸಾಯನಿಕ ಕ್ರಿಮಿನಾಶಕಗಳ ಬಳ[illegible] ಅನುಪಯುಕ್ತವಾಗಿದೆ. ಈ ತಿಗಣೆಗ[illegible] ಗುದದ್ವಾರದಿಂದ ಹೊರಸೂಸುವ ದ್ರ[illegible] ಘಾಟುವಾಸನೆಯಿಂದ ಕೂಡಿದ್ದು, ಮನುಷ್ಯ[illegible] ಚರ್ಮದ ಮೇಲೆ ಬಿದ್ದರೆ ಗಾಯವಾಗುವುದು[illegible] ಕಾರಣ ಈ ಕೀಟಗಳ ನಿಯಂತ್ರಣದ ಬಗ್ಗೆ ಉನ್ನ[illegible] ಮಟ್ಟದ ಸಂಶೋಧನೆ ಇತ್ತೀಚಿನ ದಿನಗಳ[illegible] ಅವಶ್ಯವಾಗಿದೆ. ಜೊತೆಗೆ ರಾಸಾಯನಿಕಗಳನ[illegible] ಬಳಸದೇ ಜೈವಿಕವಾಗಿ ಪರಾವಲಂಬಿಗಳನ[illegible] ಉಪಯೋಗಿಸಿ ಈ ಕೀಟಗಳ ನಿಯಂತ್ರಣದ[illegible] ಗಮನಹರಿಸುವುದು ಸೂಕ್ತವಾಗಿದೆ. ಮೊ[illegible] ಹಂತದಲ್ಲಿ ನಾಶಪಡಿಸುವುದರ ಜೊತೆ[illegible] ಆಗತಾನೇ ಹೊರಮೈ ಕವಚ ಕಳಚಿದ ತಕ್ಷಣ[illegible] ಹಂತದಲ್ಲಿ ಅತೀ ಕಡಿಮೆ ಪ್ರಮಾಣದ[illegible] ರಾಸಾಯನಿಕಗಳನ್ನು ಉಪಯೋಗಿಸಿ, ಇವುಗಳನ[illegible] ನಾಶಪಡಿಸಬಹುದಾಗಿದೆ.

ಕರ್ನಾಟಕದ ಮಂಗಳೂರು ಮತ್ತು ಕುವೆಂ[illegible] ವಿಶ್ವವಿದ್ಯಾಲಯಗಳ ಪ್ರಾಣಿಶಾಸ್ತ್ರ ವಿಭಾಗಗಳ[illegible] ಈ ತಿಗಣೆಗಳ ಬಗ್ಗೆ ಮೂಲ ಮತ್ತು ಅನ್ವಯಿ[illegible] ಹಂತದಲ್ಲಿ ಸಂಶೋಧನೆಗಳು ನಡೆಯುತ್ತಿ[illegible] ಇಂತಹ ಕ್ರಮಗಳಿಂದ ಉಪಯೋ[illegible] ಜೀವಸಂಕುಲವನ್ನು ಅನುಪಯುಕ್ತ ಕೀಟಗ[illegible] ಕಾಟದಿಂದ ಸಂರಕ್ಷಿಸಲು ದಾ[illegible] ಕಂಡುಕೊಳ್ಳಬಹುದಲ್ಲವೇ? ●

# ಸೌಭರಿ ಋಷಿ

ಇಕ್ಷ್ವಾಕು ವಂಶದಲ್ಲಿ ಮಾಂಧಾತನೆಂಬ ಮಹಾಮಹಿಮಾವಂತ ರಾಜನಿದ್ದ. ಸಪ್ತದ್ವೀಪ ಸಹಿತಳಾದ ವಸುಂಧರೆಯನ್ನೇ ವಶಮಾಡಿಕೊಂಡ ಆಳಿದ ಧೀರ ಆತ. ಅಸಂಖ್ಯ ಯಜ್ಞಯಾಗಾದಿಗಳಿಂದ ಯಜ್ಞನಾರಾಯಣನನ್ನೇ ಮೆಚ್ಚಿಸಿದವ. ಅವನಿಗೆ ಪುತ್ರರು ಮೂವರಾದರೆ, ಪುತ್ರಿಯರು ಐವತ್ತುಜನ. ಒಬ್ಬಳಿಗಿಂತ ಒಬ್ಬಳು ಸ್ಫುರದ್ರೂಪಿ, ಎಲ್ಲರೂ ಚೆಲುವಿನ ಚಿತ್ತಾರ. ಸೌಂದರ್ಯದ ಸಾಕಾರ ಪುತ್ಥಳಿಗಳೇ, ಮಾಂಧಾತ ರಾಜ್ಯವಾಳುವಾಗ ಸೌಭರಿ ಎಂಬೊಬ್ಬಮುನಿ ತಪೋನಿರತನಾಗಿದ್ದ. ಜನ ಜಂಗುಳಿಯುಕ್ತ ಅವನ ರಾಜ್ಯದಲ್ಲಿ ಎಲ್ಲೇಹೋಗಿ ಕುಳಿತರೂ ತಪಸ್ಸಿಗೆ ಭಂಗಬರಬಹುದು, ಚಿತ್ತಚಂಚಲವಾದೀತು ಎಂದೆಣಿಸಿ ಯಮುನೆಯ ಮಧ್ಯದಲ್ಲಿನ ಮಡುವೊಂದರಲ್ಲಿ ಮೂಗು ಹಿಡಿದುಕೊಂಡು ಮುಳುಗಿ ತಪಗೈಯತೊಡಗಿದ. ಅದೆಷ್ಟೋ ಕಾಲ ಆತ ಅದೇ ಸ್ಥಿತಿಯಲ್ಲಿಯೇ ಇದ್ದ.

ಒಮ್ಮೆ ಆ ಅಪಾರ ಜಲ ರಾಶಿಯಲ್ಲಿ ಎಲ್ಲೋ ವಾಸವಾಗಿದ್ದ ಮತ್ಸ್ಯ ರಾಜವೊಂದು ತನ್ನ ಮುದ್ದಿನ ಮಕ್ಕಳು ಹಾಗೂ ಮೋಹದ ಮಡದಿಯರೊಂದಿಗೆ, ಮುನಿ ಕುಳಿತ ಮಡುವಿನತ್ತಲೇ ಈಜಿ ಬಂದಿತು. ಆ ಮೀನರಾಜ ನೀರಲ್ಲೇ ತನ್ನ ಅರಳು ಗಣ್ಣಿನ ತರುಣ ತರಳೆಯರ ಕೂಡ ಜಲಕ್ರೀಡೆಯೊಂದಿಗೆ ಕಾಮಕೇಳಿಯನ್ನೂ ನಡೆಸಿದ. ಅದನ್ನು ಕಂಡ ಮುನಿಯ ಚಿತ್ತಚಂಚಲವಾಯಿತು. ಸುಪ್ತಕಾಮ ಭುಗಿಲೆದ್ದಿತು. ಬಯಕೆ ಬೇರೂರಿತು.'' ಛೀ, ಕೀಳು ಜಾತಿಯ ಜಲಚರಗಳಿಗೂ ಲಭ್ಯವಾದ ಈ ಲೈಂಗಿಕ ಸುಖವನ್ನು ಮಾನವನಾದ ನಾನು ಅನುಭವಿಸದಿದ್ದರೆ, ಜನಿಸಿಬಂದ ಫಲವೇನು? ಸಾಕಿನ್ನು ಜಲಾವಾಸ, ಸನ್ಯಾಸದ ಸಹವಾಸ''

• ಎಸ್.ಜಿ. ಕಾರಜೋಳ

ಎಂದುಕೊಂಡು ನೀರಿನಿಂದೆದ್ದು ಮೇಲೆ ಬಂದು ಯೋಗ್ಯ ಕನ್ಯೆಗಾಗಿ ಕುರಿತು ಚಿಂತಿಸಿದ. ಮಾಂಧಾತ ರಾಜನಿಗೆ ಒಬ್ಬಳಲ್ಲದಂತೆ ಐವತ್ತು ಜನ ಪುತ್ರಿಯರು, ಅವರಲ್ಲಿ ಒಬ್ಬಳನ್ನಾದರೂ ಯಾಚಿಸಿ ಪಡೆವ ಯೋಚನೆ ಮೂಡಿತು.

ನೇರವಾಗಿ ರಾಜನ ಮನೆಗೇ ನಡೆದು ಬಂದು, ''ಮಹಾರಾಜ ನನಗೀಗ ಅದೇಕೋ ಚತುರ್ಭುಜನಾಗುವ ಬಯಕೆಯಾಗಿದೆ. ನಿನ್ನ ಅರ್ಧಶತಕ ಸಂಖ್ಯೆಯ ಕನ್ಯೆಯರಲ್ಲಿ ಯಾರೊಬ್ಬರನ್ನಾದರೂ ನನಗೆ ಕೊಟ್ಟು ಕನ್ಯಾದಾನ ಮಾಡಿ ಕೃತಾರ್ಥನಾಗು'' ಎಂದು ಕನ್ಯಾಭಿಕ್ಷೆ ಕೇಳಿದ. ರಾಜನಿಗೀಗ ಧರ್ಮಸಂಕಟ. ಅತ್ತದರಿ, ಇತ್ತ ಪುಲಿ,



ಎಂಬಂತಾಯಿತು. ಮುಂದೆ ನಿಂತ ಮುನಿಯೋ! ಮುದುಕರಲ್ಲೇ ಮುದುಕ. ಶತವೃದ್ಧ ವಯಸ್ಸು. ನರೆತಕೇಶ. ಸುಕ್ಕುಗಟ್ಟಿದ ಚರ್ಮ, ಗುಳಿಬಿದ್ದಕಪೋಲ. ಬಾಗಿದ ಬೆನ್ನು. ಚಿವುಟಿದರೂ ಹನಿ ರಕ್ತವಿಲ್ಲ. ಪುರುಷರೇ ಕಂಡು ಅಸಹ್ಯ ಪಡಬೇಕಾದ ಸ್ಥಿತಿ. ಅಪ್ಸರೆಯರನ್ನೂ ನಾಚಿಸುವ ನನ್ನ ಪುತ್ರಿಯರು ಈ ಮುದಿಗೂಬೆಯನ್ನು ಹೇಗೆ ವರಿಸಿಯಾರು? ಧಾರೆಎರೆದು ಕೊಡದಿದ್ದರೆ ಮುನಿ ಕೋಪದಿಂದ ಶಾಪ ಕೊಡುವುದು ನಿಶ್ಚಿತ. ರಾಜ ಚಿಂತಾಕ್ರಾಂತನಾದ. ಕೊನೆಗೊಂದು ಉಪಾಯ ಹೊಳೆಯಿತು.

''ಮುನಿವರ್ಯರೇ, ನಾವು ಕ್ಷತ್ರಿಯರು. ಕ್ಷತ್ರಿಯ ಕನ್ಯೆ ಸ್ವಯಂವರ ರೀತಿಯಲ್ಲೇ ವರಿಸಿ ವಿವಾಹವಾಗುವ ವಿಧಿ ತಮಗೆ ವಿದಿತ. ನಾನೀಗ ತಮ್ಮೆದುರು ನನ್ನ ಎಲ್ಲ ಕುವರಿಯರನ್ನು ಸಾಲಾಗಿ ನಿಲ್ಲಿಸುವೆ, ನಿಮ್ಮನ್ನು ಬಯಸಿ ಮಾಲೆ ಹಾಕಿದವಳು ನಿಮ್ಮಮಡದಿ.'' ಎಂದು ಹೇಳಿದ. ತನ್ನ ಮುದಿರೂಪ ಕಂಡು ಎಂಥ ಕುರೂಪಿ ಕನ್ಯೆಯೂ ಕಣ್ಣೆತ್ತಿ ನೋಡಳು. ಕೈಹಿಡಿಯುವುದಂತೂ ಕನಸಿನಮಾತು. ರಾಜನಿಗೆ ಶಾಪವೂ ತಪ್ಪಬೇಕು. ಕನ್ಯಾದಾನವೂ ಕೈಗೂಡಿರಬಾರದು. ಇದೇ ರಾಜನ ಚತುರಮತಿಯ ಹಂಚಿಕೆ, ಎಂದು ಅರಿತಮುನಿ ಕೂಡಲೇ ಸೌಭರಿ ತನ್ನ ತಪಃ ಪ್ರಭಾವದಿಂದ ಹದಿಹರೆಯದ ಚಲುವಿನ ಚಂದಿರನಾದ. ದೇವಕುಮಾರನ ರೂಪುದಳೆದು, ರಾಜಪುತ್ರನ ತೇಜ ಪಡೆದ ಆ ತಾಪಸಿಯನ್ನುಕಂಡು ಎಲ್ಲ ಕನ್ಯೆಯರೂ ತಮ್ಮ ಕೈಲಿದ್ದ ಮಾಲೆಯನ್ನು ಮುನಿಯ ಕೊರಳಿಗೆ ಹಾಕಲು ನಾಮುಂದು, ತಾಮುಂದು ಎಂದು ಮುನಿಯ ಮೇಲೆಯೇ ಮುಗಿಬಿದ್ದರು. ಮಾಂಧಾತ ರಾಜ ಮುದದಿಂದ ತನ್ನೆಲ್ಲ ಕನ್ಯೆಯರನ್ನೂ ಮುನಿಗೇ

ಧಾರೆಯೆರೆದುಕೊಟ್ಟು, ಮನದ ದುಗುಡ ಕಳೆದುಕೊಂಡ.

ಮದುವೆಯಾಗಿ ಎಲ್ಲ ಮಡದಿಯರನ್ನು ತನ್ನ ಆಶ್ರಮಕ್ಕೆ ಕರೆತಂದ ಮುನಿ ಅವರಿಗೆಲ್ಲ ತನ್ನ ತಪೋಬಲದಿಂದ ರಾಜಪುತ್ರಿಯರಿಗೆ ಯೋಗ್ಯವಾದ ಭೋಗಭಾಗ್ಯ ಒದಗಿಸಿಕೊಟ್ಟ ತಾನೂ ತನ್ನ ಭೋಗಲಾಲಸೆಯನ್ನು ತಣಿಸಿಕೊಳ್ಳಲು ಬಯಸಿದ. ಅದರ ಪರಿಣಾಮ ಅಸಂಖ್ಯಾತ ಸಂತಾನ ಪ್ರಾಪ್ತಿ. ತನ್ನ ಕಾಮತೃಷೆ ಅನುಭವಿಸಿದಷ್ಟೂ ಅತಿಯಾಗುವುದನ್ನು ಕಂಡು, ಅಗ್ನಿಗೆ ಆಜ್ಯಹೊಯ್ದಂತೆ, ಕುಂದಿ ನಂದದೆ ಹೆಚ್ಚುವ ಈ ಭೋಗ ಸುಖಕ್ಕೆ ಸಂಯಮವೊಂದೇ ಸರಿಯಾದ ಕಡಿವಾಣ ಎಂದರಿತು, ಸರ್ವಸಂಗ ಪರಿತ್ಯಾಗಮಾಡಿ ತನ್ನ ಹುಚ್ಚುತನಕ್ಕೆ ತಾನೇನಕ್ಕ. ಮನಃ ಚಾಂಚಲ್ಯಕ್ಕೆ ಅಂಜಿ ಮಡುವ ಹೊಕ್ಕ ನಾನು ಮಾಡಿದ್ದೇನು? ಘನಘೋರ ಸಂಸಾರದಲ್ಲಿ ಸಿಲುಕುವಂತಾಯಿತಲ್ಲ! ಎಂದೆಣಿಸಿ, ವನಾಂತರಕ್ಕೆ ಹೋಗಿ ಮನವನ್ನು ಪರಮಾತ್ಮನಲ್ಲೇ ಕೇಂದ್ರೀಕರಿಸಿ, ಯೋಗಬಲದಿಂದ ದೇಹತ್ಯಾಗ ಮಾಡಿ, ಮುಕ್ತಿ ಪಡೆದ. ಮುನಿಯ ಮಡದಿಯರೂ ಪತಿತುಳಿದ ಪಥದಲ್ಲೇ ಸಾಗಿ ಪರಮಾತ್ಮನ ಪಾದಾರವಿಂದದ ಸಾನಿಧ್ಯ ಪಡೆದರು.

---

## ಬೆಳ್ಳಿ ತೆರೆಯ ಬದುಕು

# ಗಾಯನ ಗಾರುಡಿಗ ಕಿಶೋರ್ ಕುಮಾರ್



ಭಾರತೀಯ ಚಲನಚಿತ್ರ ರಂಗದ ಐವರು ಮಹಾನ್ ಹಿನ್ನೆಲೆ ಗಾಯಕರೆಂದು ಲತಾ ಮಂಗೇಶ್ಕರ್, ಮಹಮ್ಮದ್ ರಫಿ, ಮುಖೇಶ್, ಕಿಶೋರ್ ಕುಮಾರ್ ಮತ್ತು ಎಸ್.ಪಿ. ಬಾಲಸುಬ್ರಹ್ಮಣ್ಯಂರನ್ನು ಪರಿಗಣಿಸಲಾಗುತ್ತದೆ. ಈ ಐವರು ಸ್ವರ ಸಾಮ್ರಾಟರಲ್ಲಿ ಕಿಶೋರ್ ಕುಮಾರ್‌ನಷ್ಟು ವರ್ಣರಂಜಿತ ವ್ಯಕ್ತಿತ್ವವನ್ನು ಮತ್ಯಾರೂ ಹೊಂದಿಲ್ಲ.

ತನ್ನೆಲ್ಲಾ ವೈಯಕ್ತಿಕ ವಿಲಕ್ಷಣತೆ, ವಿಕ್ಷಿಪ್ತತೆಗಳನ್ನು ಮೀರಿ ಕಿಶೋರ್ ಕುಮಾರ್‌ನೊಳಗಿನ ಕಲಾವಿದ ಅಪೂರ್ವವೆನ್ನುವಂತೆ ಬೆಳೆದ. ಎಲ್ಲರಿಗೂ ಕಿಶೋರ್‌ಕುಮಾರ್ ಹಿನ್ನೆಲೆ ಗಾಯಕನೆಂದೇ ಚಿರಪರಿಚಿತ. ಆತ ಎಷ್ಟು ಜನಪ್ರಿಯತೆ ಮತ್ತು ಕೆಲಸದ ಒತ್ತಡ ಪಡೆದಿದ್ದನೆಂದರೆ ಅವನಿಗೇ ಹಿನ್ನೆಲೆ ಗಾಯಕನಾಗಿ ಮಹಮದ್ ರಫಿ 'ಶರಾರತ್' ಚಿತ್ರಕ್ಕೆ 'ಅಜಬ್ ಹೈ ದಾಸ್ತಾನ್' ಎಂಬ ಗೀತೆ ಹಾಡುವಂತಹ ಪರಿಸ್ಥಿತಿ ಬಂತು.

ಕಿಶೋಲ್ ಕುಮಾರ್ ಮಧ್ಯಪ್ರದೇಶದ ಖಾಂಡ್ವಾದಲ್ಲಿ ಜನಿಸಿದ. ತಂದೆ ಕುಂಜಲಾಲ್ ಗಂಗೂಲಿ. ವೃತ್ತಿಯಿಂದ ವಕೀಲ. ತಾಯಿ ಧನಂಜಯಾ ಬ್ಯಾನರ್ಜಿ. ಕಿಶೋರ್‌ಕುಮಾರ್‌ನ ಒಂದು ನಮೂನೆಯ ಮೃದು, ಮಾದಕ ಸುಶ್ರಾವ್ಯ ಧ್ವನಿಯ ಹಿಂದೆ ಕಥೆಯೊಂದಿದೆ. ಕಿಶೋರ್ ಐದು ವರ್ಷದ ಬಾಲಕನಾಗಿದ್ದಾಗ ತುಂಟತನದಿಂದ ಅಡಿಗೆ ಮನೆಯಲ್ಲಿ ಕೈಗೆ ಆಳವಾದ ಗಾಯ ಮಾಡಿಕೊಂಡ. ಮೊದಲು ಸಾಮಾನ್ಯವಾಗಿದ್ದ ಬಾಲಕ ಕಿಶೋರ್‌ನ ಧ್ವನಿ ಗಾಯದ ನೋವಿನಿಂದಾಗಿ ಸತತವಾಗಿ ಒಂದು ವಾರ ಅರಚಿ ಅರಚಿ ಅತ್ತಿದ್ದರಿಂದ ವಿಶಿಷ್ಟವಾಗಿ ಬದಲಾಯಿಸಿತು. ಇದೇನೆ ಇರಲಿ, ಸಂಗೀತದ ಹಿನ್ನೆಲೆಯಿರದ


(೮೨ನೇ ಪುಟಕ್ಕೆ)

ಕುಟುಂಬದಿಂದ ಬಂದ ಕಿಶೋರ್ ಸೈಗಲ್‌ನ ಅಭಿಮಾನಿಯಾಗಿ ಬೆಳೆದ. ಗಾಯಕನಾಗಬೇಕೆಂಬ ಖಯಾಲಿಯಿಂದ ಹಧಿನೇಳನೇ ವಯಸ್ಸಿಗೆ ಖಾಂಡ್ವಾದಿಂದ ಮುಂಬಯಿಗೆ ಬಂದಿಳಿದ ಕ್ಷಣದಿಂದಲೇ ಕಿಶೋರ್ ಕುಮಾರ್‌ನೊಳಗಿನ ವಿಲಕ್ಷಣ ಸ್ವಭಾವ ಬೆಳಕಿಗೆ ಬರತೊಡಗಿತು. ಅಲ್ಲಿಯವರೆಗೆ 'ಆಭಾಸ್ ಕುಮಾರ್' ಎಂದು ನಾಮಕರಣ ಹೊಂದಿದ್ದು 'ಆಭಾಸ್' 'ಅಬ್ಬಾಸ್' ಆಗಿ ಉಚ್ಚಾರಣೆಯಾಗುವ ಆಭಾಸವನ್ನು ತಪ್ಪಿಸಲು 'ಕಿಶೋರ್ ಕುಮಾರ್' ಎಂದು ಹೊಸ ನಾಮಕರಣವಾಯಿತು. ಕಿಶೋರ್‌ಗೆ ಸಂಗೀತ ನಿರ್ದೇಶಕ ಖೇಮ್‌ಚಂದ್ ಪ್ರಕಾಶ್ ಮೊಟ್ಟಮೊದಲು ಪಾರ್ಶ್ವಗಾಯನದ ಅವಕಾಶ ನೀಡಿದರು. 1948 ರಲ್ಲಿ ಬಿಡುಗಡೆಯಾದ ದೇವಾನಂದ್‌ನ 'ಜಿದ್ದಿ' ಚಿತ್ರದ 'ಮರನೆ ಕಿ ದುವಾಯೆ ಕ್ಯೂಂ ಮಾಂಗೊ, ಜಿನೇಕಿ ತಮನ್ನಾ ಕೌನ್ ಕರೆ?' ಕಿಶೋರ್‌ನ ಮೊದಲ ಹಾಡು. ನಂತರ 'ಬಹಾರ್' ಚಿತ್ರಕ್ಕೆ 'ಕಸೂರ್ ಆಪಕಾ' ಹಾಡು ಹಾಡಿದನು. ಕಿಶೋರ್‌ಕುಮಾರ್ ತಾನು ಹಾಡಿದ ಮೊದಲ ಚಿತ್ರದ ನಾಯಕ ದೇವಾನಂದನ ಹೊರತು ಬೇರ್‍ಯಾವ ನಟನ ಚಿತ್ರಕ್ಕೂ ಹಾಡುವುದಿಲ್ಲವೆಂದು ಪಟ್ಟು ಹಿಡಿದಾಗ ಅನೇಕರು ಅಚ್ಚರಿ ಪಟ್ಟಿದ್ದರು. ಕಿಶೋರ್‌ನನ್ನು ಹರಸಾಹಸದಿಂದ ಬೇರೆ ನಾಯಕರಿಗೂ ಹಾಡಿಸಲು ಒಪ್ಪಿಸಲಾಯಿತು.

**ಆ ಅಪ್ರತಿಮ ಗಾಯಕನ ಗಾಯನದ ಮೋಡಿಯೇ ಹೃದಯವನ್ನು ಅರಳಿಸುವಂಥದು....**

ಕಿಶೋರ್ ಅಷ್ಟರಲ್ಲೇ ಹಿಂದಿ ಚಿತ್ರಗಳಲ್ಲಿ ಸಣ್ಣ ಪುಟ್ಟ ಪಾತ್ರಗಳಲ್ಲಿ ಕಾಣಿಸಿಕೊಳ್ಳಲು ತೊಡಗಿದ್ದನು. 'ಆಂದೋಲನ' ಚಿತ್ರದಿಂದ ಪೂರ್ಣ ಪ್ರಮಾಣದ ನಾಯಕನಾಗಿ ಹೊಮ್ಮಿದ ಕಿಶೋರ್ ಆಮೇಲೆ ಹಿಂತಿರುಗಿ ನೋಡಲಿಲ್ಲ. 'ನಯಿ ದಿಲ್ಲಿ', 'ಆಶಾ' ಚಿತ್ರಗಳಲ್ಲಿ ಅಭಿನಯದ ಜೊತೆಗೆ ಹಿನ್ನೆಲೆ ಗಾಯನವನ್ನೂ ನಿರ್ವಹಿಸಿದ. 'ಆಶಾ' ಚಿತ್ರದಲ್ಲಿನ 'ಇನಾ, ಮಿನಾ ಡಿಕಾ' ಹಾಡು ಅತ್ಯಂತ ಜನಪ್ರಿಯವಾಯಿತು. ಕಿಶೋರ್‌ಕುಮಾರ್ ಪ್ರೇಮ, ಹಾಸ್ಯ, ನಾಟ್ಯಗಳ ವಿಶಿಷ್ಟ ಸಂಗಮದ ತನ್ನ ಅಭಿನಯದಿಂದ ಪ್ರೇಕ್ಷಕರ ಮನಸ್ಸನ್ನು ಗೆದ್ದನು. 'ಲಡ್ಕಿ' ಚಿತ್ರದಲ್ಲಿ ವೈಜಯಂತಿಮಾಲಾಳೊಂದಿಗೆ ಮೈಚಳಿ ಬಿಟ್ಟು ಅಭಿನಯಿಸಿದ ಕಿಶೋರ್ ತನ್ನ ಲವಲವಿಕೆಯ ಭರ್ಜರಿ ಅಭಿನಯದಿಂದ ಚಿತ್ರದ ಯಶಸ್ಸಿಗೆ ಕಾರಣನಾದ. ಈ ಚಿತ್ರದ ಅಭಿನಯವನ್ನು ಪ್ರೇಕ್ಷಕರು ತುಂಬಾ ಖುಷಿಯಿಂದ ಸ್ವೀಕರಿಸಿದರು. ಇದೇ ಚಿತ್ರದಲ್ಲಿನ 'ಕಿಸ್ಮತ್ ಕಿ ಬಾತ್ ಹೈ, ಮಾಲಿಕ್ ಕೆ ಹಾಥ್ ಹೈ ಶಾದಿ.. ಶಾದಿ" ಹಾಡು ಚಿತ್ರ ಪ್ರೇಮಿಗಳ ನಾಲಿಗೆ ಮೇಲೆ ನಲಿದಾಡಿತು. ಕೇವಲ ಹಾಸ್ಯ ನಟನೆಯಿಂದ ಅಪಾರ ಯಶಸ್ಸು ಪಡೆದ ಮೊದಲ ನಾಯಕನೆಂದು ಕಿಶೋರ್ ಕುಮಾರ್‌ನನ್ನು ಉಲ್ಲೇಖಿಸಲಾಗುತ್ತದೆ. ಇಂದಿನ ಹಿಂದಿ ಹಾಸ್ಯ ನಾಯಕ, ನಟ ಗೋವಿಂದನ ಮೇಲೆ ಕಿಶೋರ್ ಕುಮಾರ್ ಮತ್ತು ಅಮಿತಾಬ್ ಬಚ್ಚನ್‌ನ ಪ್ರಭಾವ ಇರುವುದನ್ನು ಕಾಣಬಹುದು. 'ಚಲತಿ ಕಾ ನಾಮ್ 'ಗಾಡಿ', 'ಭಾಯಿ, ಭಾಯಿ' 'ಆಶಾ', 'ನಯಿ ದಿಲ್ಲಿ', ಲಡ್ಕಿ, ಶರಾರತ್, ದಿಲ್ಲಿ ಕಾ ಠಕ್', 'ಬೇವಕೂಫ್', 'ಧೋಬಿ ಡಾಕ್ಟರ್', 'ಮನಮೌಜಿ', 'ಚಾಚಾ ಜಿಂದಾಬಾದ್', 'ಪ್ಯಾರ್ ಕಿಯಾ ಜಾ', 'ಮಿಸ್ಟರ್ ಎಕ್ಸ್ ಇನ್ ಬಾಂಬೆ', 'ಹಮ್ ಸಬ್ ಉಸ್ತಾದ್' ಮುಂತಾದವು ಕಿಶೋರ್‌ಕುಮಾರ್‌ನ ಯಶಸ್ವಿ ಚಲನಚಿತ್ರಗಳು. ನರ್ಗೀಸ್‌ಳಂತಹ ಸೂಕ್ಷ್ಮ ಸಂವೇದನಾಶೀಲ ಅಭಿನೇತ್ರಿ ತನ್ನ ಮೆಚ್ಚಿನ ಕಲಾವಿದನೆಂದು ಕಿಶೋರ್‌ಕುಮಾರ್‌ನನ್ನು ಹೆಸರಿಸಿದ್ದಳೆಂದರೆ ಕಿಶೋರ್‌ಕುಮಾರ್‌ನ ಅಭಿನಯ ಯಾವ ಮಟ್ಟದ್ದಾಗಿತ್ತೆಂದು ತಿಳಿಯುತ್ತದೆ. ಇಂತಹ ಯಶಸ್ವಿ ಚಿತ್ರಗಳ

ಭರಾಟೆಯಲ್ಲೇ ಕಿಶೋರ್‌ಕುಮಾರ್‌ಗೆ ಸ್ವತಃ ತನ್ನ ಚಿತ್ರಕ್ಕೇ ಹಾಡಲು ಸಮಯ ಸಿಗದಂತಹ ವಿಚಿತ್ರ ಪರಿಸ್ಥಿತಿ ನಿರ್ಮಾಣವಾಗಿತ್ತು. ಈ ಅವಧಿಯಲ್ಲೇ ಮಹಮದ್ ರಫಿ ಕಿಶೋರ್ ಕುಮಾರ್‌ನ 'ಶರಾರತ್' ಚಿತ್ರಕ್ಕೆ ತನ್ನ ಕಂಠ ನೀಡಿದ್ದು.

## ಏರು ಪೇರಿನ ಜೀವನ

ಕಿಶೋರ್‌ಕುಮಾರ್ ಏಕಪತ್ನೀ ವ್ರತಸ್ಥನಾಗಿರಲಿಲ್ಲ. ಅವನ ವೈವಾಹಿಕ ಜೀವನ ಏರುಪೇರಿನಿಂದ ಕೂಡಿತ್ತು. ತನ್ನ ವಿಚಿತ್ರ ನಡವಳಿಕೆಯಿಂದ ಕಿಶೋರ್‌ಕುಮಾರ್ ಸದಾ ಮಾಧ್ಯಮಗಳ ಬಾಯಿಗೆ ತುತ್ತಾಗುತ್ತಿದ್ದ. ಕಿಶೋರ್ ಕುಮಾರ್‌ನ ಎಲ್ಲಾ ಆಟಗಳನ್ನು ಚಿತ್ರರಂಗ ಅವಡುಗಚ್ಚಿ ಸಹಿಸಿಕೊಂಡಿತು. ಕಾರಣ ಕಿಶೋರ್‌ಕುಮಾರ್ ಒಬ್ಬ ಜೀನಿಯಸ್. ಬರೀ ಜೀನಿಯಸ್ ಅಲ್ಲ ಮ್ಯಾಡ್ ಜೀನಿಯಸ್! ಕಿಶೋರ್ ಕುಮಾರ್‌ನ ಅನೇಕ ಹುಚ್ಚಾಟಗಳು ಆತನ ವಿಚಿತ್ರ ಗುಣದ ಇನ್ನೊಂದು ಮುಖವನ್ನು ಅನಾವರಣಗೊಳಿಸುತ್ತವೆ. 1957 ರಲ್ಲಿ ಎ.ವಿ.ಎಂ. ಚಿತ್ರಸಂಸ್ಥೆಯ 'ಮಿಸ್ ಮೇರಿ' ಚಿತ್ರದಲ್ಲಿ ನಟಿಸುತ್ತಿದ್ದ ಕಿಶೋರ್ ಕುಮಾರ್ ಶೂಟಿಂಗ್‌ಗಾಗಿ ಚೆನ್ನೈನ ಹೋಟೇಲೊಂದರಲ್ಲಿ ಉಳಿದುಕೊಂಡಿದ್ದ. ಒಂದು ವಾರ ಕಾಲ ಖಾಲಿಯಾಗಿಯೆ ಕಳೆದ ಕಿಶೋರ್‌ಕುಮಾರ್‌ನ ಪಿತ್ಥ ನೆತ್ತಿಗೇರಿತು. ಚಿತ್ರ ನಿರ್ದೇಶಕರ ಕರೆ ಬಂದಾಗ ತಲೆ ಬೋಳಿಸಿಕೊಂಡು ನೀಟಾಗಿ ಅವರ ಎದುರು ಹಾಜರಾದ! ಮತ್ತೊಮ್ಮೆ ಚಿತ್ರ ನಿರ್ಮಾಪಕನೊಬ್ಬ ಕಿಶೋರ್‌ಕುಮಾರ್‌ನ ಕಾಲ್‌ಶೀಟ್ ಪಡೆಯಲು ಹೋದಾಗ ಕಿಶೋರ್‌ಕುಮಾರ್ ಒಂದು ಷರತ್ತು ವಿಧಿಸಿದ. ಅದನ್ನು ಕೇಳಿದ ನಿರ್ದೇಶಕ ಕಕ್ಕಾಬಿಕ್ಕಿಯಾದ. ಏಕೆಂದರೆ ಕಿಶೋರ್‌ಕುಮಾರ್‌ನ ಷರತ್ತು ತುಂಬಾ ಸರಳವಾಗಿತ್ತು. ಅದೆಂದರೆ ನಿರ್ಮಾಪಕ ಕಿಶೋರ್‌ಕುಮಾರ್‌ನ ಎದುರಿನ ಡೈನಿಂಗ್ ಟೇಬಲ್ ಮೇಲೆ ಅರ್ಧಘಂಟೆ ನಿಂತರೆ ಸಾಕು ಕಿಶೋರ್ ಕುಮಾರ್‌ನ ಸಹಿ ಕಾಲ್‌ಶೀಟ್ ಮೇಲೆ ಬೀಳುತ್ತಿತ್ತು. ಮತ್ತೊಂದು ಪ್ರಸಂಗದಲ್ಲಿ ಕಿಶೋರ್‌ಕುಮಾರ್‌ಗೆ ತಾನು ಅಭಿನಯಿಸುತ್ತಿದ್ದ ಚಿತ್ರದಿಂದ ಇನ್ನೂ ಅರ್ಧ ಹಣ ಬಾಕಿ ಬರಬೇಕಾಗಿರುವುದು ತಿಳಿಯಿತು. ಚಿತ್ರೀಕರಣ ಸಮಯದಲ್ಲಿ ಮುಖಕ್ಕೆ ಕೇವಲ ಅರ್ಧ ಮೇಕಪ್ ಹಾಕಿ ಪಟ್ಟಾಗಿ ಕಿಶೋರ್‌ಕುಮಾರ್ ಚಿತ್ರೀಕರಣಕ್ಕೆ ಬಂದ. ನಿರ್ಮಾಪಕ ಗಾಬರಿಯಾಗಿ ಹೀಗೇಕೆ ಎಂದು ಕೇಳಿದಾಗ 'ಅರ್ಧ ಹಣಕ್ಕೆ ಅರ್ಧ ಮೇಕಪ್ ಹಾಕುವುದೇ ನನ್ನ ಜಾಯಮಾನ' ಎಂದು ಕಿಶೋರ್‌ಕುಮಾರ್ ಉತ್ತರಿಸಿದ. ಮರುಕ್ಷಣವೇ ಉಳಿದಿದ್ದ ಹಣ ಆತನ ಕೈಯಲ್ಲಿತ್ತು. ಹೇಗಿದೆ ಕಿಶೋರ್‌ಕುಮಾರ್ ಶೈಲಿ?!

1958 ರ ಸುಮಾರಿಗೆ ಕಿಶೋರ್‌ಕುಮಾರ್ ವಿವಾಹವಾದ. ಇದೇ ವರ್ಷ ಬಿಡುಗಡೆಗೊಂಡ 'ಚಲತಿ ಕಾ ನಾಮ್ ಗಾಡಿ' ಯಿಂದ ಕಿಶೋರ್‌ಕುಮಾರ್‌ನ ಜೀವನ ಬಂಡಿಯಲ್ಲಿ ಮತ್ತೊಬ್ಬ ಸುರ ಸುಂದರಿಯ ಆಗಮನವಾಯಿತು. ಅವಳೇ! ಇಂದಿಗೂ ಹದಿ ಹರೆಯದ ಹೃದಯದ ಬಡಿತವನ್ನು ಏರುಪೇರಾಗಿಸುವ ಮಧುಬಾಲಾ! ಮಧುಬಾಲಾಳನ್ನು ಮದುವೆಯಾಗುವುದಕ್ಕೋಸ್ಕರ ಕಿಶೋರ್‌ಕುಮಾರ್ ಮತಾಂತರ ಹೊಂದಿ 'ಕರೀಂ ಅಬ್ದುಲ್' ಆದ. ಏಕೆಂದರೆ ಮಧುಬಾಲಾ ಮುಸಲ್ಮಾನಳಾಗಿದ್ದಳು. ಮಧುಬಾಲಾಳಿಗೋಸ್ಕರ 'ಝುಮರು' ಚಿತ್ರ ನಿರ್ಮಿಸಿ, ನಿರ್ದೇಶಿಸಿ, ಗೀತ ರಚಿಸಿ, ಸಂಗೀತ ನೀಡಿ ಹಿನ್ನಲೆಗಾಯನದೊಂದಿಗೆ ಮಧುಬಾಲಾಳೊಂದಿಗೆ ಅಭಿನಯಿಸಿದ ಕಿಶೋರ್‌ಕುಮಾರ್ ಇಲ್ಲಿ ಗೆಲ್ಲಲಿಲ್ಲ. ಈ ಚಿತ್ರದಲ್ಲಿ ಒಬ್ಬನೇ ಕಿಶೋರ್‌ಕುಮಾರ್ ಎಲ್ಲವೂ ಆಗಿದ್ದ. 'ಝುಮರು' ಚಿತ್ರ ದಯನೀಯವಾಗಿ ಸೋತಿತು. ಮಧುಬಾಲಾಳೊಂದಿಗೆ ಕಿಶೋರ್‌ಕುಮಾರ್‌ನ ವೈವಾಹಿಕ ಜೀವನ ಸುಮಧುರವಾಗಿರಲಿಲ್ಲ. ಕೆಮ್ಮಿನೊಂದಿಗೆ ರಕ್ತ ಕಾರುತ್ತಿದ್ದ ದುರ್ಬಲ ಹೃದಯ ಹೊಂದಿದ್ದ ಮಧುಬಾಲಾಳನ್ನು




ಕಿಶೋರ್‌ಕುಮಾರ್ ಚಿಕಿತ್ಸೆಗಾಗಿ ಲಂಡನ್ನಿಗೆ ಕರೆದೊಯ್ದರೂ ಆಕೆ ಬದುಕಲಿಲ್ಲ. 1964 ಫೆಬ್ರುವರಿ 27 ರಂದು ಮಧುಬಾಲಾ ಇಹಲೋಕ ತ್ಯಜಿಸಿದಳು.

'ಝುಮರು' ನಂತರ ಕಿಶೋರ್‌ಕುಮಾರ್ ಕೈಗೆತ್ತಿಗೊಂಡ ಎರಡನೇ ಚಿತ್ರ 'ದೂರ್ ಗಗನ್ ಕಿ ಛಾಂವ್'. ಮೂಕ ಬಾಲಕ ಆತನ ತಂದೆಯೊಂದಿಗೆ ಹೊಂದಿರುವ ಸಂಬಂಧದಂತಹ ಸೂಕ್ಷ್ಮ ವಿಷಯವನ್ನು ಹೊಂದಿತ್ತು. ಕಲಾತ್ಮಕ ಚಿತ್ರವನ್ನೂ ತಾನು ನಿರ್ಮಿಸಬಲ್ಲೆ ಎಂದು ಕಿಶೋರ್ ಕುಮಾರ್ ತೋರಿಸಿದ. ಅರವತ್ತರ ದಶಕದಲ್ಲಿ ಕಿಶೋರ್‌ಕುಮಾರ್ 'ಬಿ' ಶ್ರೇಣಿಯ ಚಿತ್ರದಲ್ಲೂ ಅಭಿನಯಿಸಿದ. ಇಲ್ಲಿಯವರೆಗೆ ಗಾಯನವನ್ನು ಗಂಭೀರವಾಗಿ ಪರಿಗಣಿಸದ ಕಿಶೋರ್‌ಕುಮಾರ್ ಈ ದಶಕದಲ್ಲಿ ಅದಕ್ಕೂ ಮಹತ್ವ ನೀಡಿದ. ಈ ಕಾಲದಲ್ಲಿ ತೆರೆಕಂಡ ದೇವಾನಂದನ 'ಗೈಡ್'

ಹಾಗೂ ಜ್ಯೂಯೆಲ್ ಥೀಫ್' ಚಿತ್ರದ 'ಗಾತಾ ರಹೆ ಮೇರಾ ದಿಲ್' ಮತ್ತು 'ಯೆ ದಿಲ್ ನ ಹೋತಾ ಬೇಚಾರಾ' ಗೀತೆಗಳು ಸೂಪರ್ ಹಿಟ್ ಆಗಿ ಕಿಶೋರ್‌ಕುಮಾರ್‌ನನ್ನು ಹೊಸದೊಂದು ದಿಗಂತಕ್ಕೆ ಒಯ್ದವು. ಸ್ವತಃ ಸಂಗೀತಕಾರ, ಗಾಯಕನಾಗಿದ್ದ ಕಿಶೋರ್‌ಕುಮಾರ್ ಇನ್ನೂ ಒಂದು ಹೆಜ್ಜೆ ಮುಂದು ಹೋಗಿ 'ದೂರ್ ವಾದಿಯೋಂ ಮೆ ಕಾಹಿ' ಎಂಬ ಹಾಡುಗಳೇ ಇಲ್ಲದ ಚಿತ್ರ ನಿರ್ಮಿಸಿದ. 1961 ನೇ ಇಸ್ವಿ ಕಿಶೋರ್‌ಕುಮಾರ್ ಪಾಲಿಗೆ ಬಂಗಾರದ ವರ್ಷ. ಇದೇ ವರ್ಷ ತೆರೆಗೆ ಬಂದ ರಾಜೇಶ್‌ಖನ್ನಾನ 'ಆರಾಧನಾ' ಚಿತ್ರದ 'ಮೇರೆ ಸಪನೋಂಕಿ ರಾಣಿ ಕಬ್ ಆಯೇಗಿ ತೂ' 'ರೂಪ್ ತೇರಾ ಮಸ್ತಾನಾ 'ಕೋರಾ ಕಾಗಜ್ ಥಾಯೆ ಮನ ಮೇರಾ' ಹಾಡುಗಳು ಕಿಶೋರ್ ಕುಮಾರ್‌ನನ್ನು ಜನಪ್ರಿಯತೆಯ ಉತ್ತುಂಗಕ್ಕೆ ಏರಿಸಿ ಹಿನ್ನೆಲೆ ಗಾಯಕನಾಗಿ ಮತ್ತೊಮ್ಮೆ ಪುನರ್ಜನ್ಮ ನೀಡಿದವು. 1961 ರ ನಂತರ 'ಗಾತಾ ರಹೇ ಮೇರಾ ದಿಲ್' ಎಂದು ಹಾಡುತ್ತ ಹೊರಟ ಕಿಶೋರ್ ಕುಮಾರ್ 1987 ರ ವರೆಗೆ ಹಿಂತಿರುಗಿ ನೋಡಲಿಲ್ಲ. ಹಿಂದಿ ಚಲನಚಿತ್ರರಂಗದ ಹಿನ್ನೆಲೆಗಾಯನದ ಇತಿಹಾಸದಲ್ಲಿ ಈ ಕಾಲಮಾನ 'ಕಿಶೋರ್ ಕುಮಾರ್ ಯುಗ' ಎಂದು ದಾಖಲಾಯಿತು. ಅಪಾರವಾದ ಜನಪ್ರಿಯತೆ ಪಡೆದಿದ್ದ ಮಹಮದ್ ರಫಿಯನ್ನು ನೋಡುನೋಡುತ್ತಲೇ ಹಿಂದೆ ಹಾಕಿದ ಕಿಶೋರ್‌ಕುಮಾರ್ 'ಸ್ವರ ಸಾಮ್ರಾಜ್ಯ'ದ ಅನಭಿಷಿಕ್ತ ಸಾಮ್ರಾಟ್ ಎನಿಸಿಕೊಂಡ.

'ರಫ್ತಾ ರಫ್ತಾ' ದಂತಹ ಹಾಡು ಇರಲಿ ಅಥವಾ 'ಜಿಂದಗಿ ಕೆ ಸಫರ್'ದಂತಹ ಉತ್ಸಾಹಿತ ಹಾಡು ಇರಲಿ ಕಿಶೋರ್ ಕುಮಾರ್ ತನ್ನದೇ ಆದ ಛಾಪು ಒತ್ತುತ್ತಿದ್ದ. ತನ್ನ ವಿಶಿಷ್ಟ ಸ್ವರದೊಂದಿಗೆ ಕಿಶೋರ್‌ಕುಮಾರ್ ಹಾಡತೊಡಗಿದರೆ ಮನಸ್ಸು ಹೃದಯ ನಾದಲೋಕದಲ್ಲಿ ಅನಾಮತ್ತಾಗಿ ವಿಹರಿಸತೊಡಗುತ್ತದೆ. ತಟ್ಟನೆ ಮನಸ್ಸನ್ನು ಸೆಳೆದು ಹಾಡಿನ ಲಹರಿಯೊಳಗೆ ಮುಳುಗಿಸುವಂತಹ ತೀವ್ರತೆಯನ್ನು, ಭಾವಸಾಂದ್ರತೆಯನ್ನು ಕಿಶೋರ್ ಕುಮಾರ್ ತನ್ನ ಕಂಠದಲ್ಲಿ ಹೊಂದಿದ್ದ. ಇಪ್ಪತ್ತೈದು ವರ್ಷಗಳಿಗಿಂತಲೂ ಹೆಚ್ಚು ಕಾಲ ಇಡೀ ಭಾರತದ ರಸಿಕರನ್ನು ಮತ್ತು ಹಿಂದಿ ಚಿತ್ರರಂಗವನ್ನು ಮೋಡಿ ಮಾಡಿ ತನಗೆ ಬೇಕಾದ ಹಾಗೆ ಕಿಶೋರ್ ಕುಮಾರ್ ಕುಣಿಸಿದ. ನೋವಿನ ಗೀತೆಗಳನ್ನು ಕಿಶೋರ್‌ಕುಮಾರ್ ಹಾಡತೊಡಗಿದರೆ, ಮುಖ ತಾನೇ ಗಂಭೀರವಾಗಿ ಮನಸ್ಸು ಅಂತರ್ಮುಖಿಯಾಗಿ ಹಾಡಿನೊಂದಿಗೇ ತಾನೂ ದುಃಖದ ಭಾವ ಅನುಭವಿಸಲು ತೊಡಗುತ್ತದೆ. ನೋವಿನ ಗೀತೆಗಳನ್ನು ಹಾಡುವುದರಲ್ಲಿ ಕಿಶೋರ್‌ಕುಮಾರ್‌ನದು ಅನನ್ಯ, ಅಪೂರ್ವ ಸಾಧನೆ. ಹಾಗೆಯೇ ಆವೇಶಭರಿತ, ಸಂತೋಷದ ಗೀತೆಗಳನ್ನು ಹಾಡುತ್ತ ಕಿಶೋರ್‌ಕುಮಾರ್ ತನ್ನದೇ ವಿಶಿಷ್ಟ ಶೈಲಿ ಬೆಳೆಸಿಕೊಂಡಿದ್ದ. ಕನ್ನಡದಲ್ಲೂ ಕಿಶೋರ್‌ಕುಮಾರ್ 'ಬಂಗಾರದ ಕಳ್ಳ' ಚಿತ್ರದಲ್ಲಿ 'ಜೀವನ ಮೋಜಿನ ಆಟಾ.. ದಿನ ದಿನ ಹೊಸ ಹೊಸ ನೋಟಾ' ಎಂಬ ಉತ್ಸಾಹಪೂರ್ಣ ಹಾಡು ಹಾಡಿದ್ದಾನೆ

ಕಿಶೋರ್ ಕುಮಾರ್ ಜೀವನದಲ್ಲಿ ಎರಡು ಕಾಲಖಂಡಗಳಿವೆ. ಒಂದು 'ಆರಾಧನಾ' ಚಿತ್ರದ ಮುಂಚಿನದ್ದು, ಮತ್ತೊಂದು 'ಆರಾಧನಾ' ನಂತರದ್ದು.

ಧ್ವನಿಯನ್ನು ಮೃದುವಾಗಿಸಿ, ಭಾವನಾತ್ಮಕವಾಗಿ 'ಯೆ ಶ್ಯಾಮ್ ಮಸ್ತಾನಿ, ಮದಹೋಶ್ ಕಿಯೆ ಜಾಯ್' ಎಂದು ಕಿಶೋರ್ ಕುಮಾರ್ ಧ್ವನಿಯನ್ನು ಹರಿಯಬಿಟ್ಟರೆ ಸಾಕು ರಾಜೇಶ್ ಖನ್ನಾನ ಕಂಠದಾಳದಿಂದಲೇ ಹಾಡು ಹೊರ ಬಂದಂತೆ ಭಾಸವಾಗುತ್ತದೆ. 'ತುಮ್ ಸೀದಾ ಮೊಹಬ್ಬತ್ ಮಾರೋಂಕಾ ಹೈ' ಎಂದು ಧ್ವನಿಯನ್ನು ಸ್ವಲ್ಪ ಗಂಭೀರವಾಗಿಸಿ, ಬಿಗುವಾಗಿ ಹಾಡಲು ತೊಡಗಿದರೆ, ಶರಾಬಿನ ಗ್ಲಾಸಿನೊಂದಿಗ ಮತ್ತನಾಗಿ ತೂರಾಡುತ್ತ ಅಮಿತಾಬ್ ಸ್ವತಃ

ಹಾಡಿದಂತೆಯೇ ಆಗುತ್ತದೆ. ಹೀಗೆ ಕಿಶೋರ್‌ಕುಮಾರ್ ಎರಡು ಮಹಾನ್ ಪ್ರತಿಭೆಗಳ ವ್ಯಕ್ತಿತ್ವಕ್ಕೆ ತಕ್ಕ ಶಾರೀರವಾಗಿದ್ದ. ನಟನ ಕಂಠ, ಅಭಿನಯ ಮತ್ತು ವ್ಯಕ್ತಿತ್ವಕ್ಕೆ ತಕ್ಕಂತೆ ಧ್ವನಿಯ ಪಲಕುಗಳನ್ನು ಕಿಶೋರ್‌ಕುಮಾರ್ ನೈಸರ್ಗಿಕವೆನ್ನುವಂತೆ ಬದಲಿಸುತ್ತಿದ್ದರಿಂದಲೇ ಅತ್ಯಂತ ಬೇಡಿಕೆಯ ಗಾಯಕನಾಗಿ ಉಳಿದಿದ್ದು. ರಾಜೇಶ್ ಖನ್ನಾ ಮತ್ತು ಅಮಿತಾಬ್ ಬಚ್ಚನ್ ಸೂಪರ್‌ಸ್ಟಾರ್ ಪದವಿಗೇರಲು ಕಿಶೋರ್‌ಕುಮಾರ್‌ನ ಕಂಠದ ಕಾಣಿಕೆ ಮಹತ್ವದ್ದಾಗಿದೆ. ಶಾಸ್ತ್ರೀಯ ಸಂಗೀತದ ಚೌಕಟ್ಟಿನಿಂದ ಬಿಡಿಸಿ, ಪಾರ್ಶ್ವಗಾಯನದ ಪಾರಂಪರಿಕ ಸಂಪ್ರದಾಯವನ್ನು ಲೀಲಾಜಾಲವಾಗಿ ಮುರಿದ ಕಿಶೋರ್‌ಕುಮಾರ್ ಹಿಂದಿ ಚಿತ್ರರಂಗದ ಹಿನ್ನೆಲೆ ಗಾಯನದ ಪ್ರಪಂಚವನ್ನು ಹೊಸದೊಂದು ಸ್ತರದೆಡೆಗೆ ಮುನ್ನಡೆಸಿದ. ಶಾಸ್ತ್ರೀಯ ಸಂಗೀತದ ಆಧಾರದ ಗೀತೆಗಳನ್ನು ಅದ್ಭುತವೆನ್ನುವಂತೆ ಹಾಡಿದ ಕಿಶೋರ್‌ಕುಮಾರ್ ಶಾಸ್ತ್ರೀಯ ಸಂಗೀತ ಪಾಠದ ಗಂಧ ಗಾಳಿಯನ್ನೂ ಪಡೆಯದಿರುವುದೊಂದು ವಿಶೇಷ. ಆದರೆ ಕಿಶೋರ್‌ಕುಮಾರ್ ಹಾಡಿನ ಹಿಂದೆ ಕಠಿಣ ಪರಿಶ್ರಮವಿತ್ತು.

ಅಸಾಧಾರಣ ಸ್ಮರಣ ಶಕ್ತಿ ಹೊಂದಿದ್ದ ಕಿಶೋರ್ ಕುಮಾರ್ ಹಾಡುಗಳ ಬಾಯಿಪಾಠದಲ್ಲಿ ಎಂತಹ ಸಾಧನೆ ಹೊಂದಿದ್ದನೆಂದರೆ ಸ್ವತಃ ವ್ಹಿ. ಶಾಂತಾರಾಮರೇ ಕಿಶೋರ್‌ಕುಮಾರ್ ನೈಟ್ ಒಂದರಲ್ಲಿ ಖುಷಿಯಾಗಿ ಆತನ ಬೆನ್ನು ತಟ್ಟಿದರು. ಕಿಶೋರ್‌ಕುಮಾರ್ ಜೀವನದ ಸುವರ್ಣ ಕ್ಷಣಗಳೆಂದರೆ ಭಾರತೀಯ ಬೆಳ್ಳಿಯ ತೆರೆಯ ಸುರಸುಂದರಿಯರಾದ ಕೆಲ ತಾರೆಯರು ಅನಾಯಾಸವಾಗಿ ಅವನ ತೆಕ್ಕೆಗೆ ಸಿಕ್ಕಿದುದು. ಧಾರವಾಡದ ಲೀನಾ ಚಂದಾವರಕರಳನ್ನು ಮದುವೆಯಾದಾಗ ಕಿಶೋರ್‌ಕುಮಾರ್‌ನ ಪುತ್ರ




ಪ್ರಸಿದ್ಧ ಗಾಯಕ ಅಮಿತ್‌ಕುಮಾರ್ ಸಮ ವಯಸ್ಕರು ತನ್ನ ಮಲತಾಯಿಗಿಂತ ಚಿಕ್ಕವನಿದ್ದ! 'ಫೂಲೋಂಕಿ ರಂಗೆ ಸೆ, ದಿಲ್ ಕಿ ಕಲಮ್, ವೋ ಮೇರೆ ದಿಲ್ ಕಿ ಚೈನ್, ಆಯೆ ಮೇರೆ ದಿಲ್ ಕೋ ದುಆ ಕೀಜಿಯೆ, ದಂತಹ ಸುಮಧುರ ಗೀತೆಗಳಿಂದ ಹಿಡಿದು ಧಕ್ಕಮ್ ಧಕ್ಕಾ ಹುವಾ, ಪ್ಯಾರ್ ಬಡಾ ಪಕ್ಕಾ ಹುವಾ, ಝೂಪಡಿ ಮೆ ಚಾರಪಾಯಿ ದಂತಹ ಮಡಿವಂತರು ಮೆಲ್ಲನೆ ಕಿವಿ ಮೇಲೆ ಬೆರಳಿಡುವ ಗೀತೆಗಳನ್ನು ಹಾಡಿದ ಕಿಶೋರ್‌ಕುಮಾರ್‌ನ ಪ್ರತಿಭೆಯ ಮಜಲು ವಿಸ್ಮಯ ಪಡುವಷ್ಟು ವಿಶಾಲವಾಗಿತ್ತು. ಕಿಶೋರ್ ಕುಮಾರ್‌ನ ಜೀವಿತಕಾಲದಲ್ಲಿಯೇ ಅಮಿತ್‌ಕುಮಾರ್ ಪ್ರಸಿದ್ಧನಾದ. ಆಗ ನಿರ್ಮಾಪಕರು, ಸಂಗೀತ ನಿರ್ದೇಶಕರು ಹಿನ್ನೆಲೆ ಗಾಯನಕ್ಕೆ ಅಮಿತ್‌ಕುಮಾರ್‌ನನ್ನು ಸಂಪರ್ಕಿಸಲು ಮನೆಗೆ ಹೋದಾಗ ಕಿಶೋರ್‌ಕುಮಾರ್ ನಿಮಗೆ ಆ ಅಮಿತ್‌ಕುಮಾರ್‌ರೇ ಏಕೆ ಬೇಕು? ಅವನಿಗಿಂತ ಚೆನ್ನಾಗಿ ಹಾಡುವ ನಾನಿಲ್ಲವೇ? ಎಂದು ಎಗರಾಡುತ್ತಿದ್ದ.

ತನ್ನ ಬದುಕಿನಲ್ಲಿ ಕೀರ್ತಿ, ಹಣ, ವಿಲಕ್ಷಣ ಸ್ವಭಾವ ಏರಿಳಿತದ ವೈರುದ್ಧದ, ವೈವಿಧ್ಯಮಯ ಜೀವನವನ್ನನುಭವಿಸಿದ ಈ ಅಪ್ಪಟ ಪ್ರತಿಭಾವಂತ ತನ್ನ ಕೊನೆಯಾಸೆಯಾದ ತನ್ನ ಹುಟ್ಟೂರು ಖಾಂಡ್ವಾದಲ್ಲಿಯೇ ಕಳೆಯಬೇಕೆಂಬುದನ್ನು ಈಡೇರಿಸಿಕೊಳ್ಳಲಾರದೇ ಮುಂಬೈನಲ್ಲಿಯೇ 13 ಅಕ್ಟೋಬರ್ 1987 ರಂದು ಕೊನೆಯುಸಿರನ್ನು ಎಳೆದ.

ಕಿಶೋರ್‌ಕುಮಾರ್‌ನ ವೈಯಕ್ತಿಕ ಜೀವನವನ್ನು ನೋಡಿದಾಗ ಆತನ ಮೇಲೆ ಗೌರವ ಉಳಿಯುವುದಿಲ್ಲ. ಹೃದಯವನ್ನು ಸರಕ್ಕನೆ ಮುಟ್ಟುವ ಇಂತಹ ಮಹಾನ್ ಗಾಯಕ ಎಂತಹ ಅಭಾಸಮಯ ಸ್ವಭಾವ ಹೊಂದಿದ್ದನೆಂದು ನೆನಸಿಕೊಂಡರೆ ಮನಸ್ಸು ಅರೆಕ್ಷಣ ಗರಬಡಿಯುತ್ತದೆ. ನಿಜವಾಗಿಯೂ ಅರೆಕ್ಷಣವೇ! ಏಕೆಂದರೆ ಮರುಕ್ಷಣವೇ ನೀವು ಟೇಪ್‌ರೆಕಾರ್ಡ್ ಆನ್ ಮಾಡಿದರೆ ಅಥವಾ ರೇಡಿಯೋ ಟ್ಯೂನ್‌ಗೊಳಿಸಿದರೆ ತೇಲಿ ಬರುವ ಕಿಶೋರ್‌ಕುಮಾರ್‌ನ 'ವೋ ಮೇರೆ ಶರ್ಮಿಲಿ' ಅಥವಾ 'ಖೈಕೆ ಪಾನ್ ಬನಾರಸ್ ವಾಲಾ' ಅಥವಾ ನೋವು ತುಂಬಿದ 'ಗುಂಗುರು ಕಿ ತರಹ' ಅಥವಾ 'ಮೇರಾ ಜೀವನ ಕೋರಾ ಕಾಗಜ' ದಂತಹ ಹಾಡುಗಳನ್ನು ಕೇಳಿದರೆ ಸಾಕು ಎಲ್ಲವನ್ನೂ ಮರೆತು ತಣ್ಣಗೆ ನಿಮ್ಮ ಹೃದಯವನ್ನು ಆ ಗಾನಗಾರುಡಿಗನ ಕೈಗೆ (ಧ್ವನಿಗೆ) ಕೊಟ್ಟು ತಲೆ ಅಲ್ಲಾಡಿಸುತ್ತಾ ಕುಳಿತು ಬಿಡುತ್ತೀರಿ. ಏಕೆಂದರೆ ಈ ಅಪ್ರತಿಮ ಗಾಯಕನ ಮೋಡಿಯೇ ಅಂತಹದು.

✱ಗಳತಗಾ ಗಾಯತ್ರಿನಂದನ

## ಶಿಸ್ತು

ರಾಷ್ಟ್ರಪತಿ ಝಾಕೀರ ಹುಸೇನರು ರಾಷ್ಟ್ರಪತಿಯಾಗುವ ಪೂರ್ವದಲ್ಲಿ ಜಾಮಿಯಾ ಮಿಲಿಯಾ ವಿಶ್ವವಿದ್ಯಾಲಯ ಸ್ಥಾಪನೆ ಹಾಗೂ ಅದರ ಬೆಳವಣಿಗೆಯಲ್ಲಿ ಸಾಕಷ್ಟು ಪರಿಶ್ರಮ ವಹಿಸಿದ್ದರು. ಅವರು ಪ್ರಾಧ್ಯಾಪಕರಾಗಿದ್ದಾಗ ಶಿಸ್ತು ಸ್ವಚ್ಛತೆಯ ಕಡೆಗೆ ಹೆಚ್ಚು ಲಕ್ಷಕೊಡುವ ಅನುಶಾಸನ ಪ್ರಿಯ ಪ್ರಾಧ್ಯಾಪಕರಾಗಿದ್ದರು.

ವಿದ್ಯಾಲಯದ ಪ್ರತಿಯೊಬ್ಬ ವಿದ್ಯಾರ್ಥಿಯೂ ದಿನಾಲು ವಿಶ್ವವಿದ್ಯಾಲಯ ಪ್ರವೇಶಿಸುವಾಗ ನೀಟಾದ ಬಟ್ಟೆತೊಟ್ಟು. ಪಾಲಿಶ್ ಮಾಡಿದ ಬೂಟು ಹಾಕಿಕೊಂಡು ಬರಬೇಕೆಂದು ಕಟ್ಟುನಿಟ್ಟಿನ ಆದೇಶ ನೀಡಿದ್ದರು. ಆದರೆ ಅವರ ಆದೇಶವನ್ನು ಉಲ್ಲಂಘಿಸುತ್ತಿರುವ ವಿದ್ಯಾರ್ಥಿಗಳೂ ಇರುವರೆಂದು ಅರಿತರು.

ಒಂದು ದಿನ ಮುಂಜಾನೆ ವಿದ್ಯಾರ್ಥಿಗಳು ಬರುವ ಪ್ರವೇಶದ್ವಾರದಲ್ಲಿ ಸ್ವತಃ ಪಾಲಿಶ್ ಡಬ್ಬಿ ಬ್ರಶ್ ಹಿಡಿದು ಕುಳಿತರು. ಅಶಿಸ್ತಿನ ವಿದ್ಯಾರ್ಥಿಗಳು ಇದನ್ನು ಕಂಡು ನಾಚಿ ನೀರಾದರು. ತಕ್ಷಣ ಅವರತ್ತ ಓಡಿ ಬಂದು ಸರ್, ತಪ್ಪಾಯಿತು. ಇನ್ನು ಮುಂದೆ ಶಿಸ್ತನ್ನು ಉಲ್ಲಂಘಿಸುವದಿಲ್ಲ ಎಂದು ಪ್ರತಿಜ್ಞೆ ಮಾಡಿದರು.

ಮುಂದೆ ವಿದ್ಯಾರ್ಥಿಗಳೆಲ್ಲ ಅದರಂತೆಯೇ ನಡೆದರು. ಅಡಿಗಲ್ಲು ಸರಿ ಇದ್ದರೆ ಮನೆ ಭದ್ರವಾಗಿರುವದಷ್ಟೇ.

• (ಸಂಗ್ರಹ) ಶಿಸು ಸಂಗಮೇಶ

# ಮಲೇರಿಯಾ ವ್ಯಾಧಿಗೆ ಬ್ರಹ್ಮಾಸ್ತ್ರ ಡಿ.ಡಿ.ಟಿ

ಪ್ರತಿವರ್ಷ ಜಗತ್ತಿನಲ್ಲಿ ವಿವಿಧ ರಾಷ್ಟ್ರಗಳಲ್ಲಿ 300 ರಿಂದ 500 ಮಿಲಿಯದಷ್ಟು ಮಲೇರಿಯಾ ವ್ಯಾಧಿ ಪ್ರಕರಣಗಳು ಸಂಭವಿಸುತ್ತಿವೆ. ಇವುಗಳಲ್ಲಿ ಸುಮಾರು ಒಂದು ಮಿಲಿಯ ಮಂದಿ ಸಾವಿಗೀಡಾಗುತ್ತಿದ್ದಾರೆ ಎಂದು ವಿಶ್ವ ಆರೋಗ್ಯ ಸಂಸ್ಥೆಯ ತಜ್ಞರ ಸಮೀಕ್ಷೆಯೊಂದು ತಿಳಿಸುತ್ತದೆ. ಉದಾಹರಣೆಗೆ ಪೆರುವಿನಲ್ಲಿ 1990 - 1996ರ ಅವಧಿಯಲ್ಲಿ ಮಲೇರಿಯಾ ವ್ಯಾಧಿ ಪ್ರಕರಣಗಳು ಏಳು ಪಟ್ಟು ಹೆಚ್ಚಿದವು. ಪೆರುವಿನ ಒಂದು ಗ್ರಾಮೀಣ ಪ್ರದೇಶದಲ್ಲಂತೂ ಮಲೇರಿಯಾದಿಂದ ಸತ್ತವರ ಸಂಖ್ಯೆ 36,000 ಕ್ಕೆ ಏರಿತು. ದಕ್ಷಿಣ ಆಫ್ರಿಕಾದಲ್ಲಿ 1995 ರಲ್ಲಿ ವರದಿಯಾದ 8750 ಮಲೇರಿಯಾ ವ್ಯಾಧಿ ಪ್ರಕರಣಗಳಲ್ಲಿ 44 ಸಾವುಗಳು ಸಂಭವಿಸಿದವು. 1999 ರಲ್ಲಿ 51,000 ವ್ಯಾಧಿ ಪ್ರಕರಣಗಳಲ್ಲಿ 393 ಸಾವುಗಳು ಸಂಭವಿಸಿದವು. ಇಂಡೋನೇಶಿಯಾದ ಒಂದು ಗ್ರಾಮದಲ್ಲಿ 1990ರ ದಶಕದಲ್ಲಿ ವರ್ಷದಲ್ಲಿ ಕೇವಲ 15 ಸಾವಿರ ಪ್ರಕರಣಗಳು ಮಲೇರಿಯಾ ವ್ಯಾಧಿಯಿಂದ ದಾಖಲಾದರೆ 2000 ವರ್ಷದಲ್ಲಿ 921 ಪ್ರಕರಣಗಳು ದಾಖಲಾದವು.

ಮಾನವಕುಲದ ಮಹಾ ಪಿಡುಗುಗಳಲ್ಲಿ ಒಂದೆನಿಸಿದ ಮಲೇರಿಯಾ ವ್ಯಾಧಿ ಆರೋಗ್ಯ ಕ್ಷೇತ್ರದ ತಜ್ಞರ ಸತತ ಪರಿಶ್ರಮದಿಂದಾಗಿ ಅಸ್ತಿತ್ವದಿಂದಲೇ ಅಳಿಸಿಹೋಗಿತ್ತು. ಆದರೆ ಇದೀಗ ಮತ್ತೆ ಮಲೇರಿಯಾ ಪ್ರಕರಣಗಳು ಉಲ್ಬಣಿಸಿವೆ. ಇದಕ್ಕೆ ಹಲವಾರು ಕಾರಣಗಳಿವೆ ಎಂದು ವೈದ್ಯಕೀಯ ತಜ್ಞರು ಅಭಿಪ್ರಾಯಪಡುತ್ತಾರೆ. ಮಲೇರಿಯಾ ರೋಗ ಹರಡುವ ರೋಗಾಣುಗಳು ಔಷಧಿಗಳ ಶಕ್ತಿಯನ್ನು ಮೆಟ್ಟಿನಿಲ್ಲಲು ಶಕ್ತವಾಗಿರುವುದೂ ಒಂದು ಕಾರಣವೆನ್ನಬಹುದು. ಇನ್ನೊಂದು ಅತ್ಯಂತ ಪ್ರಮುಖ ಕಾರಣವೆಂದರೆ ಡಿ.ಡಿ.ಟಿಯ ಬಳಕೆಯನ್ನು ನಿಷೇಧಿಸಿರುವುದು.

**ಮಲೇರಿಯಾ ವ್ಯಾಧಿ ಹರಡುವ ಸೊಳ್ಳೆಗಳ ವಿರುದ್ಧ ಡಿ.ಡಿ.ಟಿ ರಾಸಾಯನಿಕ ಬ್ರಹ್ಮಾಸ್ತ್ರವಾಗಿದೆ. ಡಿ.ಡಿ.ಟಿ.ಯ ನಿಷೇಧ ಮಾನವಕುಲ ವನ್ನು ಭೀಕರ ವಿಪತ್ತಿಗೆ ತಳ್ಳಲಿದೆ.**

ಡಿ.ಡಿ.ಟಿ ಎಂಬುದು ಒಂದು ಅದ್ಭುತ ರಾಸಾಯನಿಕ. ಡಿ.ಡಿ.ಟಿಯ ಅದ್ಭುತ ಸಾಮರ್ಥ್ಯ ಮೊದಲು ಬೆಳಕಿಗೆ ಬಂದುದು. ಎರಡನೇ ಜಾಗತಿಕ ಸಮರ ಕಾಲದಲ್ಲಿ. ಪೌಲ್ ಹರ್ಮನ್ ಮುಲ್ಲರ್ ಎಂಬಾತ ಪ್ರಯೋಗಾಲಯದಲ್ಲಿ ಡೈಕ್ಲೊರೊಡಿಫಿನೈಲ್ ಟ್ರೈಕ್ಲೊರೊ ಇಥೇನ್ ರಾಸಾಯಿನಿಕವನ್ನು ಒಂದು ಗೂಡಿಸಲ್ಲಿರಿಸಿ ಪರೀಕ್ಷಿಸಿ ನೋಡುತ್ತಿದ್ದ. ಪರೀಕ್ಷಣೆಯ ಬಳಕ ಆತ ಗೂಡನ್ನು ಚೆನ್ನಾಗಿ ಸ್ವಚ್ಛಗೊಳಿಸಿದ. ಬಳಿಕ ಕೆಲವು ನೊಣಗಳು ಆ ಗಾಜಿನ ಗೂಡಿನೊಳಗೆ

**ಬಿ. ಸುಷ್ಮಾ**

ಪ್ರವೇಶಿಸುತ್ತಿದ್ದಂತೆ ಪಟಪಟನೆ ಬಿದ್ದು ಸತ್ತವು.

ಡಿ.ಡಿ.ಟಿ ಅಥವಾ ಡೈಕ್ಲೋರೋಡಿಫಿನೈಲ್ ಟ್ರೈಕ್ಲೋರೋ ಇಥೇನ್ ಕೀಟಗಳ ನರಮಂಡಲ ವ್ಯವಸ್ಥೆಯನ್ನು ಸಂಪೂರ್ಣ ಕೆಡಿಸಬಲ್ಲ ಸಾಮರ್ಥ್ಯ ಹೊಂದಿದ ತೀವ್ರ ವಿಷ ಘಟಕವೆನಿಸಿತು. ಎರಡನೇ ಮಹಾಯುದ್ಧ ಕಾಲದಲ್ಲಿ ಮಿತ್ರರಾಷ್ಟ್ರಗಳ ಸೇನೆ ಠಾಣ್ಯ ಹೂಡಿದ ಭೂ ಪ್ರದೇಶಗಳ ಮೇಲೆ ಡಿ.ಡಿ.ಟಿಯನ್ನು ಸಿಂಪಡಿಸಿ ಸೋಂಕು ಕಾಯಿಲೆಗಳಿಂದ ಸೈನಿಕರನ್ನು ರಕ್ಷಿಸುವ ಪ್ರಯತ್ನ ನಡೆಯಿತು. 1944 ರಲ್ಲಿ ಇಟಲಿಯ ನೇಪಲ್ಸ್ ನಗರದಲ್ಲಿ ಪ್ರಚಂಡ ಹಾವಳಿ ಎಬ್ಬಿಸಿದ ಟೈಫಸ್ ರೋಗದ ರೋಗಾಣುಗಳನ್ನು ನಾಶ ಪಡಿಸಲು ಇಡೀ ನಗರದ ಮೇಲೆ ಡಿ.ಡಿ.ಟಿ ಸಿಂಪಡಿಸಲಾಯಿತು.

ಡಿ.ಡಿ.ಟಿ ಕುರಿತ ಅಭಿವೃದ್ಧಿ - ಸಂಶೋಧನೆ ಕ್ಷೇತ್ರದಲ್ಲಿ ಸಲ್ಲಿಸಿದ ಮಹತ್ವದ ಸೇವೆಗಾಗಿ ಪೌಲ್ ಮುಲ್ಲರ್‌ಗೆ 1948 ರಲ್ಲಿ ನೊಬೆಲ್ ಪಾರಿತೋಷಕ ದೊರಕಿತು. ಎರಡನೇ ಮಹಾಯುದ್ಧದ ಬಳಿಕ ಜಗತ್ತಿನಾದ್ಯಂತ ಹಳದಿ ಜ್ವರ, ಟೈಫಸ್, ಮಿದುಳು ಜ್ವರ ಮುಂತಾದ ಕಾಯಿಲೆಗಳನ್ನು ಹರಡುವ ರೋಗಾಣುಗಳನ್ನು ತೊಡೆದು ಹಾಕಲು ಡಿ.ಡಿ.ಟಿಯನ್ನು ವ್ಯಾಪಕವಾಗಿ ಬಳಸಲಾಯಿತು. ಆದರೆ ಎಲ್ಲಕ್ಕಿಂತಲೂ ಮಿಗಿಲಾಗಿ ಮಲೇರಿಯಾ ವ್ಯಾಧಿ ಹರಡುವ 60 ವಿಧದ ಸೊಳ್ಳೆಗಳ ವಿರುದ್ಧ ಬ್ರಹ್ಮಾಸ್ತ್ರವಾಗಿ ಡಿ.ಡಿ.ಟಿ ಬಳಕೆಯಾಯಿತು. ಡಿ.ಡಿ.ಟಿ.ಯ ಸ್ಪರ್ಶವಾದೊಡನೆಯೇ ಸೊಳ್ಳೆಗಳು ಸಾಯುತ್ತವೆ. ಕೊಳಚೆ ನೀರು ಹರಿಯುವ ಚರಂಡಿಗಳು, ಬಚ್ಚಲಿನ ಕೊಳಕು ನೀರು ಹರಿದುಹೋಗುವ ಸ್ಥಳ, ಸೊಳ್ಳೆಗಳ ಆವಾಸಸ್ಥಾನವಾಗಿರುವ ಕೊಳಚೆ ಪ್ರದೇಶಗಳ ಮೇಲೆ ಡಿ.ಡಿ.ಟಿ ಸಿಂಪಡಿಸುವ ಕಾರ್ಯ ವ್ಯಾಪಕವಾಗಿ ಮುಂದುವರಿದಂತೆ ಮಲೇರಿಯಾ ಸೊಳ್ಳೆಗಳ ಸಂತತಿ ನಿರ್ನಾಮವಾಗತೊಡಗಿತು. ತತ್ಪರಿಣಾಮವಾಗಿ ಅಮೆರಿಕಾ, ಯೂರೋಪ್, ಜಪಾನ್,




ಆಸ್ಟ್ರೇಲಿಯಾ ದೇಶಗಳಿಂದ ಮಲೇರಿಯಾ ವ್ಯಾಧಿ ಕಣ್ಮರೆಯಾಯಿತು. ಭಾರತದಲ್ಲಿ ಒಂದು ಕಾಲದಲ್ಲಿ ವರ್ಷದಲ್ಲಿ ಎಂಟು ಲಕ್ಷಮಂದಿ ಮಲೇರಿಯಾದಿಂದ ಸಾವಿಗೀಡಾದ ನಿದರ್ಶನಗಳಿದ್ದುವು. ಡಿ.ಡಿ.ಟಿ ಬ್ರಹ್ಮಾಸ್ತ್ರದ ನೆರವಿನಿಂದ 1960ರ ದಶಕದ ವೇಳೆಗೆ ಮಲೇರಿಯಾ ವ್ಯಾಧಿ ಪ್ರಕರಣಗಳ ಸಂಖ್ಯೆ ಶೂನ್ಯ ಮಟ್ಟಕ್ಕೆ ತಲುಪಿತು. ಶ್ರೀಲಂಕಾದಲ್ಲಿ ಡಿ.ಡಿ.ಟಿ ಬಳಕೆಯಿಂದ ಮಲೇರಿಯಾ ವ್ಯಾಧಿ ಪ್ರಕರಣಗಳ ಸಂಖ್ಯೆ ವರ್ಷದಲ್ಲಿ 2.8 ಮಿಲಿಯದಷ್ಟು ಇದ್ದುದು ಕೇವಲ 17ಕ್ಕೆ ಕುಸಿಯಿತು.

ಡಿ.ಡಿ.ಟಿ ಬ್ರಹ್ಮಾಸ್ತ್ರ ಪ್ರಯೋಗದಿಂದಾಗಿ ಮಲೇರಿಯಾ ವ್ಯಾಧಿಯಿಂದ ಸಾಯುವ ಮಿಲಿಯಗಟ್ಟಳೆ ಜನರ ಜೀವ ಉಳಿಯಿತು. ಹೀಗಾಗಿ ಇಡೀ ಮಾನವಕುಲ ಈ ಅದ್ಭುತ ರಾಸಾಯನಿಕಕ್ಕೆ ಋಣಿಯಾಗಲೇ ಬೇಕು.

ಡಿ.ಡಿ.ಟಿಯ ಕಾರ್ಯ ಸಾಮರ್ಥ್ಯವನ್ನೂ ಮೆಟ್ಟಿ ನಿಲ್ಲುವ ಶಕ್ತಿಯನ್ನು ಸೊಳ್ಳೆಗಳು ರೂಢಿಸಿಕೊಳ್ಳುವ

ಸಾಧ್ಯತೆಗಳಿರುತ್ತವೆ. ಆದರೂ ಈ ರಾಸಾಯನಿಕ ಇಂದಿಗೂ ಪ್ರಬಲ ಶಕ್ತಿಯಾಗಿದೆ. ಮನೆಯ ಒಳಗೆ ಸಿಂಪಡಿಸಿದರೆ ಕ್ಷಣ ಮಾತ್ರದಲ್ಲಿ ಸೊಳ್ಳೆಗಳು ಪರಾರಿಯಾಗುತ್ತವೆ.

## ಕೃಷಿ ಕ್ಷೇತ್ರದಲ್ಲಿ ಬಳಕೆ

ಮಲೇರಿಯಾ ಹರಡುವ ಸೊಳ್ಳೆಗಳನ್ನು ನಿರ್ನಾಮಗೊಳಿಸುವ ದಿಶೆಯಲ್ಲಿ ಮಾತ್ರವಲ್ಲ ಕೃಷಿಕ್ಷೇತ್ರದಲ್ಲಿ ಫಸಲನ್ನು ಹಾಳುಗೆಡಹುವ ಕ್ರಿಮಿಕೀಟಗಳನ್ನು ನಾಶಗೊಳಿಸಲು ರೈತರು ಅಪಾರ ಪ್ರಮಾಣದಲ್ಲಿ ಡಿ.ಡಿ.ಟಿ ಬಳಸುತ್ತಾರೆ. ಇದರಿಂದ ಪರಿಸರಕ್ಕೆ ತೀವ್ರ ಹಾನಿಯಾಗುವ ಸಾಧ್ಯತೆಗಳೂ ಇವೆ ಕೆಲವೊಂದು ಪಕ್ಷಿಜಾತಿಗಳ ಅವನತಿಗೂ ಡಿ.ಡಿ.ಟಿ. ಕಾರಣವೆಂಬುವಾಗಿ ತಿಳಿದು ಬಂದಿದೆ. ಇವೆಲ್ಲ ಕಾರಣಗಳಿಂದಾಗಿ ಸಂಯುಕ್ತ ರಾಷ್ಟ್ರ ಅಮೆರಿಕಾ 1972 ರಲ್ಲಿ ವ್ಯವಸಾಯಕ್ಷೇತ್ರದಲ್ಲಿ ಡಿ.ಡಿ.ಟಿ. ಬಳಕೆಯನ್ನು ನಿಷೇಧಿಸಿತು. ಭಾರೀ ಅಭಿವೃದ್ಧಿ ಸಾಧಿಸಿದ ಹಲವು ರಾಷ್ಟ್ರಗಳೂ ಈ ಮೇಲ್ಪಂಕ್ತಿ ಅನುಸರಿಸಿದುವು. ಭಾರತದಲ್ಲಿಯೂ ಕೃಷಿ ಕ್ಷೇತ್ರದಲ್ಲಿ ಡಿ.ಡಿ.ಟಿ. ಸಿಂಪಡಿಸಬೇಕಾಗುತ್ತದೆ. ಉದಾಹರಣೆಗೆ ಹತ್ತಿ ವ್ಯವಸಾಯದ ಹೊಲದಲ್ಲಿ ಕ್ರಿಮಿಕೀಟಗಳನ್ನು ನಾಶಗೊಳಿಸಲು ಒಂದು ಟನ್ ಅಥವಾ ಅಧಿಕ ಪ್ರಮಾಣದ ಡಿ.ಡಿ.ಟಿ ಬೇಕಾಗುತ್ತದೆ. ಆದರೆ ಮನೆಯೊಳಗೆ ಪ್ರತಿ ಚದರ ಮೀಟರು ಜಾಗವನ್ನು ಕ್ರಿಮಿಕೀಟಗಳಿಂದ ಮುಕ್ತಗೊಳಿಸಲು ಕೇವಲ ಎರಡು ಗ್ರಾಂ ಡಿ.ಡಿ.ಟಿ ಸಾಕಾಗುತ್ತದೆ. ಹತ್ತಿ ವ್ಯವಸಾಯದ 400 ಹೆಕ್ಟೇರ್ ಭೂ ಪ್ರದೇಶವನ್ನು ಕ್ರಿಮಿಕೀಟಗಳಿಂದ ಮುಕ್ತಗೊಳಿಸಲು ಸಿಂಪಡಿಸಲಾಗುವ ಡಿ.ಡಿ.ಟಿ ಪ್ರಮಾಣವು ಗುಯಾನದಂತಹ ಸಣ್ಣ ರಾಷ್ಟ್ರವನ್ನು ಒಂದು ವರ್ಷದ ಅವಧಿಯಲ್ಲಿ ಮಲೇರಿಯಾದಿಂದ ಮುಕ್ತಗೊಳಿಸಲು ಸಾಕಾಗುತ್ತದೆ.

ಪರಿಸರದ ಮೇಲೆ ತೀವ್ರ ಹಾನಿ ಉಂಟುಮಾಡುವ ಕಾರಣ ಡಿ.ಡಿ.ಟಿ.ಯನ್ನು ಯಾವ ಕಾರಣಕ್ಕೂ ಬಳಸಬಾರದೆಂದು ಅಮೆರಿಕಾ, ಕೆನಡಾ ಹಾಗೂ ಐರೋಪ್ಯ ನೆರವು ಸಂಸ್ಥೆಗಳು ವಿಶ್ವಬ್ಯಾಂಕ್, ವಿಶ್ವಸಂಸ್ಥೆ ಹಾಗೂ ಇತರ ಅಂತಾರಾಷ್ಟ್ರೀಯ ಸಂಸ್ಥೆಗಳು ಅಭಿವೃದ್ಧಿ ಶೀಲ ದೇಶಗಳನ್ನು ನಿರಂತರ ಒತ್ತಾಯಿಸುತ್ತಾ ಬಂದಿವೆ. ಈ ಒತ್ತಾಯದ ಪರಿಣಾಮವಾಗಿಯೇ ಅಭಿವೃದ್ಧಿ ಶೀಲ ದೇಶಗಳು ಡಿ.ಡಿ.ಟಿ ಬಳಕೆಯನ್ನು ನಿಷೇಧಿಸಿದುವು. ಅದರ ಫಲಿತಾಂಶವೇನಾಯಿತು ಗೊತ್ತಿದೆಯೆ? ಬ್ರೆಜಿಲ್, ಬೊಲಿವಿಯಾ, ಪೆರು - ಮುಂತಾದ ದಕ್ಷಿಣ ಅಮೆರಿಕಾದ ದೇಶಗಳಲ್ಲಿ ಮಲೇರಿಯಾ ಪ್ರಮಾಣ ಶೇಕಡಾ 90 ರಷ್ಟು ಉಲ್ಬಣಿಸಿತು. ಗುಯಾನದಲ್ಲಿ ಶೇ.80 ರಷ್ಟು ಅಧಿಕವಾಯಿತು. ಮಲೇರಿಯಾ ವ್ಯಾಧಿ ನಿರ್ಮೂಲನದಲ್ಲಿ ಡಿ,ಡಿ.ಟಿ ಯಷ್ಟೇ ಪ್ರಬಲ ಶಕ್ತಿಯ ಇನ್ನೊಂದು ಬದಲಿ ರಾಸಾಯನಿಕ ಸದ್ಯ ಲಭ್ಯವಿಲ್ಲ. ಸೊಳ್ಳೆಗಳ ನಾಶಕ್ಕೆ ಬಳಸುವ ಇತರ ಕೀಟನಾಶಕಗಳಾದ ಪೈರೆಥ್ರೋಯ್ಡ್ ಡಿ.ಡಿ.ಟಿ ಯಷ್ಟು ಪರಿಣಾಮಕಾರಿಯಾಗಿಲ್ಲ. ಅಲ್ಲದೆ ಅದು ದುಬಾರಿಯೂ ಆಗಿದೆ. ಇಂಡೋನೇಶಿಯಾದಲ್ಲಿ 38 ವರ್ಷಗಳ ತನಕ ಡಿ.ಡಿ.ಟಿ ಯನ್ನು ಸತತವಾಗಿ ಬಳಸಿದ ಬಳಿಕ 1989 ರಲ್ಲಿ ಅವುಗಳ ಬಳಕೆ ನಿಷೇಧಿಸಲಾಯಿತು.

ಪರಿಸರ ಸಂರಕ್ಷಣಾವಾದಿಗಳು ಮಾತ್ರ ಡಿ.ಡಿ.ಟಿಯ ಪ್ರಬಲ ಶತ್ರುಗಳಾಗಿದ್ದಾರೆ. ಡಿ.ಡಿ.ಟಿಯ ಬಳಕೆಯನ್ನು ಸಂಪೂರ್ಣವಾಗಿ ನಿಷೇಧಿಸದ ಹೊರತು ನಾವು ಯಾರು ಸುರಕ್ಷಿತರಲ್ಲ" ಎಂದು ಪರಿಸರವಾದಿಗಳು ತರ್ಕಿಸುತ್ತಾರೆ.

ಅಮೆರಿಕಾ ಮತ್ತು ಯೂರೋಪ್‌ನಲ್ಲಿ ಹಲವು ವರ್ಷಗಳ ಕಾಲ ಜನ ನಿತ್ಯ ಸ್ವೀಕರಿಸುವ ಆಹಾರದಲ್ಲಿ ಡಿ.ಡಿ.ಟಿಯ ಅಂಶಗಳು ಒಳಗೊಂಡಿದ್ದವು. ಅಮೆರಿಕಾದಲ್ಲಿ ಸುಮಾರು 20 ವರ್ಷಗಳ ಕಾಲ ಬೆಳೆಗಳ ಮೇಲೆ 70,000 ಟನ್ ಡಿ.ಡಿ.ಟಿ. ಸಿಂಪಡಿಸಲಾಯಿತು. ಅಮೆರಿಕಾದ ಹಲವು ನಗರಗಳಲ್ಲಿ ಸೊಳ್ಳೆಗಳ ಹಾವಳಿ ನಿಯಂತ್ರಿಸಲು ಡಿ.ಡಿ.ಟಿ ಅನಿಲ ಹಾಯಿಸಲಾಯಿತು. ರಸ್ತೆಗಳಲ್ಲಿ ಸಂಚರಿಸುವ

ಪಾದಾಚಾರಿಗಳು, ವಾಹನ ಚಾಲಕರು ಡಿ.ಡಿ.ಟಿ ಅನಿಲ ಸೇವಿಸಿದರು. ಏಶಿಯಾ, ಆಫ್ರಿಕಾದ ದಕ್ಷಿಣಭಾಗ, ಲ್ಯಾಟಿನ್ ಅಮೆರಿಕಾ ದೇಶಗಳಲ್ಲಿ ಮಿಲಿಯಗಟ್ಟಳೆ ಮನೆಗಳಲ್ಲಿ ವರ್ಷದಲ್ಲಿ ಎರಡುಬಾರಿ ಡಿ.ಡಿ.ಟಿ ಸಿಂಪಡಿಸುವ ಕಾರ್ಯಕ್ರಮ ಹಮ್ಮಿಕ್ರೊಳ್ಳಲಾಗಿದೆ. ಇವೆಲ್ಲ ದೇಶಗಳಲ್ಲಿ ಡಿ.ಡಿ.ಟಿ ಯಿಂದಾಗಿ ಮಾನವನ ಆರೋಗ್ಯಕ್ಕೆ ಗಂಭೀರ ಅಪಾಯ ಉಂಟಾದ ಪ್ರಕರಣಗಳು ಸಂಭವಿಸಿಲ್ಲ. ಆದರೆ ಡಿ.ಡಿ.ಟಿಯ ಬಳಕೆಯನ್ನು ಪ್ರಬಲವಾಗಿ ವಿರೋಧಿಸುವವರು ಅದರಿಂದ ಮಾನವ ಆರೋಗ್ಯಕ್ಕೆ ಭಾದಕವಿದೆ ಎಂಬುದು ವೈಜ್ಞಾನಿಕ ಅಧ್ಯಯನಗಳಿಂದ ದೃಢಪಟ್ಟಿದೆ ಎನ್ನುತ್ತಾರೆ. ಉದಾಹರಣೆಯಾಗಿ ದೇಹದಲ್ಲಿ ಅಧಿಕ ಪ್ರಮಾಣದಲ್ಲಿ ಡಿ.ಡಿ.ಟಿ ಅಂಶ ಒಳಗೊಂಡಿರುವ ಮಹಿಳೆಯರಲ್ಲಿ ಸ್ತನದ ಕ್ಯಾನ್ಸರ್ ಪ್ರಮಾಣ ಹೆಚ್ಚಾಗಿರುತ್ತದೆಂದು ಅಮೆರಿಕಾದಲ್ಲಿ ನಡೆದ ಅಧ್ಯಯನಗಳಿಂದ ವ್ಯಕ್ತವಾಗಿದೆ.

ಇತ್ತೀಚೆಗೆ ಜಗತ್ತಿನಾದ್ಯಂತ 500 ಮಂದಿ ವೈದ್ಯಕೀಯ ತಜ್ಞರು, ವಿಜ್ಞಾನಿಗಳು ವಿಶ್ವ ಆರೋಗ್ಯ ಸಂಸ್ಥೆಗೆ ಬಹಿರಂಗ ಪತ್ರವೊಂದನ್ನು ಬರೆದು ಸಹಿ ಹಾಕಿದ್ದಾರೆ. ಆ ಪತ್ರದಲ್ಲಿ ಹೀಗೆ ಹೇಳಲಾಗಿದೆ..... 'ಕೃಷಿ ಕ್ಷೇತ್ರದಲ್ಲಿ ಡಿ.ಡಿ.ಟಿ ಬಳಕೆಯನ್ನು ನಿಷೇಧಿಸಿದರೂ ಮಲೇರಿಯಾ ನಿಯಂತ್ರಣದ ಸಲುವಾಗಿ, ಡಿ.ಡಿ.ಟಿಯನ್ನು ನಿಷೇಧಿಸಬಾರದು. ಡಿ.ಡಿ.ಟಿ ಬಳಕೆಯಿಂದ ಜನರ ಆರೋಗ್ಯದ ಮೇಲೆ ಅಲ್ಪಸ್ವಲ್ಪ ದುಷ್ಪರಿಣಾಮ ಆಗಲೂ ಬಹುದು. ಆದರೆ ಅದು ಜೀವ ರಕ್ಷಕ ರಾಸಾಯನಿಕವೆಂಬುದನ್ನು ಮರೆಯಬಾರದು. ವರ್ಷದುದ್ದಕ್ಕೂ ನೂರಾರು, ಸಾವಿರಾರು ಮಂದಿಯ ಜೀವ ಉಳಿಸುವ ಡಿ.ಡಿ.ಟಿಯ ನಿಷೇಧ ಅತೀ ಭೀಕರ ಪ್ರಮಾದವಾಗಲಿದೆ".

ಇವೆಲ್ಲ ವಾದಗಳು, ಚಿಂತನೆಗಳನ್ನು ಗಮನಿಸಿದರೆ ಮಲೇರಿಯಾ ವ್ಯಾಧಿ ನಿಯಂತ್ರಿಸಲು ಡಿ.ಡಿ.ಟಿ.ಗೆ ಬದಲಿಯಾಗಿ ಇನ್ನೊಂದು ರಾಸಾಯನಿಕ ಸಂಶೋಧನೆಯಾಗುವ ವರೆಗೂ ಡಿ.ಡಿ.ಟಿ.ಯ ಬಳಕೆ ನಿಷೇಧಿಸಕೂಡದು ಎಂಬುದೇ ತಜ್ಞರ ಅಭಿಮತವಾಗಿದೆ.

- (ಮಾಹಿತಿ ಕೃಪೆ: ರೀಡರ್ಸ್ ಡೈಜೆಸ್ಟ್).

**ವಿ**ಶ್ವದ ಮೂರನೇ ಒಂದು ಭಾಗದ ಜನರು ಮಾತ್ರ ಚಮಚ ಮತ್ತು ಫೋರ್ಕ್‌ನ್ನು ತಿನ್ನಲು ಉಪಯೋಗಿಸುತ್ತಾರೆ.

**********

**ಮ**ಹಿಳೆಯರು ಪದವಿ ಪಡೆಯಲು ಅವಕಾಶ ಮಾಡಿಕೊಟ್ಟ ಮೊದಲನೆಯ ವಿಶ್ವವಿದ್ಯಾಲಯವೆಂದರೆ ಲಂಡನ್ ವಿಶ್ವವಿದ್ಯಾಲಯ.

**********

**1970** ರಲ್ಲಿ ನ್ಯೂಜಿಲೆಂಡ್‌ನ ವಾಹನ ಚಾಲಕನೊಬ್ಬ 109 ಮೈಲಿ(175 ಕಿ.ಮೀ.)ದೂರವನ್ನು ಹಿಂದು ಹಿಂದಕ್ಕೆ ವಾಹನ ನಡೆಸಿದ.

**********

**ಗೋ**ಡೆಗೆ ಅಂಟಿಸುವ ಅಲಂಕಾರದ ಕಾಗದ(ವಾಲ್‌ಪೇಪರ್) ಇಂಗ್ಲೆಂಡ್‌ನಲ್ಲಿ ಜನಪ್ರಿಯವಾಗಿದ್ದು 1720 ರ ಸುಮಾರಿನಲ್ಲಿ.

**********

**1836** ರಲ್ಲಿ ಮೊದಲ ಬಾರಿಗೆ ಕ್ರಿಕೆಟ್ ಆಟಗಾರರ ಪ್ಯಾಡ್‌ಗಳನ್ನು ಸಂಶೋಧಿಸಲ್ಪಟ್ಟವು.

• (ಸಂಗ್ರಹ) ಸಂಪಟೂರು ವಿಶ್ವನಾಥ

# ನೆನಪು ನೆರಳಿನಲ್ಲಿ

## ನಾಗರಪಂಚಮಿ ನೆನಪು

ಒಂದು ಸಾವಿರ ಒಂಬೈನೂರಾ ಐವತ್ತೆರಡು ಅಗಸ್ಟ್ ತಿಂಗಳಲ್ಲಿ ಬಂದ ನಾಗಪಂಚಮಿ ಹಬ್ಬದ ನೆನಪು. ತಂದೆ ತೀರಿ ಹೋಗಿ ತಾಯಿಯ ಆಶ್ರಯದಲ್ಲಿ ಬೆಳೆದ ಎಂಟು ಮಕ್ಕಳಲ್ಲಿ ನಾನು ಐದನೆಯವನು. ಮನೆಯಲ್ಲಿ ಕಿತ್ತು ತಿನ್ನುವ ಬಡತನ. ಪಂಚಮಿ ಹಬ್ಬಕ್ಕೆ ಹೊಸ ಅಂಗಿ ಬೇಕೆಂಬ ಹೆಬ್ಬಯಕೆಯನ್ನು ತಾಯಿಯ ಮುಂದಿಟ್ಟೆ. ಆಗ ಅದು ನನಗೆ ಮಹತ್ತರ ಆಸೆಯೆನಿಸಿತ್ತು. ಅವಳಿಗೆ ಅದು ತುಂಬ ಪೇಚಿಗೆ ಸಿಲುಕಿಸಿರಬಹುದು. ಏಕೆಂದರೆ ಹಬ್ಬಕ್ಕೆ ಬೇಕಾಗುವ ಬೆಲ್ಲ ಬೇಳೆ ಹೊಂದಿಸಿಕೊಳ್ಳುವ ಚಿಂತೆಯಲ್ಲಿದ್ದ ಅವಳಿಗೆ ಅದು ನುಂಗಲಾರದ ತುತ್ತಾಯಿತು. ನಿಜ ಹೇಳಬೇಕೆಂದರೆ ಯಾವ ಹಬ್ಬ ಹರಿದಿನಗಳಲ್ಲಿ ಹೊಸಬಟ್ಟೆ ಕೇಳಲಾರದ ಪರಿಪಾಠ ನಮ್ಮೆಲ್ಲರಿಗೆ ವಂಶಪಾರಂಪರ್ಯವಾಗಿ ರೂಢಿಯಾಗಿಯೇ ಬಿಟ್ಟಿತ್ತು. ಅಂಥದರಲ್ಲಿ ಆ ಹಬ್ಬಕ್ಕೆ ಅಂಗಿ ಕೇಳಿಬಿಟ್ಟೆ.

1950ರಲ್ಲಿ ಏಳನೆಯ ತರಗತಿ ಪರೀಕ್ಷೆ ಪಾಸಾದ ನನಗೆ ಹಳ್ಳಿಯಿಂದ ಜಿಲ್ಲಾಸ್ಥಳದಲ್ಲಿದ್ದ ಮಾಧ್ಯಮಿಕ ಶಾಲೆ ಸೇರುವ ಬಯಕೆ ಈಡೇರದೆ ಮನೆಯಲ್ಲಿದ್ದ ಒಂದು ಎಮ್ಮೆ ಕಾಯ್ದುಕೊಂಡು ಬರುವುದು ಉದ್ಯೋಗವಾಗಿತ್ತು. - ಎಮ್ಮೆ ಮೇಯಿಸಿಕೊಂಡು ಬರುವಾಗ ಒಂದು ಗೋಣಿಚೀಲ ತುಂಬ ಹುಲ್ಲು ತರುವುದು, ಅದನ್ನು ತಾಯಿ ರಾತ್ರಿಯಲ್ಲಿ ಅದಕ್ಕೆ ತಿನ್ನಲು ಒದಗಿಸಿ ಬಳಿಕ ಪೇಟೆಗೆ ಕೊಡುವ ಅದರ ಹಾಲನ್ನು ಮಾರಿ ಬರುವ 'ಎರಡು ಆಣೆ' ಸಂಗ್ರಹಿಸಿ ಹೊಸ ಅಂಗಿಕೊಂಡುಕೊಳ್ಳುವುದು ಎಂದು ಯೋಚಿಸಿದೆ. ಹೊಸ ಅಂಗಿ ಕೊಂಡುಕೊಳ್ಳುವ ಹುರುಪಿನಲ್ಲಿ ಹುಲ್ಲು ತರಲು ಆರಂಭಿಸಿದೆ. ಹೀಗೆ ಮೂರು ರೂಪಾಯಿ ಎಂಟಾಣೆ (ಐವತ್ತು ಪೈಸೆ) ಕೂಡಿಸಿಕೊಂಡು ನಮ್ಮೂರಲ್ಲಿಯ ಶಿವಯೋಗೆಪ್ಪ ಕಲ್ಯಾಣಶೆಟ್ಟಿಯವರ ಜವಳಿ ಅಂಗಡಿಗೆ ಹೋದೆ. ಅವರು ಕಾಯಕ ನಿಷ್ಠರು. ಬಟ್ಟೆಗೆ ಕೊಡಬೇಕಾದ ಹಣದಲ್ಲಿ ಒಂದು ದುಡ್ಡು ಕಡಿಮೆ ಇದ್ದರೂ "ಅಂಗಡಿ ಕಟ್ಟೆ ಇಳಿ" ಎಂದು ಬೈಯುತ್ತಿದ್ದರು. ನನಗೆ- "ಎಷ್ಟು ರೊಕ್ಕಾ ತಂದಿಯೋ" ಎಂದು ಕೇಳಿದರು. ನಾನು ಅಂಜುತ್ತ ಕೈ ಬಿಚ್ಚಿ ದುಡ್ಡು ತೋರಿಸಿದೆ. ಅಷ್ಟನ್ನು ತೆಗೆದುಕೊಂಡು ಹೆಚ್ಚುಕಡಿಮೆ ಅನ್ನದೆ ನಸುನಕ್ಕು ಒಂದು ಮಾಂಜರಪಾಟ (ಅಗ್ಗದ ಬಿಳಿ ಅರಿವೆ) ಅರ್ಧ ತೋಳಿನ ಅಂಗಿ ಕೊಟ್ಟರು.

ಆಗ ನನಗೆ ಅತೀವ ಸಂತೋಷವಾಯಿತು. ಅಂದಿನ ನನ್ನ ನಾಗಪಂಚಮಿ ಹಬ್ಬ ಅದ್ದೂರಿಯಿಂದ ಆಯಿತೆನ್ನುವಂತೆ ಊರಲ್ಲಿಯ ದೊಡ್ಡ ದೊಡ್ಡ ಜೋಕಾಲಿಗಳಲ್ಲೆಲ್ಲ ಜೀಕಿಕೊಂಡೆ. ಮುಂದಿನ ಜೀವನದಲ್ಲಿಯ ಭಗೀರಥ ಪ್ರಯತ್ನದಿಂದ ಚಿಂಚೋಳಿ ಸರಕಾರಿ ಜೂನಿಯರ್ ಕಾಲೇಜಿನಲ್ಲಿ ಉಪನ್ಯಾಸಕನಾಗಿ ಸೇವೆಸಲ್ಲಿಸಿ ನಿವೃತ್ತಿಹೊಂದಿ ಈಗ ಕಿರಿಯ ಮಗ ಮಹೇಶನೊಂದಿಗೆ ಮುಂಬಯಿಯಲ್ಲಿ ವಾಸಿಸುತ್ತಲಿದ್ದೇನೆ.

ಆದರೆ ಬಾಲ್ಯದ ದಿನಗಳ ನಾಗರ ಪಂಚಮಿಯ ನೆನಪು ಇನ್ನೂ ಮನದಲ್ಲಿ ಹಸಿರಾಗಿದೆ.

• ಶಿವಲಿಂಗ ಕರಜಗಿ, ಲೋಣಿ

# ಬಿಂದು

ನನ್ನ ಬಾಲ್ಯದಲ್ಲಿ ತಾಯಿಯ ತವರಿನ ಕಡೆಯಿಂದ ನನಗೆ ಬಹಳ ಹತ್ತಿರದವರೆಂದರೆ ತಾಯಿಯ ಅಣ್ಣ, ಬೀರೂರಿನಲ್ಲಿದ್ದ ನಾಗಪ್ಪ ಮಾವಯ್ಯ. ಅವರಿಗೂ ನಾನೆಂದರೆ ತುಂಬ ಅಕ್ಕರೆ. ಶಾಲೆಗೆ ರಜೆ ಬಂದಾಗ ಅಮ್ಮನೊಡನೆ ಹಿಂಬಾಲಕರಾಗಿ ನಾನೂ ನನ್ನ ತಮ್ಮ ರಾಘುವೂ ಅವರಲ್ಲಿಗೆ ಹೋಗುತ್ತಿದ್ದೆವು. ಮಾವಯ್ಯನ ಮನೆ ತುಂಬ ದೊಡ್ಡದು. ಪ್ರಶಸ್ತವಾದ ಪಡಸಾಲೆ, ವಿಶಾಲವಾದ ಅಡಿಗೆಮನೆ, ವಿಸ್ತಾರವಾದ ಹಿತ್ತಲು,ಬಾವಿ, ದೇವರಪೂಜೆಗೆ ಅಗತ್ಯವಾದ ಹೂಗಿಡಗಳು, ಕೊಟ್ಟಿಗೆ ತುಂಬ ದನಕರುಗಳು, ಎಲ್ಲ ಕಡೆ ನಮ್ಮ ಓಡಾಟ. ಸುತ್ತ ಎತ್ತರವಾದ ಗೋಡೆಯ ರಕ್ಷೆಯಿದ್ದುದರಿಂದ ಹಿರಿಯರ ಆಕ್ಷೇಪಣೆಯೂ ಇರಲಿಲ್ಲ.

ಮಾವಯ್ಯನಿಗೆ ಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿ. ಕುಮಾರವ್ಯಾಸ ಭಾರತ, ಸೋಮೇಶ್ವರ ಶತಕ ಮೊದಲಾದವುಗಳು ಬಾಯ್ತುದಿಯಲ್ಲಿದ್ದವು. ಅನೇಕ ಕೀರ್ತನೆ, ವಚನಗಳು ಕಂಠಪಾಠವಾಗಿದ್ದವು. ಅವರ ಆಫೀಸು ಕೋಣೆಯಲ್ಲಿದ್ದ ಎರಡು ಬೀರುಗಳ ತುಂಬ ಹಳಗನ್ನಡ, ನಡುಗನ್ನಡ, ಹೊಸಗನ್ನಡಗಳ ಕಾವ್ಯಗ್ರಂಥಗಳಿದ್ದವು. ಖ್ಯಾತ ಸಾಹಿತಿಗಳ ಕಥೆ, ಕಾದಂಬರಿಗಳೂ ಹೊಸದಾಗಿ ಸೇರ್ಪಡೆಯಾಗುತ್ತಿದ್ದವು. ಎಲ್ಲ ಪುಸ್ತಕಗಳಿಗೂ ರಟ್ಟು ಹಾಕಿ ಅಕಾರಾದಿಯಾಗಿ ಜೋಡಿಸಿ ಅಚ್ಚುಕಟ್ಟಾಗಿ ಇರಿಸಿಕೊಂಡಿದ್ದರು.

ಬೀರೂರಿಗೆ ಹೋದಾಗಲೆಲ್ಲ ಹೆಚ್ಚಿನ ಹೊತ್ತು ಮಾವಯ್ಯನ ಜೊತೆಯಲ್ಲೇ ಇರುತ್ತಿದ್ದೆ. ನನ್ನ ಓದಿನ ಆಸಕ್ತಿಯನ್ನರಿತು ಅವರು ಬೀರುವಿನಿಂದ ಒಂದೊಂದೇ ಪುಸ್ತಕವನ್ನು ನನ್ನ ಕೈಲಿಡುತ್ತಿದ್ದರು. ಓದಿ ಜೋಪಾನವಾಗಿ ಹಿಂತಿರುಗಿಸುತ್ತಿದ್ದಂತೆ ಮತ್ತೊಂದು ಕೃತಿ ನನ್ನ ಕೈಗೆ ಬರುತ್ತಿತ್ತು. ಮಾವಯ್ಯ ನನ್ನೊಡನೆ ಏನಾದರೂ ಬುದ್ಧಿ ಮಾತನ್ನು ಪ್ರಾಸಂಗಿಕವಾಗಿ ಹೇಳುತ್ತಿದ್ದರು. ನನ್ನ ನೆನಪಿನಲ್ಲಿ ಈಗಲೂ ಹಚ್ಚ ಹಸುರಾಗಿ ಉಳಿದಿರುವ ಒಂದು ಘಟನೆ ಅವರ ಮಾತಿನಲ್ಲೇ ಹೀಗಿದೆ:

"ನಾನು ಹನ್ನೆರಡು ವರ್ಷದ ಬಾಲಕನಾಗಿದ್ದಾಗ ಅಜ್ಜಿ ಎಳ್ಳೆಣ್ಣೆಯನ್ನು ತರಲು ನನ್ನನ್ನು ಅಂಗಡಿಗೆ ಕಳಿಸಿದಳು. ಕೊಳ್ಳಲು ದುಡ್ಡನ್ನೂ ಎಣ್ಣೆ ಹಾಕಿಸಿಕೊಳ್ಳಲು ಒಂದು ಗಿಂಡಿಯನ್ನೂ ಕೊಟ್ಟಳು. ಎಣ್ಣೆಯ ಅಳತೆ ಗಿಂಡಿಯ ಕಂಠದವರೆಗೆ ಎಂದು ತೋರಿಸಿದಳು. ನಕಾಸೆಯ ಭಾಗವಾಗಿ ಅಲ್ಲಿ ಒಂದು ಗೀಚುಗೆರೆಯೂ ಇತ್ತು. ಅಂಗಡಿಯಲ್ಲಿ ಎಣ್ಣೆ ಹಾಕಿಸಿಕೊಳ್ಳುವಾಗ ನಿಗದಿತ ಅಳತೆಗಿಂತ ನಾಲ್ಕೈದು ಚಮಚ ಹೆಚ್ಚಿಗೆ ಎಣ್ಣೆ ಗಿಂಡಿ ಸೇರಿತು. ನಾನು ಅದನ್ನು ಗಮನಿಸಿದೆ. ಆದರೆ ಹೇಳಹೋಗಲಿಲ್ಲ. ಸುಮ್ಮನೆ ಬಂದುಬಿಟ್ಟೆ. ದಾರಿಯಲ್ಲಿ ಸಣ್ಣ ಗುಂಡಿಯೊಂದರಲ್ಲಿ ಕಾಲಿಟ್ಟು ಎಡವಿದೆ. ಹೇಗೋ ಸಾವರಿಸಿಕೊಂಡು ಎಣ್ಣೆಯ ಗಿಂಡಿಯನ್ನು ಬೀಳದಂತೆ ಜೋಪಾನ ಮಾಡಿದ್ದೇ ಹೆಚ್ಚು. ಮುಂದೆ ಹೋದಾಗ ನೋಡಿದರೆ ಹೆಚ್ಚಿಗೆ ಬಂದ ಎಣ್ಣೆ ಮಾತ್ರ ಚೆಲ್ಲಿಹೋಗಿತ್ತು. ನನಗೆ ಬರಬೇಕಾದ ಅಳತೆಯಷ್ಟು ಎಣ್ಣೆ ಸುರಕ್ಷಿತವಾಗಿ ಉಳಿದಿತ್ತು.

ನಮ್ಮ ಪಾಲಿನದು ಮಾತ್ರವೇ ನಮಗೆ ಲಭ್ಯವಾಗುತ್ತದೆ. ಬೇರೆಯವರು ಹೆಚ್ಚಿಗೆ ಕೊಟ್ಟರೂ ಅದು ನಮ್ಮಿಂದ ಜಾರಿ ಹೋಗುತ್ತದೆ ಎಂಬ ಸತ್ಯವನ್ನು ಆಗ ತಿಳಿದುಕೊಂಡೆ" ಮಾವಯ್ಯನ ಅನುಭವ ನಮ್ಮೆಲ್ಲರಿಗೂ ಹೊಸದೊಂದು ಸತ್ಯವನ್ನೇ ತೋರಿದೆ ಎಂಬುದು ನನ್ನ ನಂಬಿಕೆಯಾಗಿದೆ.

• ಡಾ. ಎಚ್.ಎಸ್. ಸುಜಾತಾ

# ಚಿಂತನಶೀಲರ ನುಡಿಮುತ್ತುಗಳು

**ಪ್ರ**ಸಕ್ತ ಲೇಖನದಲ್ಲಿ ಬದುಕಿನ ಹಲವಾರು ವಿಷಯಗಳಲ್ಲಿ ನಮ್ಮ ಹಿರಿಯರು ಅನುಭವಿಸಿದ ಸಿಹಿ ಕಹಿಯನ್ನು, ತಮ್ಮದೇ ಆದ ಧಾಟಿಯಲ್ಲಿ ಹೇಳಿರುವುದನ್ನು ನಿಮ್ಮೊಂದಿಗೆ ಹಂಚಿಕೊಳ್ಳಲಾಗಿದೆ. ಅಂಥಹ ಅನುಭವ ಮಂಟಪದಿಂದ ಆಯ್ದ ವಿಭಿನ್ನ ವಿಷಯಗಳಿಂದ ಲಾಭ ಪಡೆದು ನಮ್ಮ ಬದುಕನ್ನು ಹಸನು ಮಾಡಿಕೊಳ್ಳುವುದು ಎಲ್ಲರಿಗೂ ಹಿತವೆನಿಸುತ್ತದೆ.

*****

**ಬೆಳಕು**

ಬೆಳಕು ಮತ್ತು ಮಾಧುರ್ಯಗಳ ಸಂಗಮವೇ ಸಂಸ್ಕೃತಿ ಎಂದು ಮ್ಯಾಥ್ಯೂ ಆರ್ನಾಲ್ಡ್ ಹೇಳಿದ. ಈ ಬೆಳಕು ಬುದ್ಧಿಯ ಬೆಳಕು, ಮಾಧುರ್ಯ ಹೃದಯಮಾಧುರ್ಯ.

ಬೆಳಕಿನಲ್ಲಿ ಮೌಢ್ಯವಿರುವುದು ಸಾಧ್ಯವೇ ಇಲ್ಲ. ಏಕೆಂದರೆ ಮೌಢ್ಯವನ್ನು ದೂರಮಾಡುವುದೇ ಬೆಳಕು, ಜ್ಞಾನದ ಬೆಳಕು. ಜರ್ಮನಿಯ ಮಹಾಕವಿ ಗಯಟೆ, ಮಟಮಟ ಮಧ್ಯಾಹ್ನ ಪ್ರಾಣಬಿಡುವ ಹೊತ್ತಿನಲ್ಲಿ ಬೆಳಕು, ಇನ್ನೂ ಬೆಳಕು ಎಂದು ಕೂಗಿಕೊಂಡನಂತೆ. ಅದೇ ಬೆಳಕಿನ ಮಹತ್ವ.

**ಚೈತ್ರರಥ**

ಕಠೋಪನಿಷತ್ತಿನ ವರ್ಣನೆ

"ಆತ್ಮಾನಾಂ ರಥಿನಂ ವಿದ್ಧಿ ಶರೀರಂ ರಥಮೇವತು

ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ

ಇಂದ್ರಿಯಾಣಿ ಹಯಾನ್ಯಾಹುರ್ವಿಷಯಾಂ ಸ್ತೇಷು ಗೋಚರಾನ್

ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇ ತಾಹುರ್ಮನೀಷಿಣ||

ಯಸ್ತು ವಿಜ್ಞಾನವಾನ್ಭವತಿ ಯುಕ್ತೇನ ಮನಸಾ ಸದಾ

ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವಸಾರಥೇ||

ಆತ್ಮವನ್ನು ರಥಿ ಎಂದು, ಶರೀರವನ್ನು ರಥವೆಂದು ಬುದ್ಧಿಯನ್ನು ಸಾರಥಿ ಎಂದು, ಮನಸ್ಸನ್ನು ಕಡಿವಾಣವೆಂದೂ ತಿಳಿ. ಇಂದ್ರಿಯಗಳು ಕುದುರೆಗಳೆಂದು ಹೇಳುತ್ತಾರೆ. ವಿಷಯಗಳೇ ಅವುಗಳ ಮಾರ್ಗಗಳು. ಶರೀರ ಇಂದ್ರಿಯ, ಮನಸ್ಸು ಇವುಗಳಿಂದ ಕೂಡಿದ ಆತ್ಮನನ್ನು ಸಂಸಾರಿ ಎಂದು ವಿವೇಕಿಗಳು ಹೇಳುತ್ತಾರೆ. ಯಾವನು ಯಾವಾಗಲೂ ಅಯುಕ್ತನಾದ ಮನಸ್ಸಿನಿಂದ ಕೂಡಿದವನೂ ಅನಿಪುಣನಾಗಿರುವನೋ ಅವನ ಇಂದ್ರಿಯಗಳು ಸಾರಥಿಯ ತುಂಟ ಕುದುರೆಗಳಂತೆ ವಶವಾಗುವುದಿಲ್ಲ. ಯುಕ್ತವಾದ ಮನಸ್ಸಿನಿಂದ ಕೂಡಿದವನ ಇಂದ್ರಿಯಗಳು ಸಾರಥಿಯ ಒಳ್ಳೆಯ ಕುದುರೆಗಳಂತೆ ವಶವಾಗುತ್ತವೆ.

**ಪಶ್ಯತೋಹರ**

ಪಾಣಿನಿ ತನ್ನ ವ್ಯಾಕರಣದಲ್ಲಿ ಸೂತ್ರವೊಂದಕ್ಕೆ ಉದಾಹರಣೆ ಕೊಡುತ್ತಾ ಪಶ್ಯತೋಹರವೆಂಬ ಶಬ್ದ ಬಳಸಿದ್ದಾನೆ.

ಪಶ್ಯತೋಹರ ಎಂದರೆ ಕಣ್ಣೆದುರಿಗೇ ಕಳ್ಳತನ ಮಾಡುವ ಖದೀಮ. ಹಠಯೋಗಿಗಳ ಪ್ರಕಾರ ತಲೆಯಲ್ಲಿರುವ 'ಸಹಸ್ರಾರ' ದಲ್ಲಿ ಗೌರಿಶಂಕರ ಹರ ಇರುತ್ತಾನಂತೆ. ಕುಂಡಲಿನೀ ಸಾಧನೆಯಿಂದ ಅವನನ್ನು ಅಲ್ಲಿ ಕಾಣಬಹುದಂತೆ.

ವಿಚಿತ್ರವೆಂದರೆ ನಮ್ಮೆಲ್ಲರಲ್ಲೂ ತಲೆಯಲ್ಲಿ ಮಹದೇವಹರನ ಬದಲಾಗಿ, ಪಶ್ಯತೋಹರನಿದ್ದಾನೆ. ಯಜುರ್ವೇದದ ಶತರುದ್ರೀಯದಲ್ಲಿ 'ತಸ್ಕರಾಣಾಂ ಪತಯೇ ನಮೋನಮಃ' ಎಂಬ ಶ್ರುತಿ ವಾಕ್ಯವಿದೆ.

(ಸಂಗ್ರಹ) ವೇಣುಗೋಪಾಲ ಮೂರ್ತಿ

# ತಾಳಿಕೋಟೆ ಕದನದ ಕರ್ಮಕಥೆ

ಸಂಪತ್ತು ಸಮೃದ್ಧಿ ವೈಭವದಿಂದ ಮೆರೆದ ವಿಜಯನಗರ ಸಾಮ್ರಾಜ್ಯವು ತಾಳಿಕೋಟೆ ಕದನದಲ್ಲಿ ನಿರ್ನಾಮವಾಯಿತು.

ಭಾರತದಲ್ಲಿ ನಡೆದ ಹಲವಾರು ಕದನಗಳು ರಾಜ್ಯ ಸಾಮ್ರಾಜ್ಯಗಳ ಅಸ್ತಿತ್ವವನ್ನೇ ಅಸ್ಥಿರಗೊಳಿಸಿದವು. ರಾಜಕೀಯ ಸ್ಥಿತಿಯನ್ನೇ ಮಾರ್ಪಡಿಸಿದವು. ದೆಹಲಿಯ ದೊರೆ ಪೃಥ್ವೀರಾಜನನ್ನು ತರೈನ್ ಕದನದಲ್ಲಿ ಸೋಲಿಸಿದ ಮಹಮದ್ ಘೋರಿ ಮೊಟ್ಟ ಮೊದಲು ಭಾರತದಲ್ಲಿ ಮುಸಲ್ಮಾನ ಸಾಮ್ರಾಜ್ಯ ಕಟ್ಟಲು ಅಡಿಗಲ್ಲನ್ನಿರಿಸಿದ. ನಂತರ ದೆಹಲಿ ಸುಲ್ತಾನರ ರಾಜ್ಯವು ಉತ್ತರ ಭಾರತದಲ್ಲಿ ವಿಸ್ತರಿಸಿಕೊಳ್ಳುತ್ತಿರುವಂತೆ ದಕ್ಷಿಣಕ್ಕೂ ದಾಪುಗಾಲು ಹಾಕಿತು. ಇವರ ಆಕ್ರಮಣವನ್ನು ಯಶಸ್ವಿಯಾಗಿ ಎದುರಿಸಿ ರಾಜ್ಯ ವಿಸ್ತರಿಸದಂತೆ ವಿಜಯನಗರ ಸಾಮ್ರಾಜ್ಯದ ಅರಸರು ತಡೆಗಟ್ಟಿದರು. ದಕ್ಷಿಣದ ಅತ್ಯಂತ ಬಲಿಷ್ಠವಾದ ಈ ಸಾಮ್ರಾಜ್ಯವು ಸಂಪತ್ತು ತುಂಬಿದ ಸಮೃದ್ಧವಾದ ನಾಡೆಂದು ಮೆರೆದಾಡುತ್ತಿತ್ತು.

-ಬಿ.ಎಸ್. ರಾಮಭಟ್ಟ

ವಿಜಯನಗರ ರಾಜ್ಯಸ್ಥಾಪನೆಯ ಕಾಲದಲ್ಲಿಯೇ ಹುಟ್ಟಿಕೊಂಡ ಬಹಮನಿರಾಜ್ಯವು ಮುಂದೆ ಕೆಲವೇ ವರ್ಷಗಳಲ್ಲಿ ಒಡೆದು ಹೋಗಿ ಐದು ಶಾಹಿ ರಾಜ್ಯಗಳಾದವು. ಇವೆಲ್ಲವೂ ವಿಜಯನಗರದ ಕಡುವೈರಿಗಳಾಗಿ ಸದಾ ಕಾದಾಟ ನಡೆಸುತ್ತಿದ್ದವು. ಹಾಗೆ ನೋಡಿದರೆ ವಿಜಯನಗರ ರಾಜ್ಯವು ಬಹಮನಿ ಸುಲ್ತಾನರಿಗೆ ಅನೇಕ ವೇಳೆ ನೆರವು ನೀಡಿತ್ತು. ರಾಮರಾಯನು ವಿಜಾಪುರದ ಆದಿಲಶಹನನ್ನು ತನ್ನ ದತ್ತು ಪುತ್ರನೆಂದು ಸ್ವೀಕರಿಸಿದ್ದನೆಂದೂ ಗೋವಳಕೊಂಡದಿಂದ ಓಡಿ ಬಂದಿದ್ದ ಇಬ್ರಾಹಿಂ ಕುತುಬ್‌ಶಹನಿಗೆ ರಾಮರಾಯನು ತನ್ನ ರಾಜ್ಯಧಾನಿಯಲ್ಲಿ ಏಳು ವರ್ಷಗಳ ಕಾಲ ಆಶ್ರಯ ನೀಡಿದ್ದನೆಂದು ಐತಿಹಾಸಿಕ ಗ್ರಂಥಗಳಲ್ಲಿ ಹೇಳಿದೆ.

## ಆಧಾರಗಳು

ವಿಜಯನಗರ ಹಾಗೂ ಬಹಮನಿ ರಾಜ್ಯಗಳ ನಡುವಿನ ತಾಳಿಕೋಟೆ ಕದನವನ್ನು ಕುರಿತು ಪರ್ಶಿಯನ್, ಉರ್ದು, ಕನ್ನಡ, ತೆಲುಗು ಮತ್ತು ಇಂಗ್ಲೀಷ್ ಸೇರಿದಂತೆ ಸುಮಾರು ಹತ್ತು ಭಾಷೆಗಳಲ್ಲಿ ಅನೇಕ ಗ್ರಂಥಗಳು ಪ್ರಕಟವಾಗಿವೆ. ಪ್ರವಾಸಿಗರ ಕಥನಗಳೂ ಸಹ ಉಪಯುಕ್ತ ಮಾಹಿತಿಯಾಗಿದೆ. ಇವುಗಳನ್ನು ಹೀಗೆ ಪಟ್ಟಿ ಮಾಡಬಹುದು.

1- ರಾಮರಾಜನ ಬಖೈರು. 2. ಗುಲ್‌ಶನ್ ಎ ಇಬ್ರಾಹಿಂ, 3) ಬುರ್ಹಾನ್ ಎ ಮಾಸಿರ್ 4. ತಾರೀಖ್ ಎ ಕುತ್ಬುಶಾಹಿ 5. ಶಬಾಕಾತ್ ಎ ಅಕ್ಬರಿ, 6. ಫಾದರ್ ಹೆರಾಸ್ 7. ಸೀಜರ್ ಫ್ರೆಡರಿಕ, 8. ರಾಬರ್ಟ ಸೀವೆಲ್ ಬರೆದಿರುವ 'ದಿ ಫರ್ಗಾಟನ್ ಎಂಪೈರ್'-9 ಎಸ್.ಬಿ. ಕೋಡದ 10. ಡಾ. ಎನ್. ವೆಂಕಟರಮಣಯ್ಯ 11. ಪ್ರೊ. ಸಿದ್ದಿಕಿ 12. ಡಾ. ಸಾಲೆತ್ತೋರೆ 13. ಜದುನಾಥ ಸರ್ಕಾರ್ 14. ಕೃಷ್ಣ ಕೊಲ್ಹಾರ ಕುಲಕರ್ಣಿ (ಲೇಖನ) 15. ವಿ.ಎನ್. ನಂಜುಂಡಸ್ವಾಮಿ

ಮುಂತಾದ ಗ್ರಂಥಗಳು ಹಾಗೂ ಇತಿಹಾಸಕಾರರು ತಾಳಿಕೋಟೆ ಕದನದ ಕುರಿತು ವಿಸ್ತಾರವಾಗಿ ನಿರೂಪಿಸಿದ್ದಾರೆ. ಅದರಲ್ಲಿಯೂ ಕುಲಕರ್ಣಿಯವರ ಲೇಖನ ಹಾಗೂ ಈಚೆಗೆ ಬರೆದ ಎ.ಎನ್. ನಂಜುಂಡಸ್ವಾಮಿಯವರ ಕೃತಿಯು ತುಂಬಾ ಉಪಯುಕ್ತವಾಗಿವೆ. ಈ ಎಲ್ಲ ಆಧಾರಗಳಿಂದ ಮಾಹಿತಿ ಸಂಗ್ರಹಿಸಿ ಈ ಲೇಖನದಲ್ಲಿ ನಿರೂಪಿಸಲಾಗಿದೆ. ತಾಳಿಕೋಟೆ ಎಷ್ಟು ಭೀಕರವಾಗಿತ್ತೋ ಅಷ್ಟೇ ವಿವಾದಾಸ್ಪದವಾಗಿದೆ. ಈ ಬಗ್ಗೆ ಇತಿಹಾಸಕಾರರ ಬರವಣಿಗೆಯಲ್ಲಿ ಒಮ್ಮತವಿಲ್ಲ. ಸಮಗ್ರ ಮಾಹಿತಿಗಳೂ ಸಹ ತೊಡಕಾಗಿದೆ ಕಗ್ಗಂಟಾಗಿದೆ.

ತಾಳಿಕೋಟೆ ಕದನ ಕಾಲದ ವಿಜಯ ನಗರ ಸಾಮ್ರಾಜ್ಯ.

## ಯುದ್ಧಕ್ಕೆ ಸಿದ್ಧತೆ

ವಿಜಯನಗರದ ಅರಸರೊಂದಿಗೆ ಯುದ್ಧ ಮಾಡಿ ಹಲವು ಬಾರಿ ಸೋತ ಶಾಹಿ ರಾಜ್ಯಗಳು ಯುದ್ಧದಲ್ಲಿ ವಿಜಯನಗರವನ್ನು ಸಂಪೂರ್ಣವಾಗಿ ಸೋಲಿಸಿ ಧ್ವಂಸ ಮಾಡಬೇಕೆಂದು ನಿರ್ಧರಿಸಿದವು. ಇದಕ್ಕಾಗಿ ಅಹಮದ್‌ನಗರದ ಹುಸೇನ್ ನಿಜಾಂ ಶಹ, ಗೋವಳಕೊಂಡದ ಇಬ್ರಾಹಿಂ ಕುತುಬಶಹ, ಬಿಜಾಪುರದ ಅಲಿ ಆದಿಲ್‌ಶಹ ಹಾಗೂ ಬೀದರಿನ ಬರೀದ್ ಶಹನು ಸೇರಿ ಒಂದು ಸೈನಿಕ ಒಕ್ಕೂಟವನ್ನು ರಚಿಸಿಕೊಂಡರು. ಕಾದಾಟ ನಡೆಸಲು ಅತ್ಯಂತ ಪ್ರಬಲವಾದ ಶಸ್ತ್ರಸಜ್ಜಿತ ಸೇನೆಯನ್ನು ಸಜ್ಜುಗೊಳಿಸಿದರು.

ರಾಮರಾಯನು ವಿಜಯನಗರದ ಆಡಳಿತಗಾರನಾಗಿದ್ದನು. ಸದಾಶಿವರಾಯನು ಹೆಸರಿಗೆ ಮಾತ್ರ ದೊರೆಯಾಗಿದ್ದನು. ಗೂಢಚಾರರಿಂದ ಸುದ್ದಿ ತಿಳಿದ ರಾಮರಾಯನು ಸಹ ಯುದ್ಧ ಸಿದ್ಧತೆ ನಡೆಸಿದನು. ಅವನ ಆದೇಶದಂತೆ ಕೆಳದಿಯ ಸಂಕಣ್ಣ ನಾಯಕನೂ ಸೇರಿದಂತೆ ರಾಜ್ಯದ ಮಂಡಲೇಶ್ವರರು, ಪಾಳೆಯಗಾರರು ಹಾಗೂ ಡಣಾಯಕರು ತಮ್ಮ ಸೈನ್ಯವನ್ನ ವಿಜಯನಗರದ ಸೈನ್ಯದೊಂದಿಗೆ ಸೇರಿಸಿಕೊಂಡರು. ಈ ಎಲ್ಲಾ ಸೇನಾಬಲವನ್ನು ಪರೀಶೀಲಿಸಿದ ರಾಮರಾಯನು ಯುದ್ಧಕ್ಕೆ ಸನ್ನದ್ಧನಾಗಿದ್ದನು. ಅಷ್ಟರಲ್ಲಿ ಸುಲ್ತಾನರ ಒಕ್ಕೂಟದ ಸೈನ್ಯವು ರಾಜ್ಯದ ಗಡಿಯತ್ತ ಧಾವಿಸಿ ಬರುತ್ತಿರುವುದು ರಾಮರಾಯನಿಗೆ ತಿಳಿಯಿತು. ತಡಮಾಡದೆ ರಾಮರಾಯನು ಕೃಷ್ಣಾನದಿ ದಡದ ತಾವರಗೇರಿ ಎಂಬಲ್ಲಿ ಸೇನಾ ಶಿಬಿರವನ್ನು ಸ್ಥಾಪಿಸಿದನು. ಶತ್ರು ಸೈನ್ಯವು ಕೃಷ್ಣಾನದಿಯನ್ನು ದಾಟಿ ಬಾರದಂತೆ ಇಂಗಳಗಿಯ ಸಂಗಮದ ದಡದಲ್ಲಿ ಎಂಟು ಮೈಲಿ ಉದ್ದದ ಕಲ್ಲಿನಗೋಡೆಯನ್ನು ನಿರ್ಮಿಸಲಾಯಿತು.

ಸುಲ್ತಾನರ ಸೈನ್ಯವು ಎಲ್ಲಿಯೂ ನದಿ ದಾಟದಂತೆ ತಿರುಮಲ ಮತ್ತು ವೆಂಕಟಾದ್ರಿಯರು ಹತ್ತು ಸಾವಿರ ಸೈನಿಕರೊಂದಿಗೆ ಕಟ್ಟೆಚ್ಚರ ವಹಿಸಿದ್ದರು. ರಾಜಧಾನಿ ಹಾಗೂ ಅರಮನೆಯ ರಕ್ಷಣೆಗೆ ಪ್ರತ್ಯೇಕ ಸೈನ್ಯವನ್ನು ನೇಮಿಸಲಾಗಿತ್ತು.

## ಸೈನ್ಯಬಲ

ವಿಜಯನಗರದ ಸೈನ್ಯದಲ್ಲಿ 60 ಸಾವಿರ ರಾವುತರು, ಒಂದು ಲಕ್ಷ ಕಾಲಾಳುಗಳು, ಒಂದು ಸಾವಿರ ಆನೆಗಳು, ಎರಡು ಸಾವಿರ ಮುಸಲ್ಮಾನ ಬಿಲ್ಲುಗಾರರಿದ್ದರು. ಇದರೊಂದಿಗೆ ಆಕಾಶಬಾಣಗಳು, ಹಾಗೂ ಫಿರಂಗಿದಳವೂ ಸಜ್ಜಾಗಿತ್ತು.

ಸುಲ್ತಾನರ ಒಕ್ಕೂಟದ ಸೈನ್ಯದಲ್ಲಿ ಐವತ್ತು ಸಾವಿರ ರಾವುತರು, ಮತ್ತು ಕಾಲಾಳುಗಳು, ವಿವಿಧ ಮಾದರಿಯ ಆರುನೂರಕ್ಕೂ ಹೆಚ್ಚಿನ ತೋಪುಗಳು ಹಾಗೂ ಎರಡು ಸಾವಿರ ಬಿಲ್ಲಾಳುಗಳಿದ್ದರು ಎಂದು ಹೇಳಲಾಗಿದೆ.

## ಯುದ್ಧ ನಡೆದ ಸ್ಥಳ:

ವಿಜಯನಗರದ ನಿರ್ಣಾಯಕ ಯುದ್ಧವು ಎಲ್ಲಿ ನಡೆಯಿತು ಎಂಬುದರ ಬಗ್ಗೆ ಭಿನ್ನಾಭಿಪ್ರಾಯವಿದೆ. ಸಾಮಾನ್ಯವಾಗಿ ಇದು ತಾಳಿಕೋಟೆ ಎಂಬಲ್ಲಿ ನಡೆಯಿತೆಂದು ಹೇಳಲಾಗಿದೆ. ಫಾದರ್ ಹೆರಾಸನು ಇದು ರಕ್ಕಸಗಿ ತಂಗಡಿಯಲ್ಲಿ ನಡೆಯಿತೆಂದು ವರದಿ ಮಾಡಿದ್ದರೆ, ಇದು ಬಾಯಾಪುರ ಮತ್ತು ಬೋಗಾಪುರದಲ್ಲಿ ನಡೆದ ಯುದ್ಧವೆಂದು ರಾಬರ್ಟ್ ಸೀವೆಲ್ಲನ ಅಭಿಪ್ರಾಯವಿದೆ. ಕೃಷ್ಣಾ ಮತ್ತು ಮಲಪ್ರಭಾ ಸಂಗಮದ ಬಳಿ ನಡೆದಿರಬೇಕೆಂದು ಡಾ. ಎನ್. ವೆಂಕಟರಮಣಯ್ಯನವರು ಉಲ್ಲೇಖಿಸಿದ್ದಾರೆ. ಬನ್ನಿ ಹಟ್ಟಿಯು ಕದನ ನಡೆದ ಸ್ಥಳವೆಂದು ತೇರವಾಡಿಯವರು ನಿರ್ಣಯಿಸಿದ್ದಾರೆ. ಕೃಷ್ಣಾನದಿ ತೀರದ ಒಂದೆಡೆ ರಣಭೂಮಿಯೆಂದು ಸೈಯದ್ ಅಲಿ ಝುಬೈರಿಯವರು ಹೇಳಿದ್ದಾರೆ. ಹುಕ್ಕೇರಿ ನದಿಯ ಸಮೀಪವೆಂದು ಜಿ. ಕ್ಯಾಂಪ್ ಬೆಲ್ ಸೂಚಿಸಿದ್ದಾನೆ. ಇಂಗಳಗಿ ಮತ್ತು ಮುದಗಲ್ ಸಮೀಪದ ಸ್ಥಳವೆಂದು ಜದುನಾಥ ಸರ್ಕಾರ್‌ರವರು ಹೇಳಿದ್ದಾರೆ. ಇಂಗಳಗಿ, ತೊಂಡಿಹಾಳ ಮತ್ತು ಇಸ್ಲಾಂ ಪುರಗಳು ಯುದ್ಧ ಭೂಮಿ ಎಂದು ಸ್ಥಳೀಯರ ಅಭಿಪ್ರಾಯವಾಗಿದೆ. ಹೀಗೆ ಯುದ್ಧ ನಡೆದ ಸ್ಥಳದ ಕುರಿತು ಖಚಿತವಾಗಿ ಯಾವುದೇ ಒಂದು ನಿರ್ಣಯಕ್ಕೆ ಬರಲು ಸಾಧ್ಯವಾಗಿಲ್ಲ.

## ಸೇನಾಧಿಪತ್ಯ

ಸುಲ್ತಾನರ ಸೈನಿಕ ಒಕ್ಕೂಟದಲ್ಲಿ ಮಹಾವೀರರೆನಿಸಿದ ದಂಡನಾಯಕರಿದ್ದರು. ವಿಜಾಪುರದ ಸೈನ್ಯಕ್ಕೆ ಕಷ್ನಾರ್‌ಖಾನ್, ಅಹಮದ್ ನಗರದ ಪಡೆಗೆ ಮೌಲಾನಾ ಇನಾಯಿತುಲ್ಲನೂ ಗೋಲ್ಕೊಂಡದ ಸೇನೆಗೆ ಮುಸ್ತಫಖಾನನು ಸೇನಾಪತಿಗಳಾಗಿದ್ದರು. ಇವರಲ್ಲದೆ ಇಖಲಾಸಖಾನ್, ಕಿಶವರಖಾನ್, ರೂಮಿಖಾನ್ ಮುಂತಾದ ವೀರ ಯೋಧರಿದ್ದರು.

ವಿಜಯನಗರ ಸೈನ್ಯದಲ್ಲಿ ಸಮರ್ಥ ಸೇನಾಧಿಪತಿಗಳ ಕೊರತೆ ಇತ್ತು. ಇಳಿವಯಸ್ಸಿನ ರಾಮರಾಯ (80) ತಿರುಮಲ (50) ಮತ್ತು ವೆಂಕಟಾದ್ರಿ (58) ಯು ಸೇನಾಪತಿಗಳಾಗಿದ್ದರು. ಹೊರಗಿನಿಂದ ಸೈನ್ಯವನ್ನು ತಂದ ಸಾಮಂತರು ತಾವೇ ಧಣಾಯಕರಾಗಿದ್ದರು.

## ವ್ಯೂಹ ರಚನೆ

ಸುಲ್ತಾನರ ಸೇನೆಯಲ್ಲಿ ಅತ್ಯಂತ ಸಮರ್ಥ ರೀತಿಯಲ್ಲಿ ವ್ಯೂಹ ರಚನೆಯನ್ನು ಮಾಡಲಾಗಿತ್ತು. ಗೋವಳಗೊಂಡದ ಸೇನೆಯು ಇಬ್ರಾಹಿಂ ಕುತುಬಶಹ ಹಾಗೂ ಸೇನಾಪತಿ ಮುಸ್ತಫಾಖಾನನೊಂದಿಗೆ ಎಡಭಾಗದಲ್ಲಿಯೂ ವಿಜಾಪುರದ ಸೇನೆಯು ಸುಲ್ತಾನನೊಂದಿಗೆ ಸೇನಾಪತಿ ಕಿಶವರ ಖಾನ ಲಾರಿಯ ನೇತೃತ್ವದಲ್ಲಿ ಬಲಭಾಗದಲ್ಲಿ ಹಾಗೂ ನಡುವೆ ಅಹಮದ್ ನಗರದ ಸೇನೆ ಸುಲ್ತಾನನೊಂದಿಗೆ ಸೇನಾಪತಿ ಇಲ್ಲಾಸಖಾನನ ನೇತೃತ್ವದಲ್ಲಿ ಸಜ್ಜಾಗಿತ್ತು. ಸೈನ್ಯದ ಮುಂಭಾಗದಲ್ಲಿ ಚಿಲೂಬಿರೂಮಿ ಖಾನನು 200 ಬೃಹದಾಕಾರವಾದ ತೋಪುಗಳನ್ನು ನೆಟ್ಟು



ತಾಳಿಕೋಟೆ ಯುದ್ಧಕಾಲದ ವಿಜಯನಗರದ ವಿಠಲ ಸ್ವಾಮಿ ದೇವಾಲಯ

ನಿಲ್ಲಿಸಿದನು. ಇದರ ಹಿಂಭಾಗದಲ್ಲಿ ಮಧ್ಯಮ ತರಗತಿಯ 200 ತೋಪುಗಳೂ ಇದರ ಹಿಂಭಾಗದಲ್ಲಿ ಝುಂಬಾರಕ ಎಂಬ ಸಣ್ಣ ಪ್ರಮಾಣದ ತಿರುಗಣೆ ತೋಪುಗಳನ್ನಿಡಲಾಗಿತ್ತು. ಫಿರಂಗಿ ಸಾಲಿನ ಎದುರು ಎರಡು ಸಹಸ್ರ ತುರ್ಕಿಯ ಅಶ್ವಾರೋಹಿಗಳು ಕಾದಾಟಕ್ಕೆ ನಿಂತಿದ್ದರು. ವಿಜಯನಗರದ ಸೈನ್ಯದಲ್ಲಿ ಇಂತಹ ಯೋಜಿತವ್ಯೂಹ ರಚನೆಯ ವಿವರ ತಿಳಿದುಬಂದಿಲ್ಲ. ಬಹುಶಃ ಎಡಬಲ ಪಾರ್ಶ್ವಗಳಲ್ಲಿ ತಿರುಮಲ ಮತ್ತು ವೆಂಕಟಾದ್ರಿಯೂ ನಡುವೆ ರಾಮರಾಯನು ಸೈನ್ಯದೊಂದಿಗೆ ಸಿದ್ಧವಾಗಿದ್ದನು. ಸಾಮಂತರ ಸೈನ್ಯವನ್ನು ರಣ ಕ್ಷೇತ್ರದ ಯಾವುದೋ ಭಾಗದಲ್ಲಿ ನಿಯೋಜಿಸಲಾಗಿತ್ತು.

## ಯುದ್ಧದ ಚಿತ್ರಣ

ತಾಳಿಕೋಟೆ ಯುದ್ಧವು 1565ರ ಜನವರಿ 25ರಂದು ಪ್ರಾರಂಭವಾಯಿತೆಂದು ಇತಿಹಾಸ ಗ್ರಂಥಗಳಲ್ಲಿದೆ. ರಾಮರಾಯನ ಸೈನಿಕರೇ ಮೊದಲು ಯುದ್ಧವನ್ನೂ ಆರಂಭಿಸಿದರು. ಆರಂಭದಲ್ಲಿ ಸಹಸ್ರಾರು ಶತ್ರು ಸೈನಿಕರನ್ನು ಕೊಂದೆಸೆದರು. ಆದರೂ ಶತ್ರುಪಡೆಯ ಅಶ್ವಾರೋಹಿಗಳು ಮುನ್ನುಗ್ಗಿ ವಿಜಯನಗರದ ಸೈನಿಕರನ್ನು ಅಪಾರ ಸಂಖ್ಯೆಯಲ್ಲಿ ಬಲಿತೆಗೆದುಕೊಂಡರು. ತಿರುಮಲನ ಮಗ ರಘುನಾಥನು ರಣರಂಗದಲ್ಲಿಯೇ ಸತ್ತು ಬಿದ್ದನು. ಆರಂಭದಲ್ಲಿಯೇ ಈ ಆಘಾತವನ್ನು ಕಂಡ ಸೈನಿಕರು ತತ್ತರಿಸಿದರು. ರೂಮಿಖಾನನು ಫಿರಂಗಿಗಳಲ್ಲಿ ತಾಮ್ರದ ನಾಣ್ಯಗಳನ್ನಿಟ್ಟು ಹಾರಿಸಲು ಆರಂಭಿಸಿದಾಗ ವಿಜಯನಗರದ 15 ಸಾವಿರ ಸೈನಿಕರು ಜೀವತೆತ್ತರು. ಫಿರಂಗಿಗಳ ಹೊಡೆತಕ್ಕೆ, ಬಂದೂಕುಗಳ ಗುಂಡಿಗೆ ವಿಜಯನಗರದ ಸೈನಿಕರು ತರಗೆಲೆಗಳಂತೆ ಉದುರಿ ಹೋದರು. ಇದರ ಮುಂದೆ ವಿಜಯನಗರದ ತೋಪುಗಳು ಮತ್ತು ಬಂದೂಕುಗಳು ನಿರರ್ಥಕವಾಯಿತು.

ತೋಪುಗಳ ಭಯಾನಕ ಸಪ್ಪಳ, ಉರಿಯುತ್ತಿರುವ ಬೆಂಕಿ, ಘೀಳಿಡುತ್ತಾ ನುಗ್ಗಿ ಬರುತ್ತಿರುವ ಮದಗಜಗಳು, ಕುದುರೆಗಳ ಝೇಂಕಾರದಿಂದ ರಣರಂಗದಲ್ಲಿ ಏನು ನಡೆಯುತ್ತಿದೆ ಎಂಬುದೇ ತಿಳಿಯದಾಗಿತ್ತು. ಇಂಥಹ ಭಯಾನಕ ಕೋಲಾಹಲದಲ್ಲಿ ರಾಮರಾಯನು ಪಲ್ಲಕ್ಕಿಯಲ್ಲಿ ಕುಳಿತು ರಣರಂಗಕ್ಕೆ ಪ್ರವೇಶಿಸಿದನು. ಇದ್ದಕ್ಕಿದ್ದಂತೆ ಒಂದು

ಮದದಾನೆಯು ಅವನ ಪಲ್ಲಕ್ಕಿಯ ಕಡೆ ನುಗ್ಗಿ ಬಂದಿತು. ಸೈನಿಕರು ಹೆದರಿ ಪಲ್ಲಕ್ಕಿಯನ್ನು ಅಲ್ಲಿಯೇ ಬಿಟ್ಟು ಓಡಿಹೋದರು.

## ಶಿರಚ್ಛೇದನ

ಯುದ್ಧದಲ್ಲಿ ರಾಮರಾಯನು ಹೇಗೆ ಮರಣ ಹೊಂದಿದನೆಂಬುದರಲ್ಲಿ ಒಮ್ಮತವಿಲ್ಲ. ಮಹಮದ್ ಖಾಸಿಮ ಫಿರಿಶ್ತಾನನ ಗ್ರಂಥದಲ್ಲಿ ಪಲ್ಲಕ್ಕಿಯಿಂದ ಕೆಳಗೆ ಉರುಳಿ ಬಿದ್ದಿದ್ದ ರಾಮರಾಯನನ್ನು ಶತ್ರುಸೈನ್ಯದ ಆನೆಯ ಮಾವುತನೊಬ್ಬನು ಎತ್ತಿಕೊಂಡು ರೂಮಿಖಾನನಿಗೆ ಒಪ್ಪಿಸಿದನು. ಖಾನನು ರಾಮರಾಯನನ್ನು ನಿಜಾಮಶಹನ ವಶಕ್ಕೆ ನೀಡಿದಾಗ ರಾಮರಾಯನ ತಲೆಯನ್ನು ಕತ್ತರಿಸಲಾಯಿತೆಂದು ಹೇಳಿದೆ. ಬಿಜಾಪುರದ ಇತಿಹಾಸಕಾರ ಮಹಮದ್ ಇಬ್ರಾಹಿಂ ಝುಬೇರಿಯು ತನ್ನ ಕೃತಿಯಲ್ಲಿ ರಣರಂಗದಲ್ಲಿ ಬಿದ್ದಿದ್ದ ರಾಮರಾಯನನ್ನು ರೂಮಿಖಾನನು ಆನೆಯ ಸೊಂಡಿಲಿನಿಂದ ಮೇಲೆತ್ತಿಸಿ ಜೀವಂತವಾಗಿ ನಿಜಾಮಶಹನಿಗೆ ನೀಡಿದನು. ಆಗ ಶಹನು 'ರಾಮರಾಜ, ನಿನ್ನ ಅವಸ್ಥೆ ಏನಾಗಿದೆ? ಎಂದು ಕೇಳಿದಾಗ ರಾಮರಾಯನು ತನ್ನ ಹಣೆಯನ್ನು ಬಡಿದುಕೊಂಡನಂತೆ. ಆಗ ಸುಲ್ತಾನನು ಅವನ ತಲೆಯನ್ನು ಕತ್ತರಿಸಲು ಆಜ್ಞೆ ಮಾಡಿದನು. ರಾಮರಾಯನ ಬಖೈರಿನಲ್ಲಿ ಮಾತ್ರ ಆದಿಲಶಹನು ತಾನೆ ಫಿರಂಗಿಯನ್ನು ಹಾರಿಸಿ ರಾಜಭೂವರನ ತಲೆಯನ್ನು ಛೇದಿಸಿದನು ಎಂದು ಮಾಹಿತಿಯಿದೆ. ಪಾಶ್ಚಿಮಾತ್ಯ ವಿದ್ವಾಂಸನಾದ ಕೌಟೋ ಎಂಬುವನು ನಿಜಾಮಶಹನ ಕೈಯಿಂದಲೇ ರಾಮರಾಯನು ಹತನಾದನು ಎಂದು ದಾಖಲಿಸಿದ್ದಾನೆ. ನಿಜಾಮಶಹನ ಆಸ್ಥಾನಕವಿ ಅಲಿತಾಬಾತಾಬಾ ಎಂಬುವನು ತನ್ನ ಕಾವ್ಯದಲ್ಲಿ ಭಲ್ಲೆಯಿಂದ ಗಾಯಗೊಂಡು ರಣರಂಗದಲ್ಲಿ ಬಿದ್ದಿದ್ದ ರಾಮರಾಯನನ್ನು ಸೆರೆಹಿಡಿದು ಅವನ ತಲೆಯನ್ನು ಕತ್ತರಿಸಿ ಸುಲ್ತಾನನ ಕಾಲಡಿಯಲ್ಲಿ ಇಡಲಾಯಿತು ಎಂದು ಬರೆದಿಟ್ಟಿದ್ದಾನೆ. ಇವನ ಕಾವ್ಯದ ಒಂದು ಚಿತ್ರದಲ್ಲಿ ನಿಜಾಮಶಹನು ಬೆರಳೆತ್ತಿ ವಧೆ ಮಾಡಲು ಸೂಚಿಸಿರುವುದು ಹಾಗೂ ಸೈನಿಕರಿಂದ ರಾಮರಾಯನ ಶಿರಚ್ಛೇದನ ಮಾಡಿದ ಚಿತ್ರವಿದೆ ಎಂದು ಹೇಳಲಾಗಿದೆ (ಕೃಷ್ಣ ಕೊಲ್ಹಾರ ಕುಲಕರ್ಣಿ. ಇತಿಹಾಸದ ದರ್ಶನ ಪುಟ 237)

ರಾಮರಾಯನ ತಲೆಯನ್ನು ಒಂದು ಉದ್ದನೆಯ ಭಲ್ಲೆಗೆ ಸಿಕ್ಕಿಸಿ ರಣರಂಗದಲ್ಲಿ ಪ್ರದರ್ಶಿಸಲಾಯಿತು. ಇದರಿಂದ ವಿಜಯನಗರದ ಸೈನಿಕರು ಕಂಗೆಟ್ಟು ಪಲಾಯನ ಮಾಡಲು ಆರಂಭಿಸಿದರು. ಶತ್ರು ಸೈನಿಕರು ಇವರನ್ನು ಬೆನ್ನಟ್ಟಿಸಿಕೊಂಡು ಓಡಿದರು. ರಾಮರಾಯನ ಶಿರಸ್ಸನ್ನೂ ವಿಜಾಪುರದ ರಸ್ತೆಯೊಂದರ ಚರಂಡಿಗೆ ಎಸೆಯಲಾಯಿತೆಂದು ಹೇಳಿದ್ದರೆ ಕೆಳದಿ ನೃಪ ವಿಜಯದಲ್ಲಿ ಅವನ ತಲೆಯನ್ನು ಕಾಶಿಗೆ ಕಳುಹಿಸಲಾಯಿತೆಂದು ಹೇಳಿದೆ. ಹೀಗೆ ರಾಮರಾಯನ ಮರಣದ ಸ್ಪಷ್ಟಚಿತ್ರಣ ದೊರೆತಿಲ್ಲ. ಇವನ ಮರಣದ ದಿನಾಂಕವನ್ನೂ ಬೇರೆ ಬೇರೆಯಾಗಿ ಸೂಚಿಸಿದೆ.

## ವಿಜಯನಗರ ಏಕೆ ಪತನವಾಯಿತು?

ತಾಳಿಕೋಟೆಯ ನಿರ್ಣಾಯಕ ಕದನದಲ್ಲಿ ವಿಜಯ ನಗರದ ಅತ್ಯಂತ ಹೀನಾಯಕರ ಸೋಲಿಗೆ ಅನೇಕ ಕಾರಣಗಳಿವೆ. ಸುಲ್ತಾನರ ಪಡೆಯಲ್ಲಿ ಬಹುದೂರದ ವರೆಗೆ ಸಿಡಿದು ಹಾರುವಂಥ ತುರ್ಕಿ ದೇಶದ ಉತ್ತಮಗುಣಮಟ್ಟದ ನೂರಾರು ತೋಪುಗಳಿದ್ದುವು. ತಿರುಗಣೆಯ ತೋಪುಗಳು ಬಂದೂಕಿನಂತೆ ಗುಂಡುಗಳನ್ನು ಎಡೆಬಿಡದೆ ಹಾರಿಸುತ್ತಿದ್ದವು. ಉದ್ದನೆಯ ಭಲ್ಲೆಗಳು, ದೂರದ ವರೆಗೆ ಹಾರಬಲ್ಲ ಬಾಣಗಳು, ವೇಗವಾಗಿ ಓಡಬಲ್ಲ ಕುದುರೆಗಳಿದ್ದವು. ಸೈನಿಕರಿಗೆ ಉತ್ತಮ ಶಿಕ್ಷಣ ನೀಡಲಾಗಿತ್ತು. ಇವರಿಗೆ ಲೋಹಶಿರಸ್ತ್ರಾಣ, ಅಂಗಿ, ಪಾಗು ಹಾಗೂ ಪಾದರಕ್ಷೆಗಳಿಂದ ಕೂಡಿದ ಸಮವಸ್ತ್ರವಿತ್ತು. ಸಂಖ್ಯೆಯಲ್ಲಿ ಮಾತ್ರ

ವಿಜಯನಗರದ ಸೈನ್ಯವು ಸುಲ್ತಾನರ ಸೈನ್ಯಕ್ಕಿಂತ ದೊಡ್ಡದಾಗಿತ್ತು. ಆದರೆ ಕಳಪೆ ಗುಣಮಟ್ಟದ ಫಿರಂಗಿಗಳು ಹಾಗೂ ಕಡಿಮೆ ಸಂಖ್ಯೆಯಲ್ಲಿ ಬಳಸುತ್ತಿದ್ದ ಸಾಮಾನ್ಯ ಗುಣಮಟ್ಟದ ನಾಡಬಂದೂಕುಗಳು ಸರಿಯಾಗಿ ಕೆಲಸ ಮಾಡದೆ ವ್ಯರ್ಥವಾಯಿತು. ವಿಜಯನಗರ ಸೈನ್ಯದಲ್ಲಿ ಉತ್ತಮ ತಳಿಯ ಕುದುರೆಗಳಿರಲಿಲ್ಲ. ಸೈನಿಕರಿಗೆ ಯೋಗ್ಯ ಶಸ್ತ್ರಾಸ್ತ್ರಗಳ ಕೊರತೆಯಿತ್ತು. ಬಹುಪಾಲು ಸೈನಿಕರು ನಡುವಿಗೆ ತುಂಡುಬಟ್ಟೆ (ಲಂಗೋಟಿ) ಮತ್ತು ತಲೆಗೆ ವಸ್ತ್ರವನ್ನು ಸುತ್ತಿಕೊಂಡು ಬರಿಗಾಲಲ್ಲೆ ಕಾದಾಡಬೇಕಾಯಿತು. ರಾಮರಾಯನ ಭೀಕರ ಸಾವಿನ ದೃಶ್ಯ ಸೈನಿಕರ ಸ್ಥೈರ್ಯವನ್ನು ಕೆಡಿಸಿತು.

ಪ್ರಾಯಶಃ ಸಾಮಂತರ ಸೈನ್ಯಕ್ಕೆ ಇಂಥಹ ದೊಡ್ಡ ಸ್ವರೂಪದ ಯುದ್ಧದಲ್ಲಿ ಕಾದಾಡಿದ ಅನುಭವವಿರಲಿಲ್ಲ. ಅಲ್ಲದೆ ಇವರಿಗೆ ಸರಿಯಾದ ನಿರ್ದೇಶನವಿದ್ದಂತೆ ತಿಳಿದಿಲ್ಲ. ಯುದ್ಧದ ನಡುವೆ ವಿಜಯನಗರದ ಮುಸಲ್ಮಾನ ಸೇನಾಪಡೆಯು ದಂಡನಾಯಕನೊಂದಿಗೆ ಸುಲ್ತಾನರ ಸೈನ್ಯದೊಂದಕ್ಕೆ ಸೇರಿಕೊಂಡಿತೆಂದೂ ಹೇಳಲಾಗಿದೆ.

## ಯುದ್ಧಾನಂತರ

ತಾಳಿಕೋಟೆಯಂಥ ಘನಘೋರವಾದ ಯುದ್ಧವನ್ನು ಮತ್ತೆಲ್ಲಿಯೂ ಕಂಡಿಲ್ಲವೆಂದು ವಿದೇಶೀ ಬರಹಗಾರರು ಉಲ್ಲೇಖಿಸಿದ್ದಾರೆ. ಕದನ ಕ್ಷೇತ್ರದಿಂದ ಅನೇಕ ಮೈಲಿಗಳ ವರೆಗೆ ಅಸಂಖ್ಯಾತ ಸೈನಿಕರ ಶವ ರಾಶಿರಾಶಿಯಾಗಿ ಅನಾಥವಾಗಿ ಬಿದ್ದಿತ್ತು. ಯಾರೂ ಅತ್ತಕಡೆ ಸುಳಿಯುತ್ತಿರಲಿಲ್ಲ. ಗಾಯಾಳುಗಳ ಸಂಖ್ಯೆಯೂ ಅಪರಿಮಿತವಾಗಿತ್ತು. ಇವರೂ ಸಹ ಅಲ್ಲಿಯೇ ನರಳಿನರಳಿ ಸತ್ತರೆಂದು ವರ್ಣಿತವಾಗಿದೆ.

ರಣರಂಗದಿಂದ ತಲೆತಪ್ಪಿಸಿಕೊಂಡು ಬಂದಿದ್ದ ತಿರುಮಲ ಮತ್ತು ವೆಂಕಟಾದ್ರಿಯರು ಅತೀ ಶೀಘ್ರವಾಗಿ ಅರಮನೆಯ ಸಂಪತ್ತನ್ನು ಆನೆ ಮತ್ತು ಕುದುರೆಗಳ ಮೇಲೆ ಹೇರಿ ತಿರುಮಲೆ ಎಂಬಲ್ಲಿಗೆ ಸಾಗಿಸಿದರು. ಇದರೊಂದಿಗೆ ಅರಸು ಸದಾಶಿವರಾಯ ಹಾಗೂ ರಾಜ ಪರಿವಾರವು ಹೊರಟು ಹೋಯಿತು. ಅರಮನೆಯ ಕಾವಲಿಗೆ ಕೆಲವೇ ಮಂದಿ ವೀರಭಟರನ್ನು ನೇಮಿಸಲಾಯಿತು. ಯುದ್ಧದ ಭೀತಿಯಿಂದ



ಪ್ರಾಯಶಃ ಹಲವಾರು ತಿಂಗಳ ಮೊದಲೇ ಪ್ರಸಿದ್ಧ ವರ್ತಕರು ಮತ್ತು ನಾಗರಿಕರು ರಾಜಧಾನಿಯನ್ನು ಬಿಟ್ಟು ಹೊರಟು ಹೋಗಿದ್ದರು. ಲಕ್ಷಾಂತರ ಜನಸಂಖ್ಯೆಯ ವಿಜಯನಗರ ಬಿಕೋ ಎನ್ನುತ್ತಿತ್ತು. ಕೆಲವೇ ಮಂದಿ ಜೀವಭಯದಿಂದ ಅಲ್ಲಲ್ಲಿ ಅಡಗಿಕೊಂಡಿದ್ದರು.

ಸುಲ್ತಾನರ ಸೈನಿಕರು ಇನ್ನೂ ರಣಭೂಮಿಯಲ್ಲಿ ಉಳಿದಿದ್ದ ವಿಜಯನಗರದ ಸೈನಿಕ ಶಿಬಿರವನ್ನು ಲೂಟಿ ಮಾಡಿದರು. ಅಲ್ಲಿಯೂ ಇವರಿಗೆ ಸಾಕಷ್ಟು ಸಂಪತ್ತು ದೊರೆಯಿತೆಂದು ಹೇಳಲಾಗಿದೆ. ನಂತರ ಸುಲ್ತಾನರು ಸೇನಾ ಸಮೇತರಾಗಿ ಆನೆಗೊಂದಿಗೆ ಬಂದು ಬೀಡು ಬಿಟ್ಟರು. ಅಲ್ಲಿಂದ ಹಲವಾರು ತಿಂಗಳ ಕಾಲ ವಿಜಯನಗರದ ದೇವಾಲಯಗಳು, ಮೂರ್ತಿಗಳು, ಮಹಲುಗಳು ಮತ್ತು ಅರಮನೆಯನ್ನೂ ಸಹ ಕೊಳ್ಳೆ ಹೊಡೆಯಲಾಯಿತು. ಸಂಪತ್ತು ಇರುವ ಸ್ಥಳಗಳಲ್ಲೆಲ್ಲಾ ಲೂಟಿ, ಕೊಳ್ಳೆ, ಕೊಲೆ, ಸುಲಿಗೆ ಅವ್ಯಾಹತವಾಗಿ ನಡೆಯಿತು. ಅಲ್ಲಲ್ಲಿ ಬೆಂಕಿ ಉರಿಯುತ್ತಿತ್ತು. ವೈರಿ ಪಡೆಯೊಂದಿಗೆ ಸುತ್ತಲಿನ ಅನಾಗರಿಕ ಬೇಟೆಗಾರರು, ದರೋಡೆಕೋರರು ಬಿರಂಜರ ಲಂಬಾಡಿಗಳು ವಿಧ್ವಂಸಕ ಕೃತ್ಯಗಳಲ್ಲಿ ಸೇರಿಕೊಂಡರು. ವಿಶ್ವದ ಅತ್ಯಂತ ಸುಂದರ ನಗರವೆಂದು ಮೆರೆದಾಡುತ್ತಿದ್ದ ವಿಜಯನಗರ ಕೇಳುವವರಿಲ್ಲದ ಅನಾಥ ಸ್ಥಳವಾಗಿ ತನ್ನೆಲ್ಲ ವೈಭವವನ್ನು ಕಳೆದುಕೊಂಡು ಹಾಳು ಸುರಿಯಿತು.

ಇಷ್ಟಾದರೂ ವಿಜಯನಗರವು ಇನ್ನೂ ಪೂರ್ಣವಾಗಿ ಹಾಳಾಗಿರಲಿಲ್ಲ. ಮಾರನೆಯ ವರ್ಷ 1566 ರಲ್ಲಿ ವಿಜಯನಗರವನ್ನು ಸಂದರ್ಶಿಸಿದ ವಿದೇಶಿ ಪ್ರವಾಸಿ ಸೀಜರ್ ಫ್ರೆಡರಿಕನು ಅರಮನೆಗಳು ಹಾಗೂ ನಿವಾಸಗಳು ಇನ್ನೂ ಭದ್ರವಾಗಿವೆ. ಆದರೆ ಜನರ ಸುಳಿವಿಲ್ಲ ಎಂದು ಬರೆದಿದ್ದಾನೆ. ಶತ್ರುಗಳು ವಿಜಯನಗರವನ್ನು ಬಿಟ್ಟುಹೊರಟು ಹೋದ ನಂತರ ತಿರುಮಲನು ಮತ್ತೆ ವಿಜಯನಗರಕ್ಕೆ ಆಗಮಿಸಿ ರಾಜಧಾನಿಯನ್ನು ಮೊದಲಿನ ಸ್ಥಿತಿಗೆ ತರಲು ತುಂಬಾ ಪ್ರಯತ್ನಿಸಿದನು. ಆದರೆ ವರ್ತಕರಾಗಲೀ, ನಾಗರಿಕರಾಗಲಿ ಮತ್ತೆ ಹಿಂತಿರುಗಿ ಬರಲಿಲ್ಲ. ಇದೊಂದು ಸೋಜಿಗದ ಸಂಗತಿಯಾಗಿದೆ. ಬೇಸರಗೊಂಡ ತಿರುಮಲನು ರಾಜಧಾನಿಯನ್ನು ಪೆನುಕೊಂಡೆಗೆ ಸ್ಥಳಾಂತರಿಸಿದನು. ಸುಲ್ತಾನರು ವಿಜಯನಗರ ಸಾಮ್ರಾಜ್ಯವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡಂತೆ ತಿಳಿದಿಲ್ಲ. ಕೆಲವು ಪ್ರದೇಶಗಳನ್ನು ಮಾತ್ರ ವಶಪಡಿಸಿಕೊಂಡು ಹಂಚಿಕೊಂಡಿರಬೇಕು. ಹೀಗೆ ವಿಜಯನಗರವು ಕಾಲನ ದವಡೆಗೆ ಸಿಕ್ಕಿ ನುಚ್ಚುನೂರಾಯಿತು. ಅದರ ಗತವೈಭವಕ್ಕೆ ಮೂಕಸಾಕ್ಷಿಯಾಗಿ ಕೆಲವು ಅವಶೇಷಗಳು ಇಂದು ಹಂಪೆಯಲ್ಲಿ ಉಳಿದಿವೆ.

(ಸಂಗ್ರಹ: ವಿವಿಧ ಮೂಲಗಳಿಂದ)

ಗಾಜಿನ ಬಾಟಲುಗಳ ಬದಲು ಹಾಲನ್ನು ಪ್ಲಾಸ್ಟಿಕ್‌ನ ದಪ್ಪ ಕವರ್‌ಗಳಲ್ಲಿ ತುಂಬುವ ವ್ಯವಸ್ಥೆಯನ್ನು ಜಾರಿಗೆ ತಂದ ಮೊದಲ ದೇಶ ಸ್ವೀಡನ್.

**********

ಕ್ಯಾನ್ಸರ್ ರೋಗದ ಮೊದಲ ಕುರುಹು 1891 ರಲ್ಲಿ ಜಾವಾದ ಕಪಿ ಮಾನವನಲ್ಲಿ ಕಂಡುಬಂದಿತು. ಈ ಕಪಿ ಮಾನವ ಐದು ಲಕ್ಷ ವರ್ಷ ಹಿಂದಿನದೆಂದು ಅಂದಾಜು ಮಾಡಲಾಗಿದೆ.

**********

ಮೊದಲನೆಯ ಅಮೆರಿಕದ ಹ್ಯಾಟ್ ಕಾರ್ಖಾನೆ ವಾರಕ್ಕೆ ಹದಿನೆಂಟು ಹ್ಯಾಟ್‌ಗಳನ್ನು ತಯಾರಿಸುತ್ತಿತ್ತು

• (ಸಂಗ್ರಹ) ಸಂಪಟೂರು ವಿಶ್ವನಾಥ




ಡಾ. ಜಿ.ಕೃಷ್ಣ.

ವಿಜ್ಞಾನ ಕ್ಷೇತ್ರದಲ್ಲಿ ಹಿಂದಿನ ಕೆಲವು ಶತಕಗಳಲ್ಲಿ ಉಂಟಾಗಿರುವ ಅದ್ಭುತ ಮುನ್ನಡೆಗಳು ಇನ್ನಾವ ಅಭೇದ್ಯ ರಹಸ್ಯ ಮಿಕ್ಕಿಲ್ಲ ಎಂಬ ಭಾವನೆಗೆ ಎಡೆಗೊಡುವುದು ಸಹಜ. ಆದರೂ ಒಂದು ರಹಸ್ಯ ಮಾತ್ರ ವಿಜ್ಞಾನಕ್ಕೆ ಸವಾಲಾಗಿ ಎದುರು ನಿಂತಿದೆ. ಅದೇ ಪ್ರಜ್ಞೆ.

ವಿಸ್ಮಯವೆಂದರೆ, ಪ್ರಜ್ಞೆ ನಮಗೆ ಅತ್ಯಂತ ಸಮೀಪವಾದ ಮತ್ತು ನೇರವಾದ ಅನುಭವ. ಏಕೆಂದರೆ ಅದೊಂದು ಆಂತರಿಕ ಕ್ರಿಯೆ. ಅದಕ್ಕೆ ಬಾಹ್ಯ ಪ್ರಪಂಚದ ಸಂಪರ್ಕ, ಪ್ರಚೋದನೆ ಬೇಕಿಲ್ಲ. ಈ ಕಾರಣದಿಂದ ಪ್ರಜ್ಞೆ ಅನುಮಾನ ಸಂಶಯಗಳಿಗೆ ಒಳಪಟ್ಟುದಲ್ಲ.

> 'ಪ್ರಜ್ಞೆ' ಎಂಬುದು ವಿಜ್ಞಾನಿಗಳಿಗೆ, ದಾರ್ಶನಿಕರಿಗೆ ಸವಾಲಾಗಿ ನಿಗೂಢವಾಗಿಯೇ ಉಳಿದಿದೆ.

ಯಾವ ಪ್ರಜ್ಞಾವಂತ ಜೀವಿಗೂ ಅವನ ಪ್ರಜ್ಞೆಯ ಬಗ್ಗೆ ಶಂಕೆ ಇಲ್ಲ. ಪ್ರಜ್ಞೆಯ ಒಗಟು ಅದರ ಇರುವಿಕೆಯ ಬಗ್ಗೆ ಅಲ್ಲ. ಅದರ ಉತ್ಪತ್ತಿಯ ಬಗ್ಗೆ. ಪ್ರಜ್ಞೆಗೂ ಮಿದುಳಿಗೂ ಇರುವ ನಿಕಟ ಸಂಬಂಧದ ಸ್ವರೂಪದ ಬಗ್ಗೆ. ಇದು ಇಲ್ಲಿಯತನಕ ನಿಗೂಢವಾದ, ಅಭೇದ್ಯವಾದ ಸಮಸ್ಯೆಯಾಗಿಯೇ ಉಳಿದಿದೆ.

ಹಾಗೆಂದು ಪ್ರಜ್ಞೆಯ ಬಗ್ಗೆ ವ್ಯಾಖ್ಯಾನಗಳ, ಲೇಖನಗಳ, ಚಿಂತನ ವಿಮರ್ಶೆಗಳ ಸಾಹಿತ್ಯಕ್ಕೆ ಬರ ಇಲ್ಲ. ವಿಜ್ಞಾನಿಗಳು, ತತ್ವಜ್ಞಾನಿಗಳು, ಸಾಹಿತಿಗಳು, ಚಿಂತನಕಾರರು ಅಪಾರ ಪ್ರಮಾಣದಲ್ಲಿ ಪ್ರಜ್ಞೆಯ ಬಗ್ಗೆ ಬರೆದಿದ್ದಾರೆ. ಆದಾಗ್ಯು ಪ್ರಜ್ಞೆಯ ಸ್ವರೂಪದ ಮರ್ಮ ವಿಜ್ಞಾನಿಗಳಿಗೂ, ದಾರ್ಶನಿಕರಿಗೂ ಬಿಡಿಸಲಾರದ ಒಗಟಾಗೇ ಉಳಿದಿದೆ. ಪ್ರ[illegible] ಹೇಗೆ, ಯಾಕೆ, ಎಲ್ಲಿ ಎಂಬ ಯಾವ ಪ್ರಶ್ನೆಗು[illegible] ಉತ್ತರವಿಲ್ಲ.

ಪ್ರಜ್ಞೆ ಅಂದರೇನು ಎಂಬುವುದ[illegible] ಉತ್ತರಿಸುವುದೇ ಮೊದಲ ಸವಾಲು. ನಮ[illegible] ಭಾವನೆಗಳು, ಚಿಂತನೆಗಳು, ಕಲ್ಪನೆಗಳು[illegible] ಅನುಭವಗಳು, ಸ್ಪಂದನೆಗಳು ಪ್ರಜ್ಞೆಯ ರಂ[illegible] ಪ್ರಪಂಚದಲ್ಲಿನ ಆಗುಹೋಗುಗಳು[illegible] ಆದಾಗ್ಯೂ ಮೂಲಭೂತವಾದ[illegible] ಪ್ರಶ್ನೆಯೆಂದರೆ - ಪ್ರಜ್ಞೆ ಭೌತಿಕವಾದ[illegible] ಆಗುವಿಕೆಯೇ ಅಥವಾ ಭೌತಿಕ ವಸ್ತುವಾದ[illegible] ಮಿದುಳಿನ ಒಂದು ಗುಣವೇ ಅಥವ[illegible] ಮಿದುಳಿನ ಒಂದು ಸ್ಥಿತಿಯ ಅವತಾರವೇ[illegible] ಪ್ರಜ್ಞೆ ಮಿದುಳಿನ ಮೇಲೆ ಪರಿಣಾಮ[illegible] ಬೀರುತ್ತದೆಯೆ? ಅಥವಾ ಅದು ಬರಿ[illegible] ಮಿದುಳಿನ ಚಟುವಟಿಕೆಗಳ ಪ್ರತಿಬಿಂಬವೆ[illegible] ಭೌತಿಕ ಪ್ರಪಂಚದ ಬೇರಾ[illegible] ಜಡವಸ್ತುಗಳಲ್ಲಿ ಅಥವಾ ಜೀವಿಗಳಲ್ಲಿ ಪ್ರ[illegible] ಕಾಣಿಸಿಕೊಳ್ಳುತ್ತದಯೇ? ಕಂಪ್ಯೂಟರ್‌ಗಳಿ[illegible] ಪ್ರಜ್ಞೆ ಉಂಟೇ?

ಪ್ರತಿ ಮಾನವನೂ ಪ್ರಜ್ಞಾವಂತ ಜೀವಿ[illegible] ತನ್ನ ಪ್ರಜ್ಞೆಯ ಬಗ್ಗೆ ಅವನಿಗೆ ಸಂಶಯವಿ[illegible] ಹಾಗೂ ತನ್ನ ನೆರೆ ಹೊರೆಯ ಮಾನವರಿಗು[illegible] ಪ್ರಜ್ಞೆ ಇದೆ ಎಂಬುದರ ಬಗ್ಗೆಯು[illegible]

ನುಮಾನವಿಲ್ಲ. ದೇವರು, ದೈವ, ನರ್ಜನ್ಮ ಆತ್ಮ ಇತ್ಯಾದಿ ನಂಬಿಕೆಗಳು ಶಯಾಸ್ಪದವಾಗಿದ್ದರೆ, ಪ್ರಜ್ಞೆ ಹಾಗಲ್ಲ. ೋಕೆ ಎಂಬ ಕ್ರಿಯೆಗೆ ಪ್ರಜ್ಞೆಯ ಆವಶ್ಯಕತೆ ರುವುದರಿಂದ, ಪ್ರಜ್ಞೆಯ ಇರುವಿಕೆಯನ್ನು ಕಿಸುವುದು ವಿಪರ್ಯಾಸವಾಗುತ್ತದೆ. ಷ್ಟು ಸ್ಪಷ್ಟವಾಗಿ, ನಿಖರವಾಗಿ, ನಮಗೆ ಿಚಯವಿರುವ ಪ್ರಜ್ಞೆಯ ಸ್ವರೂಪ ಎಷ್ಟು ಢ, ನಿಗೂಢ, ಅಭೇದ್ಯ ಎನ್ನುವುದು ೋಜಿಗದ ಸಂಗತಿ.

ನೀವು ಒಂದು ಕೆಂಪು ಗುಲಾಬಿಯನ್ನು ೋಡಿದಾಗ ಅಥವಾ ಒಂದು ಗಂಟೆಯ ್ಧ ಕೇಳಿದಾಗ ಆಗುವ ಪ್ರತಿಕ್ರಿಯೆಯನ್ನು ಿಶೀಲಿಸಿ, ಈ ಎರಡು ಉದಾಹರಣೆಗಳಲ್ಲಿ ಡಕವಾದ ಭೌತಿಕ ವ್ಯಾಪಾರ ನಮಗೆ ನ್ನಾಗಿ ಅರ್ಥವಾಗಿದೆ. ಒಂದು ನಿರ್ದಿಷ್ಟ ರಂಗ ವೈಶಾಲ್ಯತೆ ಉಳ್ಳ ಬೆಳಕಿನ ಕಿರಣ ಲಾಬಿಯಿಂದ ಹೊರಟು ನಮ್ಮ ಣ್ಣುಗಳನ್ನು ಪ್ರವೇಶಿಸಿ, ಕಣ್ಣಿನ ಂಬದಿಯಲ್ಲಿರುವ ರೆಟೀನಾ ಮೇಲೆಬಿದ್ದು ಲ್ಲಿರುವ ಕೋಲು ಮತ್ತು ೋನದಾಕಾರದಲ್ಲಿರುವ ಕಣಗಳನ್ನು ುದ್ರೇಕಿಸುತ್ತದೆ. ಇದರಿಂದಾಗಿ ಈ ಕಣಗಳು ುದ್ದೀಪನಗೊಂಡು ನೇತ್ರನರಗಳ ಮೂಲಕಃ ಿದುಳಿನ ಹಿಂಭಾಗದಲ್ಲಿರುವ ಷ್ಟಿಕಾರ್ಟೆಕ್ಸ್‌ಗೆ ವರದಿಗಳನ್ನು ವಾನಿಸುತ್ತವೆ. ಅದೇ ರೀತಿ ಗಂಟೆ ಬಡಿದಾಗ ಾಯುವಿನಲ್ಲಿ ಉಂಟಾಗುವ ಕಲರವ ನಮ್ಮ ಿಗಳನ್ನು ತಲಪಿ, ಕಿವಿಯ ಒಳ ಾಗದಲ್ಲಿರುವ ತಮಟೆಯನ್ನು ಅಪ್ಪಳಿಸಿ ದರಲ್ಲಿ ಅದುರುವಿಕೆಯನ್ನು ಚೋದಿಸುತ್ತದೆ. ಈ ಕಿವಿತಮಟೆಯ ದುರುವಿಕೆಯನ್ನು ಅದರ ಹಿಂಭಾಗದಲ್ಲಿರುವ ಸೂಕ್ಷ್ಮಕಣಗಳು ಗ್ರಹಿಸಿ ನರಗಳ ಮೂಲಕ ಮಿದುಳಿನ ಶಬ್ದವೇದಿ ಕಾರ್ಟೆಕ್ಸ್‌ಗೆ ರವಾನಿಸುತ್ತದೆ. ಈ ಎಲ್ಲ ವ್ಯವಹಾರಗಳೂ ಸಂಪೂರ್ಣವಾಗಿ ಭೌತಶಾಸ್ತ್ರದ ನಿಯಮಗಳಿಗೆ ಬದ್ಧವಾಗಿವೆ ಮತ್ತು ಇವುಗಳ ಸ್ವರೂಪವನ್ನು ನಾವು ಬಹಳಷ್ಟು ತಿಳಿದುಕೊಂಡಿದ್ದೇವೆ. ಮಿದುಳಿನ ಈ ಕಾರ್ಯವನ್ನು ಸ್ಪಂದನೆ ಅಥವಾ ಅರಿವು ಎಂದು ಕರೆಯ ಬಹುದಾಗಿದೆ ಮತ್ತು ಈ ಅರಿವಿನಿಂದಾಗುವ ಪ್ರತಿಕ್ರಿಯೆ-ಉದಾಹರಣೆಗೆ ಅನುಭವದ ಬಣ್ಣನೆ- ಇವನ್ನೆಲ್ಲಾ ಭೌತಿಕ ಅಥವಾ ಮನೋವಿಜ್ಞಾನ ಶಾಸ್ತ್ರದ ಪ್ರಕಾರದಲ್ಲಿ ವಿವರಿಸುವುದು ಸಾಧ್ಯ. . ಭೌತಶಾಸ್ತ್ರವಾಗಲೀ ಮನೋವಿಜ್ಞಾನವಾಗಲೀ ನಾವು ನೋಡುವುದನ್ನು ಆ ವಿಧದಲ್ಲಿ ಏಕೆ ಕಾಣುತ್ತೇವೆ ಅಥವಾ ನಾವು ಕೇಳುವುದನ್ನು ಆ ವಿಧದಲ್ಲಿ ಏಕೆ ಕೇಳುತ್ತೇವೆ ಅಥವಾ ಗಾಯದಿಂದ ಉಂಟಾಗುವ ನೋವನ್ನು ಆ ರೀತಿ ಏಕೆ ಅನುಭವಿಸುತ್ತೇವೆ ಎಂಬ ಪ್ರಶ್ನೆಗಳಿಗೆ ಉತ್ತರಿಸುವುದರಲ್ಲಿ ಅಸಮರ್ಥವಾಗಿವೆ.

## ಮೂಲಭೂತ ವ್ಯತ್ಯಾಸ

ಅರಿವಿಗೆ ಪ್ರಜ್ಞೆಯ ಅವಶ್ಯಕತೆ ಇದ್ದರೂ ಇವೆರಡರಲ್ಲಿ ಮೂಲಭೂತವಾದ ವ್ಯತ್ಯಾಸವಿದೆ. ಅರಿವು ಒಂದು ಪ್ರತಿಕ್ರಿಯೆ. ಅದು ಬಾಹ್ಯ ಪ್ರಪಂಚ ನಮ್ಮ ಇಂದ್ರಿಯಗಳ ಮೂಲಕ ಮಿದುಳನ್ನು ಸ್ಪರ್ಶಿಸಿದಾಗ ಆಗುವ ಪರಿಣಾಮ. ನಾವು ಒಂದು ವಸ್ತುವನ್ನು ನೋಡಿ, ಗುರುತಿಸಿ, ಅದರ ವರ್ಗವನ್ನು ನಿಷ್ಕರ್ಷಿಸಿದಾಗ ಆಗುವ ಸಕಲ ವಿದ್ಯಮಾನಗಳನ್ನೂ ಭೌತಿಕ ಅಥವಾ

ಮನಶ್ಶಾಸ್ತ್ರದ ಚೌಕಟ್ಟಿನಲ್ಲಿ ವಿವರಿಸಬಹುದು. ಈ ಕಾರ್ಯಕ್ಕೆ ನಮಗೆ ಬೇಕಾಗುವುದು ಭೌತಶಾಸ್ತ್ರದ ಅಥವಾ ಮನಶ್ಶಾಸ್ತ್ರದ ಸರಳ ಅಥವಾ ಜಟಿಲ ನೀತಿ ನಿಯಮಗಳು. ಮಿದುಳಿನಲ್ಲಿ ಆಗುವ ಯಾವ ಯಾವ ವ್ಯತ್ಯಾಸಗಳಿಂದ ಈ ಕೆಲಸ ಆಗುತ್ತದೆಂದು ನಿರ್ಧರಿಸುವುದು ಸಂಕೀರ್ಣವಾದಾಗ್ಯೂ ಮಿದುಳೇ ಈ ನಡತೆಗಳಿಗೆ ಹೊಣೆ ಎಂಬುದರಲ್ಲಿ ಅನುಮಾನವಿಲ್ಲ ಮತ್ತು ಮಿದುಳಿನ ಯಾವ ಯಾವ ಭಾಗಗಳು ಈ ಕಾರ್ಯದಲ್ಲಿ ಪಾಲ್ಗೊಳ್ಳುತ್ತವೆಯೆಂದೂ ಹೆಚ್ಚು ಕಡಿಮೆ ನಿರ್ಧರಿಸಬಲ್ಲೆವು. ಆದರೆ ಪ್ರಜ್ಞೆಯ ಮಾತೇ ಬೇರೆ. ಪ್ರಜ್ಞೆ ಮಿದುಳಿನಲ್ಲೇ ಉದ್ಭವಿಸುತ್ತದೆ ಎಂಬುದು ದಿಟ. ಆದರೆ ಹೇಗೆ?

ಪ್ರಾಯಶಃ ನಮ್ಮ ಮಾನಸಿಕ ಅಂತಃ ಪ್ರಪಂಚ ತನ್ನದೇ ಆದ ವಿಶಿಷ್ಟ ಅ ಭೌತಿಕ ರೀತಿನಿಯಮಗಳನ್ನೂ ಗುಣಗಳನ್ನು ಹೊಂದಿರಬಹುದು. ಪ್ರಾಯಶಃ ಇದು ಅಭೇದ್ಯ. ಅಸಂಖ್ಯಾತ ವಿಜ್ಞಾನಿಗಳು, ಮನಶ್ಶಾಸ್ತ್ರಜ್ಞರು, ದಾರ್ಶನಿಕರು, ಪುರಾತನಯುಗದಿಂದ ಇಲ್ಲಿಯ ವರೆಗೂ ಈ ರಹಸ್ಯದ ಮೇಲೆ ಬೆಳಕು ಚೆಲ್ಲಲು ಹೆಣಗಾಡಿದ್ದಾರೆ. ಆದಾಗ್ಯೂ ಪ್ರಜ್ಞೆಯ ಒಗಟು ಚಿರಂತನವಾಗಿ ಉಳಿದಿದೆ.

ಗ್ರೀಸಿನ ತತ್ವಜ್ಞಾನಿ ಪ್ಲೇಟೋ ಮಹಾಶಯನಿಗೆ ಒಂದು ರೀತಿಯ ಸುಲಭ ಉತ್ತರ ದೊರಕಿತು. ಏಕೆಂದರೆ ಅವನ ದೃಷ್ಟಿಯಲ್ಲಿ ಸರ್ವ ಜಗತ್ತೇ ಒಂದು ಮಾಯೆ. ಭೌತಿಕ ವಸ್ತುಗಳ ಇರುವಿಕೆಯೇ ಮಿಥ್ಯ. ಅವು ಕೇವಲ ನಮ್ಮ ಮನಸ್ಸಿನ ಕಲ್ಪನೆಗಳು. ಆದರಿಂದ ಪ್ರಜ್ಞೆ ಮನಸ್ಸೆಂಬ ಬುಟ್ಟಿಯಲ್ಲಿ ಹುದುಗಿರುವ ಒಂದು ಆಟಿಗೆ. ಅದಕ್ಕೆ ಯಾವ ಅದ್ವಿತೀಯ ಪಟ್ಟ ಕಟ್ಟಬೇಕಿಲ
ಮಿದುಳಿನಂಥಹ ವಸ್ತು ಪ್ರಜ್ಞೆಯಂಥಹ ಅ
ಭೌತಿಕ ಕ್ರಿಯೆಯನ್ನು ಹೇಗೆ ಉತ್ಪಾದಿಸುತ್ತ
ಎಂಬ ಪ್ರಶ್ನೆಯೇ ಪ್ಲೇಟೋನನ
ಕಾಡುವುದಿಲ್ಲ. ಏಕೆಂದರೆ ಅವನು ಭೌತಿ
ವಸ್ತುಗಳ ವಾಸ್ತವಿಕತೆಯನ್ನೇ ತಿರಸ್ಕರಿಸುತ್ತಾ
ಮಾಯಾಜಗತ್ತಿನಲ್ಲಿ ಯಾವುದು ಅಸಾಧ್ಯ
ನಿಜಕ್ಕೂ ಪ್ಲೇಟೋ ಒಬ್ಬ ಪಲಾಯನವಾದಿ.

ದ್ವೈತವಾದದ (ಅಂದರೆ ಮನಸ್ಸು ಮತ
ದೇಹವಸ್ತು ಬೇರೆ ಬೇರೆ) ಗುರ
ದೇಕಾರ್ಟ್‌ಗೂ ಕೂಡಾ ಪ್ರಜ್ಞೆಯ ಸ್ವರೂ
ನಿಚ್ಚಳ. ಯಾಕೆಂದರೆ ಅದು ಅಭೌತಿಕವಾ

## ದುಡ್ಡಿನ ಗಾನ




**ದುಡ್ಡು ಹಾಡುತಿದೆ ಗಾನ**
**ಸತ್ಯ ತಳೆದಿದೆ ಮೌನ**
**ದೇಶದ್ರೋಹಿಂಗೂ ಆಗುತಿದೆ**
**ಮಾನ ಸನ್ಮಾನ**
**ನ್ಯಾಯಕ್ಕೂ ದಕ್ಕುತಿದೆ**
**ಭಾರಿ ಅನ್ಯಾಯ**
**ಕುಸಿದು ಮಣ್ಣಾಗುತಿದೆ**
**ಧರ್ಮದಡಿಪಾಯ**

-ಕೆ.ಆರ್. ಶಿವಸ್ವಾಮಿ

ಮನಸ್ಸೆಂಬ ವಸ್ತುವಿನ ಗುಣ. ಮನಸ್ಸು ಅಭೌತಿಕವಾದದ್ದರಿಂದ ಅದಕ್ಕೆ ಭೌತಶಾಸ್ತ್ರದ ನಿಯಮಗಳು ಅನ್ವಯಿಸುವುದಿಲ್ಲ. ದ್ವೈತವಾದದ ಪ್ರಮುಖ ದೋಷವೆಂದರೆ ಅದು ಅಭೌತಿಕವಾದ ಮನಸ್ಸು ಭೌತಿಕವಾದ ಮಿದುಳೆಂಬ ವಸ್ತುವಿನ ಮೇಲೆ ಪ್ರಭಾವನ್ನುಂಟು ಮಾಡಲು ಹೇಗೆ ಸಾಧ್ಯ ಎಂಬ ಪ್ರಶ್ನೆಯನ್ನು ಎದುರಿಸಲು ಅಸಮರ್ಥವಾಗುತ್ತದೆ. ಅಂಥಹ ಪ್ರಭಾವ ಇದೆ ಎಂಬುದು ಮಾನವನ ಸ್ವಇಚ್ಛೆ ಸ್ವಪ್ರೇರಣೆ ಮುಂತಾದ ಕಾರ್ಯಗಳಿಂದ ವಿದಿತವಾಗಿದೆ. ಇತ್ತೀಚಿನ ತತ್ವಜ್ಞಾನಿ ಕಾಲ್ಮರ್ಸ್ ಕೂಡ ಒಂದು ವಿಧದ ದ್ವೈತವಾದಕ್ಕೆ ಶರಣು ಹೋಗಿ ಮನಸ್ಸು ಎಂಬುದು ಒಂದು ಅಸಾಧಾರಣ ವಸ್ತು. ಅದು ಭೌತಿಕ ಗುಣಗಳ ಸೀಮೆಯನ್ನು ದಾಟಿ ತನ್ನದೇ ಆದ ವಿಶಿಷ್ಟ ಸ್ವರೂಪವನ್ನು ಹೊಂದಿದೆ ಎಂದು ವಾದಿಸುತ್ತಾನೆ.

## ಸಿದ್ಧಾಂತಗಳು

ಆಧುನಿಕ ವೈಜ್ಞಾನಿಕ ತತ್ವಜ್ಞಾನಿಗಳಲ್ಲಿ ಪೆನರೋಸ್ ಮತ್ತು ಡೆನೆಟ್ ಅವರುಗಳು ಪ್ರಜ್ಞೆಯ ಬಗ್ಗೆ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಪೆನ್‌ರೋಸ್‌ನ ದೃಷ್ಟಿಯಲ್ಲಿ ಪ್ರಾಯಶಃ ಪ್ರಜ್ಞೆ ಕ್ವಾಂಟಂ ಶಾಸ್ತ್ರದ ನಿಯಮಗಳನ್ನು ಪಾಲಿಸುತ್ತದೆ. ಈ ಸೂಚನೆ ನಿಜಕ್ಕೂ ಆಶ್ಚರ್ಯಕರ . ಏಕೆಂದರೆ ಕ್ವಾಂಟಂ ಶಾಸ್ತ್ರವೇ ಒಂದು ರೀತಿಯಲ್ಲಿ ಮರ್ಮಿಕವಾದದ್ದು. ಭೌತ ಶಾಸ್ತ್ರದಲ್ಲಿ ಕ್ವಾಂಟಂ ನಿಯಮಗಳು ವಿಭಿನ್ನ, ವಿಚಿತ್ರ. ಅವು ಸಂಪ್ರದಾಯಸ್ತ ಭೌತಿಕ ಶಾಸ್ತ್ರಗಳ ನಿಯಮಗಳಿಗೆ ನಿಲುಕದ ಹಲವಾರು ರಹಸ್ಯಗಳನ್ನು ಬಿಡಿಸುವುದರಲ್ಲಿ ಅಸಾಧಾರಣ ಯಶಸ್ಸುಗಳಿಸಿ, ಈಗ ಭೌತ ಶಾಸ್ತ್ರದಲ್ಲಿ ಒಂದು ಪ್ರಮುಖ ಅಂಗವಾಗಿ ಮೆಟ್ಟನಿಂತಿವೆ. ಆದರವು ನಮ್ಮ ಸಾಧಾರಣ ಎಣಿಕೆಗಳಿಗೆ ತದ್ವಿರುದ್ಧ ಮತ್ತು ದಿಗ್ಭ್ರಮೆಗೊಳಿಸುವಂಥವು. ಉದಾಹರಣೆಗೆ ಒಂದು ಕಣ ಈ ಕ್ಷಣದಲ್ಲಿ ಇಲ್ಲಿ ಅಥವಾ ಅಲ್ಲಿ ಅಂಥಲ್ಲ - ಇಲ್ಲಿ ಮತ್ತು ಅಲ್ಲಿ ಎರಡೂ ಕಡೆ ಇರಲು ಸಾಧ್ಯ. ಷ್ರೋಡಿಂಗರ್‌ನ ಬೆಕ್ಕು ಪ್ರೇಕ್ಷಕ ಪೆಟ್ಟಿಗೆಯೊಳಗೆ ವೀಕ್ಷಿಸಿದಾಗ ಬದುಕಿರಬಹುದು ಅಥವಾ ಸತ್ತಿರಬಹುದು. ಆದರೆ ಇಣಿಕಿ ನೋಡದಿದ್ದರೆ ಅದು ಬದುಕಿದೆ ಮತ್ತು ಸತ್ತಿದೆ! ಇದಕ್ಕಿಂತ ವೈಚಿತ್ರ್ಯ ಬೇಕೆ? ತತ್ವಜ್ಞಾನಿ ಪೆನ್‌ರೋಸ್ ಪ್ರಜ್ಞೆ ಎಂಬುದು ಮಿದುಳಿನ ಸೂಕ್ಷ್ಮಗ್ರಂಥಿಗಳಲ್ಲುಂಟಾಗುವ ಕ್ವಾಂಟಂ ಅಧಃ ಪತನದಿಂದ ಜನಿಸುತ್ತದೆ ಎಂದು ಅಭಿಪ್ರಾಯ ಪಡುತ್ತಾನೆ. ಆದರೂ ಈ ಉತ್ಪಾದನೆಯ ಸ್ವರೂಪವನ್ನು ಅವನು ವಿವರಿಸಿಲ್ಲ.

ಡೆನೆಟ್ ವಸ್ತುವಾದದ ಜಾಡಿನಲ್ಲೇ ಪ್ರಜ್ಞೆ ಒಂದು ಮಾಹಿತಿ ಸುಧಾರೀಕರಣ ಕ್ರಿಯೆಯಷ್ಟೆ ಎಂದು ಗಮನಿಸುತ್ತಾನೆ. ಪ್ರಜ್ಞೆ ನಾಲ್ಕು ವಿಭಿನ್ನ ಮಾಹಿತಿ ಸಂಗ್ರಹಣ, ವಿಷದೀಕರಣ ಮತ್ತು ವಿಸ್ತರಣ ಕಾರ್ಯಗಳನ್ನು ನೆರವೇರಿಸುತ್ತದೆ. ಅರಿವು, ಜ್ಞಾಪಕತೆ, ಸ್ಪಂದನೆ ಮತ್ತು ನಿಯಂತ್ರಣ. ಈ ನಾಲ್ಕು ಕಾರ್ಯಗಳಿಗೆ ಬೇಕಾಗುವ ಮಿದುಳಿನ ಸಂಘಟನೆಗಳನ್ನು ಅವನು ಗುರುತಿಸುತ್ತಾನೆ. ಅವನ ಪ್ರಕಾರ ಮಿದುಳು ಒಂದು ತರಹ ಮಾಹಿತಿ ಸುಧಾರೀಕರಣದ ಸಭೆ. ಅಲ್ಲಿ ಹಲವಾರು ಕ್ರಿಯಾ ಪ್ರತಿನಿಧಿಗಳು ಪೈಪೋಟಿ ನಡೆಸುತ್ತವೆ. ಅತ್ಯಂತ ಬಲಿಷ್ಟ ಭಾವವೇ ವಿಜಯಗೈದು ಕಾರ್ಯೋನ್ಮುಖವಾಗುತ್ತದೆ. ಆದಾಗ್ಯೂ ಡೆನೆಟ್‌ನ ವಿವರಣೆ ಮಿದುಳಿನಲ್ಲಿ ನಡೆಯುವ

ನಾಟಕವನ್ನು ಉಲ್ಲೇಖಿಸುತ್ತದೆಯೇ ಹೊರತು ಆ ನಾಟಕದ ರಂಗಸ್ಥಳವನ್ನಲ್ಲ. ಆದ್ದರಿಂದ ಪ್ರಜ್ಞೆಯ ಸ್ವರೂಪದ ಮರ್ಮವನ್ನು ಬಿಡಿಸುವುದರಲ್ಲಿ ವಿಫಲವಾಗುತ್ತದೆ.

ಇನ್ನು ಮನೋಜೀವ ಶಾಸ್ತ್ರಗಳ ಆಧಾರದಿಂದ ಬಂದಂಥ ಸೂತ್ರಗಳು ಅರಿವಿನ ಹಲವಾರು ಸ್ವರೂಪಗಳನ್ನು ಮತ್ತು ವಾತಾವರಣದಲ್ಲಾಗುವ ಬದಲಾವಣೆಗೆ ಮಿದುಳು ಸ್ಪಂದಿಸುವ ರೀತಿ ನಿಯಮಗಳನ್ನು ವಿವರಿಸುತ್ತವೆ. ಆದರೆ ಮೂಲಭೂತವಾಗಿ ನಮ್ಮನ್ನು ಕಾಡುತ್ತಿರುವ ಪ್ರಶ್ನೆ- ಈ ಪ್ರಕ್ರಿಯೆಗಳು ಮಿದುಳಿನಲ್ಲಿ ಹೇಗೆ ಜನ್ಯವಾಗುತ್ತವೆ? ಎಂಬುದು. ಮಿದುಳಿನ ಯಾವ ರೀತಿಯ ಆಂತರಿಕ ಪರಿವರ್ತನೆಗಳು ಪ್ರಜ್ಞೆಯನ್ನು ಸೃಷ್ಟಿಸುತ್ತವೆ? ಮತ್ತು ಯಾವ ಯಾವ ಭಾಗದಲ್ಲಿ? ಬಣ್ಣ, ಧ್ವನಿ, ಹರ್ಷ, ದುಃಖದ ಈ ಅನುಭವಗಳು ಮಿದುಳಿನಲ್ಲಿ ಯಾವ ರೀತಿ ಉದ್ಭವಿಸುತ್ತವೆ? ಈ ಪ್ರಶ್ನೆಗಳಿಗೆ ಮನಶ್ಶಾಸ್ತ್ರದಲ್ಲಿ ಉತ್ತರಗಳು ದೊರಕುವುದಿಲ್ಲ. ಯಾಕೆಂದರೆ ಅದು ಗಮನ, ಉಪಾಚನ ಮೊದಲಾದ ಅನುಭವದ ಪರಿಣಾಮಗಳನ್ನು ಅಧ್ಯಯನ ಮಾಡುತ್ತದೆಯೇ ಹೊರತು ಅನುಭವದ ಮೂಲ ಸ್ವರೂಪವನ್ನಲ್ಲ. ಅದರಲ್ಲೇ ಪ್ರಜ್ಞೆಯ ತಿರುಳು ಅಡಗಿರುವುದು.

ಚರ್ಚ್‌ಲ್ಯಾಂಡ್ ಪ್ರಜ್ಞೆ ಮಿದುಳಿನ ಒಂದ ಗುಣ ಅಷ್ಟೆ ಎಂದು ಅಭಿಪ್ರಾಯಪಡುತ್ತಾ ಅದಕ್ಕೆ ಸಮರ್ಥನೆ. ಪ್ರಜ್ಞೆ ಮತ್ತಿತ ಮಾನಸಿಕಸ್ಥಿತಿಗಳಂತೆ ಮಾದಕವಸ್ತುಗಳಿಂ ಪ್ರಭಾವಿತಗೊಳ್ಳುತ್ತದೆ. ಆದ್ದರಿಂದ ಪ್ರ ಮತ್ತಿತರ ಮನೋಸ್ಥಿತಿಗಳಿಗೆ ಮಿದುಳಿ ಹೇತುವನ್ನೆಬಹುದಾದರೂ ಈ ಸಂಬಂಧ ಸ್ವರೂಪವನ್ನು ಕಂಡುಹಿಡಿಯಲ ಅಸಮರ್ಥರಾಗಿರುವೆವು.

ಪ್ರಜ್ಞೆ ಮಾನವನಲ್ಲದೇ ಬೇರಾವ ಪ್ರಾ ಅಥವಾ ವಸ್ತುವಿನಲ್ಲಿ ಕಾಣಿ ಕೊಂಡಿದೆಯೇ? ಉದಾಹರಣೆ ಕಂಪ್ಯೂಟರ್? ಮಿದುಳಿನ ಪ್ರತಿಯೊಂದ ನ್ಯೂರಾನ್‌ಗಳನ್ನು ಎಲೆಕ್ಟ್ರಾನಿಕ್ ಸೆಲ್‌ಗಳಿಂ ದ್ವಂದ್ವೀಕರಿಸಿ, ಮಿದುಳಿನ ಜಾಲದಂತೆಯೆ ಒಂದು ಎಲೆಕ್ಟ್ರಾನಿಕ್ ಜಾಲವನ್ನು ನಿರ್ಮಿಸು ಸಾಧ್ಯತೆ ಇದೆ. ಈ ರೀತಿ ಒಂದು ಸಿಲಿಕಾನ ಮಿದುಳನ್ನು ಕಟ್ಟಬಹುದೆಂದು ಊಹಿಸಲ ಸಾಧ್ಯ. ಹಾಗಾದರೆ ಅಂತಹ ಒಂದು ಕೃತ ಮಿದುಳಿನಲ್ಲಿ ಪ್ರಜ್ಞೆ ಉದ್ಭವಿಸುತ್ತದೆಯೇ ಅಸಂಭವ ಎಂಬುದೇ ಬಹುತೇಕ ವಿಜ್ಞಾನಿಗ ಅಭಿಮತ. ಆದರೆ ಈ ನಂಬಿ ಆಧಾರರಹಿತ. ಅಂತೂ ಪ್ರಜ್ಞೆ ಈ ರೀ ನಿಗೂಢವಾಗೇ ಉಳಿದಿದೆ ವಿಜ್ಞಾನಿಗಳಿ ದಾರ್ಶನಿಕರಿಗೆ ಸವಾಲಾಗಿ .

**ಡೆನ್ಮಾರ್ಕಿನ ಖಗೋಳ ವಿಜ್ಞಾನಿ ಟೈಖೋ ಚಿನ್ನದಿಂದ ತಯಾರಿಸಿದ ನಕಲಿ ಮೂಗು ಧರಿಸುತ್ತಿದ್ದ.**

*********

**ಸರ್ವಾಧಿಕಾರಿ ಬಯೂ ಬ್ರುಮೆಲ್ ಹಾಲಿನಲ್ಲಿ ಸ್ನಾನ ಮಾಡುತ್ತಿದ್ದನಂತೆ.**

## ಭಾವೋದ್ವೇಗ:

# ಹಠಾತ್ ಸಾವಿಗೆ ಆಹ್ವಾನ



**ಸಿಟ್ಟು, ಭಯ, ದ್ವೇಷ, ತೀವ್ರ ಸಂತಸ, ವಿಜಯದ ಸಂಭ್ರಮ. ಇವೆಲ್ಲ ತೀವ್ರ ಭಾವೋದ್ವೇಗದ ಕ್ಷಣಗಳು ನಿಮ್ಮನ್ನು ಹಠಾತ್ ಸಾವಿನ ಕಂದಕಕ್ಕೆ ತಳ್ಳಬಲ್ಲದು.**

ಅವರು ಬೃಹತ್ ಉದ್ಯಮ ಕಂಪೆನಿಯ ್ಯಾನೇಜರ್ ಆಗಿ 30 ವರ್ಷ ಸೇವೆ ಸಲ್ಲಿಸಿದರು. ವರೆ ಕಂಪೆನಿಯ ವ್ಯವಸ್ಥಾಪಕ ರ್ಗದವರೊಂದಿಗೆ ಯಾವುದೋ ಒಂದು ಮುಖ ವಿಷಯಕ್ಕೆ ಸಂಬಂಧಿಸಿದಂತೆ ತೀವ್ರ ನಸ್ತಾಪ ಉದ್ಭವಿಸಿ ಸೇವಾವಧಿ ರ್ತಿಯಾಗುವ ಮೊದಲೇ ಅವರು ೃತ್ತರಾದರು. ಸೇವೆಯಿಂದ ನಿವೃತ್ತರಾಗಿ ತಮ್ಮ ಟ್ಟೂರಿಗೆ ರೈಲಿನಲ್ಲಿ ಪ್ರಯಾಣಿಸಲು ರೈಲು ್ದಾಣಕ್ಕೆ ತಲುಪಿದ ತಕ್ಷಣವೇ ವಯಾಘಾತದಿಂದ ಹಠಾತ್ ನಿಧನರಾದರು. ಸದ ಬದುಕಿನಿಂದಲೇ ಶಾಶ್ವತವಾಗಿ ನಿವೃತ್ತಿ ಂದಿದರು.

ಅದೊಂದು ಸರಕಾರಿ ಕಾಲೇಜು. ಸೇವಾ ತನದ ಬಲದಿಂದ.... ಶ್ರೀ....ಯವರು 51ರ ಯುಸ್ಸಿನಲ್ಲಿ ಆ ಕಾಲೇಜಿನ ಪ್ರಿನ್ಸಿಪಾಲರಾಗಿ ನೇಮಕ ಹೊಂದಿದರು. ಅವರು ಪ್ರಿನ್ಸಿಪಾಲರಾಗಿ ನೇಮಕ ಹೊಂದಿದ ದಿನವೇ ಅತ್ತ ಹಳ್ಳಿಯಲ್ಲಿದ್ದ ಅವರ ವೃದ್ಧ ತಂದೆ ಅಲ್ಪ ಕಾಲದ ಅನಾರೋಗ್ಯದಿಂದ ತೀರಿಕೊಂಡರು. ತಂದೆಯ ಮರಣದ ಸುದ್ದಿ ಕೇಳಿ ತೀವ್ರ ಮಾನಸಿಕ ಆಘಾತದಿಂದ ಹೊಸ ಪ್ರಿನ್ಸಿಪಾಲರು ಹಠಾತ್ ನಿಧನರಾದರು.

ಮೇಲೆ ಉಲ್ಲೇಖಿಸಿದ ಎರಡು ಹಠಾತ್ ಸಾವಿನ ಪ್ರಕರಣಗಳು ಕಾಕತಾಳೀಯವೇ? ಭಾವನಾತ್ಮಕ ತುಮುಲ, ಮಾನಸಿಕ ಒತ್ತಡ ಅಸಹನೀಯವಾಗಿ ಈ ಹಠಾತ್ ಸಾವು ಸಂಭವಿಸಿರಬಹುದೇ? ಎಂಬುದು ಜಿಜ್ಞಾಸೆಯ ಪ್ರಶ್ನೆಗಳಾಗಿವೆ.

ಹಠಾತ್ ಸಾವಿನ ಪ್ರಕರಣಗಳು ಹೊಸ ವಿದ್ಯಮಾನವೇನಲ್ಲ. ತೀವ್ರ ಭಯ, ಸಿಟ್ಟು, ದುಃಖ, ಅವಮಾನ ಹಾಗೂ ತಡೆದುಕೊಳ್ಳಲಾಗದ ಸಂತಸ - ಇವೆಲ್ಲ ಒಬ್ಬ ವ್ಯಕ್ತಿಯನ್ನು ಹಠಾತ್ ಸಾವಿನ ಕಂದಕಕ್ಕೆ ತಳ್ಳಿದ ನಿದರ್ಶನಗಳಿವೆ. ಪ್ರಾಚೀನ ಇತಿಹಾಸದಲ್ಲಿಯೂ ಹಠಾತ್ ಸಾವಿನ ಪ್ರಕರಣಕ್ಕೆ ಸಂಬಂಧಿಸಿದಂತೆ ಲಿಖಿತ ದಾಖಲೆಗಳಿವೆ. ಕ್ರಿ.ಪೂ. ಒಂದನೇ ಶತಮಾನದಲ್ಲಿ ರೋಮನ್ ಚಕ್ರವರ್ತಿ ನರ್ವಾ‍ಠನಗೆ ಅವಿಧೇಯವಾಗಿ ವರ್ತಿಸಿದ ಸಚಿವರೊಬ್ಬರ ಮೇಲೆ ಸಿಟ್ಟಾಗಿ ಕಿರುಚಿ ಹಠಾತ್ ಹೊಂದಿದನಂತೆ. ಮಧ್ಯಯುಗದಲ್ಲಿ ಪೋಪ್ ಮೂರನೇ ಇನ್ನೊಸಂಟ್‌ನ ಸೇನೆಗೂ ಸಿಸಿಲಿಯ

**ಮೂಲ: ಡಾ. ಜಾರ್ಜ್ ಎಂಗೆಲ್**
**ಕನ್ನಡಕ್ಕೆ: ಪದ್ಮನಯನ.**

ದೊರೆ ಮುನ್ ಫ್ರೆಡ್‌ನ ಸೇನೆಗೂ ತೀವ್ರ ಕದನ ನಡೆಯಿತು. ಯುದ್ಧದಲ್ಲಿ ಪೋಪ್ ಇನ್ನೊಸಂಟ್‌ರ ಸೈನ್ಯ ಅತ್ಯಂತ ಹೀನಾಯ ಸೋಲು ಅನುಭವಿಸಿತು. ಈ ಅಘಾತ ಸಹಿಸಲಾರದೆ ಪೋಪ್ ಇನ್ನೊಸಂಟ್ ತೃತೀಯ ಹಠಾತ್ ನಿಧನ ಹೊಂದಿದರು.

19 ನೇ ಶತಮಾನದ ಕೊನೆಯ ಕಾಲಘಟ್ಟದಲ್ಲಿ ರೋಗಾಣುಗಳಿಂದಲೇ ಭಯಾನಕ ರೋಗಗಳು ಹರಡುತ್ತವೆ ಎಂಬ ಸಿದ್ಧಾಂತವು ಚಾಲ್ತಿಗೆ ಬಂದಿತು. ಈ ಸಿದ್ಧಾಂತ ಪ್ರಚಾರಕ್ಕೆ ಬಂದ ಬಳಿಕ ಹಠಾತ್ ಸಾವಿಗೆ ಭಾವನಾತ್ಮಕ ತುಮುಲಗಳೇ ಕಾರಣವೆಂಬ ವಿಚಾರವು ಹಿನ್ನೆಲೆಗೆ ಸರಿಯಿತು. ಆದರೂ ಈ ದಿಶೆಯಲ್ಲಿ ವೈಜ್ಞಾನಿಕ ಕುತೂಹಲ ತಣಿಯಲಿಲ್ಲ. 1960ರ ದಶಕದಲ್ಲಿ ಹೃದಯ ರೋಗದಿಂದ ತತ್ತರಿಸುವಗರು. ಹಠಾತ್ ನಿಧನ ಹೊಂದಿದ ಹಲವು ಪ್ರಕರಣಗಳ ಬಗ್ಗೆ ವೈದ್ಯಕೀಯ ತಜ್ಞರು ಅಧ್ಯಯನ ಮಾಡಿದರು.

ಹಠಾತ್ ನಿಧನದ ಪ್ರಕರಣಗಳ ಬಗ್ಗೆ ಇಷ್ಟೊಂದು ತೀವ್ರ ಕುತೂಹಲ ಹುಟ್ಟಲು ಕಾರಣವೇನೆಂದು ನೀವು ಯೋಚಿಸುತ್ತಿರಬಹುದಲ್ಲವೇ? 1963 ರಲ್ಲಿ ನನ್ನ ಇಬ್ಬರು ಅವಳಿ ಸಹೋದರರು ಹೃದಯ ವೈಫಲ್ಯದಿಂದ ನಿಧನರಾದರು. ಅವರ ಸಾವು ಸಂಭವಿಸಿ ಹನ್ನೊಂದು ದಿನಗಳ ಬಳಿಕ (ಯೆಹೂದಿ ಸಂಪ್ರದಾಯದಲ್ಲಿ ಮೃತರಿಗೆ ಶೋಕಾಚರಣೆ ನಡೆಸುವ ,ಕೊನೆಯ ದಿನ). ನನಗೆ ಹೃದಯಾಘಾತವಾಯಿತು.

ಈ ಘಟನೆಯ ತರುವಾಯ ಹಠಾತ್ ಸಾವಿಗೆ ಸಂಬಂಧಿಸಿದಂತೆ ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟವಾದ ಸುದ್ದಿಗಳನ್ನು ಸಂಗ್ರಹಿಸಲು ಆರಂಭಿಸಿದೆ. ಈ ಕೆಲಸದಲ್ಲಿ ನನ್ನ ಸಹೋದ್ಯೋಗಿಗಳು ನನಗೆ ನೆರವಾದರು. ಹಠಾತ್ ಮರಣದ 257 ಪ್ರಕರಣಗಳಿಗೆ ಸಂಬಂಧಿಸಿದ ಸುದ್ದಿಗಳನ್ನು ಸಂಗ್ರಹಿಸಿದೆ. ಇಂಥ ಪ್ರಕರಣಗಳಲ್ಲಿ ಒಬ್ಬ ವ್ಯಕ್ತಿಯ ವೈಯಕ್ತಿಕ ಜೀವನದಲ್ಲಿ ಆಘಾತಕಾರಿಯೆನಿಸಿದ ಪ್ರಮುಖ



ಘಟನೆ ಸಂಭವಿಸಿದ ಬಳಿಕ ಕೆಲವೇ ನಿಮಿಷಗಳಲ್ಲಿ ಅಥವಾ ಒಂದು ತಾಸಿನ ಅವಧಿಯಲ್ಲಿ ಹಠಾತ್ ಸಾವು ಸಂಭವಿಸಿತ್ತು. ಬಹಳಷ್ಟು ಪ್ರಕರಣಗಳಲ್ಲಿ ಹಠಾತ್ ಮರಣಕ್ಕೆ ಬಲಿಯಾದವರು ಯಾವುದೇ ಕಾಯಿಲೆಗಳಿಂದ ನರಳುತ್ತಿರಲಿಲ್ಲ. ತೀವ್ರ ಅನಾರೋಗ್ಯದಿಂದ ಬಳಲುತ್ತಿರಲಿಲ್ಲ.

## ಮುಖ್ಯ ಕಾರಣಗಳು

ಹಠಾತ್ ನಿಧನದ 275 ಪ್ರಕರಣಗಳಿಗೆ ಮುಖ್ಯ ಕಾರಣಗಳನ್ನು ಆಳವಾಗಿ ವಿಶ್ಲೇಷಿಸಿದಾಗ ನಾಲ್ಕು ಮುಖ್ಯ ಗುಂಪುಗಳು ವ್ಯಕ್ತವಾದುವು. ಮಾನವ ಸಂಬಂಧಗಳು ಅತ್ಯಂತ ವೇದನಾತ್ಮಕವೆನಿಸುವಂತೆ ಅಸ್ತವ್ಯಸ್ತವಾದಾಗ ಅಥವಾ ಜೀವನದಲ್ಲಿ ತಾವು ಅತ್ಯಂತ ಗಾಢವಾಗಿ, ಆತ್ಮೀಯವಾಗಿ ಪ್ರೀತಿಸಿದ ವ್ಯಕ್ತಿಯ ಸಾವಿನ ಪುಣ್ಯತಿಥಿಯ ಸಂದರ್ಭದಲ್ಲಿ ಮಾನಸಿಕ ಆಘಾತ ತಡೆದುಕೊಳ್ಳಲಾಗದೆ ಸಂಭವಿಸಿದ 135 ಹಠಾತ್ ಸಾವುಗಳ ಪ್ರಕರಣಗಳು ಮೊದಲ ವರ್ಗದಲ್ಲಿ ಸೇರುತ್ತದೆ. ಈ 135 ಪ್ರಕರಣಗಳಲ್ಲಿ 57 ಸಾವುಗಳು ತಕ್ಷಣ ಕುಸಿದು ಬಿದ್ದು ಸಂಭವಿಸಿದ ಸಾವುಗಳಾಗಿದ್ದುವು.

ಪ್ರವಾಹದಿಂದ ಉಕ್ಕಿ ಹರಿಯುತ್ತಿದ್ದ ನದಿಯಲ್ಲಿ ಮುಳಾಗಿ ಹೋಗುತ್ತಿದ್ದ ತನ್ನ ಮಗಳನ್ನು ರಕ್ಷಿಸಲು

ಸಾಧ್ಯವಾಗದ ತಂದೆಯೊಬ್ಬ (38ರ ಹರೆಯ) ದುಃಖಾತಿರೇಕದಿಂದ ಕುಸಿದು ಬಿದ್ದ ಸತ್ತ.

ಹಾಗೆಯೇ ರಸ್ತೆ ಅಪಘಾತದಲ್ಲಿ 22ರ ಹರೆಯದ ತನ್ನ ಮಗಳು ಸತ್ತು, ಇಬ್ಬರು ಮೊಮ್ಮಕ್ಕಳು ತೀವ್ರವಾಗಿ ಗಾಯಗೊಂಡ ಸುದ್ದಿ ಕೇಳಿದ 49ರ ಹರೆಯದ ತಂದೆ ಹಠಾತ್ ನಿಧನ ಹೊಂದಿವೆ.

ಇವೆರಡು ಪ್ರಕರಣಗಳು ಮೊದಲ ವರ್ಗದ (135 ಸಾವುಗಳು) ಹಠಾತ್ ಸಾವುಗಳ ಪ್ರಕರಣದಲ್ಲಿ ಒಳಗೊಂಡಿದ್ದವು 135 ಹಠಾತ್ ಸಾವಿನ ಪ್ರಕರಣಗಳಲ್ಲಿ 50 ಪ್ರಕರಣಗಳು ದಂಪತಿಗಳಲ್ಲಿ ಒಬ್ಬರ ಸಾವು ಸಂಬಂಧಿಸಿದ ಮೊದಲ ಎರಡು ವಾರಗಳ ಅವಧಿಯಲ್ಲಿ ನಡೆದವು. ಮೂರು ಸಾವುಗಳು ನಾಲ್ಕು ದಿನಗಳ ಅಂತರದಲ್ಲಿ ಸಂಭವಿಸಿದುವು. ತೀವ್ರ ಹೃದಯಾಘಾತದಿಂದ 83ರ ವೃದ್ಧನೊಬ್ಬನನ್ನು ಚಿಕಿತ್ಸೆಗಾಗಿ ಆಸ್ಪತ್ರೆಗೆ ಸೇರಿಸಿದರು. ಕಾಯಿಲೆಯ ಅವಧಿಯಲ್ಲಿ ಅವನ ಪತ್ನಿ ಹಠಾತ್ ತೀರಿಕೊಂಡಳು. ಅವನ ಮಲಮಗ 61ರ ಹರೆಯದ ವ್ಯಕ್ತಿ ಸಮೀಪದ ನಗರದಲ್ಲಿದ್ದವನು ಮಲ ತಾಯಿಯ ಶವಸಂಸ್ಕಾರ ಸಂದರ್ಭದಲ್ಲಿ ಹಾಜರಾದ. ಶವಸಂಸ್ಕಾರ ಮುಗಿದ ಬಳಿಕ ಆತನೂ ಕುಸಿದು ಬಿದ್ದ ಸತ್ತ. ಪತ್ನಿಯನ್ನು ಮಗನನ್ನು ಕಳೆದುಕೊಂಡ ಮುದುಕ ಮರುದಿನ ಸತ್ತ.

ಇನ್ನೂ 103 ಹಠಾತ್ ಸಾವಿನ ಪ್ರಕರಣಗಳು ಈ ಕೆಳಗಿನ ಕಾರಣಗಳಿಂದ ಸಂಭವಿಸಿದ್ದವು. ವೈಯಕ್ತಿಕ ಅಪಾಯದ ಭೀತಿ, ಜೀವಕಳೆದುಕೊಳ್ಳುವ ಭೀತಿ, ಆಕ್ರಮಣ, ಹಲ್ಲೆಯ ಭೀತಿ, ಇತ್ಯಾದಿ ...ನಡುವಯಸ್ಸು ದಾಟಿದ ವ್ಯಕ್ತಿಯೊಬ್ಬ ಮೂತ್ರ ವಿಸರ್ಜನೆಗೆಂದು ಸಾರ್ವಜನಿಕ ಶೌಚಾಲಯಕ್ಕೆ ಹೋಗಿದ್ದಾಗ ಅಚಾನಕ್ ಬಾಗಿಲಿನ ಚಿಲುಕ ಹೊರಗಿನಿಂದ ಹಾಕಿಕೊಂಡು ಆತ ಒಳಗೇ ಸಿಕ್ಕಿಹಾಕಿಕೊಂಡ. ಬಿಡಿಸಿಕೊಳ್ಳುವ ಪ್ರಯತ್ನದಲ್ಲಿ ಒದ್ದಾಡುತ್ತಿದ್ದಾಗಲೇ ಹಠಾತ್ ನಿಧನ ಹೊಂದಿದ. ಇನ್ನೊಂದು ಪ್ರಕರಣದಲ್ಲಿ ಇಬ್ಬರು ಸ್ನೇಹಿತರು ತೀವ್ರ ವಾಗ್ವಾದದಲ್ಲಿ ತೊಡಗಿದ್ದರು. ಅವರ ಮಧ್ಯೆ ಹೊಡೆದಾಟವೇನೂ ನಡೆಯಲಿಲ್ಲ. ಆದರೆ ಅವರಲ್ಲಿ ಒಬ್ಬಾತ ಕುಸಿದು ಬಿದ್ದು ಸತ್ತ. ಇನ್ನೊಬ್ಬನಿಗೆ ಹಿಂದಿನಿಂದ ಹೃದಯದ ಕಾಯಿಲೆ ಬಾಧಿಸುತ್ತಿತ್ತು. ತೀವ್ರ ವಾಗ್ವಾದದಲ್ಲಿ ತೊಡಗಿದಾಗ ಉಸಿರೆಳೆದುಕೊಳ್ಳುವುದೂ ಕಷ್ಟವಾಗುತ್ತಿತ್ತು. ತುಸು ಹೊತ್ತಿನ ಬಳಿಕ ಆತನೂ ತೀರಿಕೊಂಡ. ಇನ್ನೊಂದು ಪ್ರಕರಣ ಬಹಳ ವಿಚಿತ್ರವಾಗಿದ್ದಿತು. ಐವತ್ತರ ವಯಸ್ಸಿನ ವ್ಯಕ್ತಿಯೊಬ್ಬ ಭಾರೀ ಭೂಕಂಪ ಸಂಭವಿಸಿದಾಗಲೂ ಬದುಕಿ ಉಳಿದಿದ್ದ. ಆದರೆ ಕೆಲವು ತಿಂಗಳ ಬಳಿಕ ಆತ ಮನೆಯಲ್ಲಿದ್ದಾಗ ಒಮ್ಮೆ ಭೂಮಿ ಸಣ್ಣಗೆ ಕಂಪಿಸಿತು. ಆತ ಭೀತಿಯಿಂದ ಕುಳಿತಲ್ಲೇ ಹಠಾತ್ ನಿಧನಹೊಂದಿದ.

ಹಠಾತ್ ಸಾವಿಗೆ ಸಂಬಂಧಿಸಿದಂತೆ ಪತ್ರಿಕೆಗಳಲ್ಲಿ ವರದಿಯಾದ ಸುಮಾರು 21 ಸುದ್ದಿಗಳನ್ನು ವಿಶ್ಲೇಷಿಸಿದಾಗ ತೀವ್ರ ನಿರಾಶೆ, ಸೋಲು, ಸ್ಥಾನಮಾನಗಳಿಂದ ವಂಚಿತವಾಗಿರುವಿಕೆಯೂ ಅವುಗಳಿಗೆ ಕಾರಣವೆಂಬುದು ತಿಳಿದುಬಂದಿತು.

ಒಂದು ಕಾಲೇಜಿನ 'ಬೋರ್ಡ್ ಆಫ್ ಟ್ರಸ್ಟಿ'ಗಳು ಅದೇ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿರುವ 59ರ ಹರೆಯದ ಪ್ರೊಫೆಸರ್ ಒಬ್ಬರನ್ನು ಹುದ್ದೆಯಿಂದ ನಿವೃತ್ತಿಗೊಳಿಸಿದರು. ಅವರ ಉತ್ತಾರಾಧಿಕಾರಿ ಅಧಿಕಾರ ಸ್ವೀಕರಿಸುವ ಸಮಾರಂಭದಲ್ಲಿ ಹಾಜರಿದ್ದ ಈ ಪ್ರೊಫೆಸರ್ ಹೃದಯಾಘಾತದಿಂದ ನಿಧನರಾದರು.

ನಾಲ್ಕನೇ ಗುಂಪಿನ 16 ಮಂದಿ ಜೀವನದಲ್ಲಿ ಮಹತ್ವದ ಸಾಧನೆಮಾಡಿದ ಹರ್ಷದಲ್ಲಿ ಈ ಅತಿಯಾದ ಸಂತಸ ತಾಳಲಾರದೆ ಮೃತರಾದರು. ಹರ್ಷದಾಯಕ ಪುನರ್ಮಿಲನವೂ ಕೆಲವರ ಹಠಾತ್ ಸಾವಿಗೆ ಕಾರಣವಾಯಿತು. 55ರ ಹರೆಯದ ವ್ಯಕ್ತಿಯೊಬ್ಬರು 30 ವರ್ಷಗಳಿಂದಲೂ ಅಗಲಿದ್ದ 88ರ ತನ್ನ ವೃದ್ಧ ತಂದೆಯನ್ನು

ಭೇಟಿಯಾದಾಗ ಆ ಪುನರ್ಮಿಲನದ ಹರ್ಷದ ಭಾರದಲ್ಲಿ 55ರ ಹರೆಯದ ವ್ಯಕ್ತಿ ಹಠಾತ್ ತೀರಿಕೊಂಡ. ಲಾಟರಿಯಲ್ಲಿ ಒಂದು ಲಕ್ಷ ರೂ. ಬಹುಮಾನ ಗಳಿಸಿದ 75ರ ಹರೆಯದ ವ್ಯಕ್ತಿಯೊಬ್ಬ ಈ ಲಾಟರಿ ಟಿಕೆಟನ್ನು ಅಧಿಕಾರಿಗಳಿಗೆ ಸಲ್ಲಿಸಿ ನಗದು ಹಣ ಪಡೆಯಲು ಹೋದಾಗ ಸಂತೋಷಾಧಿಕ್ಯದಿಂದ ಹಠಾತ್ ನಿಧನ ಹೊಂದಿದ.

ಹಠಾತ್ ಸಾವಿಗೆ ಸಂಬಂಧಿಸಿದಂತೆ ಈ ವರೆಗೆ ಇಲ್ಲಿ ಉಲ್ಲೇಖಿಸಿದ ಪ್ರಕರಣಗಳನ್ನು ವಿಶ್ಲೇಷಿಸಿದಾಗ ಈ ಕೆಳಗಿನ ಕೆಲವು ಕಠೋರ ಸತ್ಯಗಳು ನಮ್ಮ ಕಣ್ಣಮುಂದೆ ಬಂದು ನಿಲ್ಲುತ್ತವೆ. ಹಠಾತ್ ಸಾವಿಗೆ ಗುರಿಯಾದ ಬಹಳಷ್ಟು ಮಂದಿ ಜೀವನದಲ್ಲಿ ಅಲಕ್ಷಿಸಲು ಅಸಾಧ್ಯವೆನಿಸಿದ, ದುರ್ಭರ ಘಟನೆಗಳನ್ನು ಎದುರಿಸಬೇಕಾಯಿತು. ಅಂತಹ ಘಟನೆಗಳು ಅಥವಾ ಪರಿಸ್ಥಿತಿಯ ಮೇಲೆ ನಿಯಂತ್ರಣವಿಡಲು ಅಥವಾ ಅವನ್ನು ಬದಲಾಯಿಸಲು, ವ್ಯತ್ಯಸ್ತಗೊಳಿಸಲು ತಮ್ಮಿಂದ ಸಾಧ್ಯವೇ ಇಲ್ಲ ಎನ್ನುವಂಥ ಪರಿಸ್ಥಿತಿಗೆ ತಲುಪಿದ್ದರು.

ಇನ್ನೊಂದು ಉದಾಹರಣೆಯನ್ನು ಇಲ್ಲಿ ಗಮನಿಸೋಣ. 45ರ ಹರೆಯದ ವ್ಯಕ್ತಿಯೊಬ್ಬ ಒಂದು ಪಟ್ಟಣದಲ್ಲಿ ನೆಲಸಿದ್ದ. ಏನೋ ಕಾರಣದಿಂದ ಅವನಿಗೆ ಈ ಪಟ್ಟಣದಲ್ಲಿ ಜೀವನ ಸಾಗಿಸಲು ಸಾಧ್ಯವೇ ಇಲ್ಲವೆನಿಸಿತು. ಇನ್ನೊಂದು ಪಟ್ಟಣದಲ್ಲಿ ಹೊಸ ಉದ್ಯೋಗಕ್ಕೆ ಸೇರಿ ಅಲ್ಲಿ ನೆಲಸಲು ಬಯಸಿದ. ಆದರೆ ಅಲ್ಲಿಯೂ ಕೆಲವು ಸಮಸ್ಯೆಗಳಿದ್ದುವು. ಹೀಗಿದ್ದರೂ ಆತ ಹಿಂಜರಿಯದೆ ಹೊಸ ಉದ್ಯೋಗಕ್ಕೆ ಸೇರಲು ಆ ಪಟ್ಟಣಕ್ಕೆ ತೆರಳಲು ರೈಲಿನಲ್ಲಿ ಪ್ರಯಾಣ ಆರಂಭಿಸಿದ. ಜೊತೆಯಲ್ಲಿ ಆತನ ಮಿತ್ರನೂ ಇದ್ದ. ಪ್ರಯಾಣದ ಮಧ್ಯೆ ಒಂದು ಸ್ಟೇಷನ್‌ನಲ್ಲಿ ರೈಲು ನಿಂತಾಗ ಅಲ್ಲಿ ಇಳಿದ. ಮೊದಲು ಉದ್ಯೋಗದಲ್ಲಿದ್ದ ಪಟ್ಟಣಕ್ಕೆ ಹಿಂತಿರುಗುವುದೇ ಅಥವಾ ಹೊಸ ಪಟ್ಟಣಕ್ಕೆ ಹೋಗಿ ಅಲ್ಲಿ ಉದ್ಯೋಗಕ್ಕೆ ಸೇರುವುದೇ ಎಂಬ ದ್ವಂದ್ವದಲ್ಲಿ

## ಪರಿತಾಪ



(ಭೂ)ಮಾತೆ
ನಿನ್ನೊಡಲ ಮಕ್ಕಳ
ಸಾಕುವ ಪರಿಯ
ಅರಿಯಲಾರರು ಇವರು
ಅರಿತುಕೊಂಡಿದ್ದಾರೆ
ತುಳಿದು....
ನಿಲ್ಲುವ ಪರಿಯ!

• ಎ. ಪ್ರಮೀಳ ಕರುಂಬಯ್ಯ

ಅವನ ಮನಸ್ಸು ಸಿಲುಕಿತ್ತು ಆತ ಆ ರೈಲ್ವೇ ನಿಲ್ದಾಣದಲ್ಲಿಯೇ ಹೃದಯ ಸ್ತಂಭನದಿಂದ ತೀರಿಕೊಂಡ.

ಹಠಾತ್ ಸಾವುಗಳಿಗೆ ಬಹಳಷ್ಟು ಸಂದರ್ಭಗಳಲ್ಲಿ ತೀವ್ರ ಭಾವನಾತ್ಮಕ ತುಮುಲವೇ ಕಾರಣವಾಗಿರುತ್ತವೆ. ಅಂಥ ಸಾವು ಮಾನವರಿಗೆ ಮಾತ್ರವಲ್ಲ ಪ್ರಾಣಿಗಳಿಗೂ ಸಂಭವಿಸುತ್ತದೆ. ಉಗ್ರಕಾದಾಟದ ಸಂದರ್ಭದಲ್ಲಿ ಅಥವಾ ಬಂಧನದಿಂದ ತಪ್ಪಿಸಿಕೊಳ್ಳುವುದು ಅಸಾಧ್ಯವೆನಿಸಿದ ಸಂದರ್ಭದಲ್ಲಿ ಅಥವಾ ಅಪರಿಚಿತವೆನಿಸಿದ ಸ್ಥಳಕ್ಕೆ ತಮ್ಮನ್ನು ಸ್ಥಳಾಂತರಿಸಿದ ಸಂದರ್ಭದಲ್ಲಿ ಕೆಲವು ಪ್ರಾಣಿಗಳು ಹಠಾತ್ ಸಾವಿಗೀಡಾದ ಪ್ರಕರಣಗಳು ಪ್ರಾಣಿಪ್ರಪಂಚದಲ್ಲಿ ಕಂಡುಬರುತ್ತವೆ.

ಮಾನವರಲ್ಲಿ ಹಾಗೂ ಪ್ರಾಣಿಗಳಲ್ಲಿ ಇಂಥ ಶಾರೀರಿಕ ಬದಲಾವಣೆಗಳಲ್ಲಿ ಎರಡು ಮೂಲಭೂತ ತುರ್ತು ವ್ಯವಸ್ಥೆಗಳು ಒಳಗೊಂಡಿರುತ್ತವೆ. ಮೊದಲನೆಯದು ಹೋರಾಟ ಪ್ರವೃತ್ತಿ (Fighting Mechanism). ಈ ಪ್ರವೃತ್ತಿಯು ಕ್ಷಿಪ್ರ ಚಲನ ವಲನ ಚಟುವಟಿಕೆಗಳಿಗೆ ನಮ್ಮ ದೇಹದ ಶಕ್ತಿಯನ್ನು ಒಗ್ಗೂಡಿಸುತ್ತದೆ. ಇನ್ನೊಂದು ಪ್ರವೃತ್ತಿ ಎಂದರೆ ಸಂರಕ್ಷಣೆ ಹಾಗೂ ಹಿಂತೆಗೆದುಕೊಳ್ಳುವ ಪ್ರವೃತ್ತಿ (Conservation with drawal

Mechanism). ಸಾಮಾನ್ಯವಾಗಿ ಇವೆರಡೂ ಪ್ರವೃತ್ತಿಗಳು ಪರಸ್ಪರ ಹೊಂದಿಕೊಂಡು ನಿಕಟ ಬಾಂಧವ್ಯದ ನೆಲೆಯಲ್ಲಿ ಕಾರ್ಯನಿರ್ವಹಿಸುತ್ತವೆ. ಕೆಲವೊಮ್ಮೆ ತೀವ್ರ ಸಂಘರ್ಷಮಯ ಅಥವಾ ಜಟಿಲ ಪರಿಸ್ಥಿತಿಯಲ್ಲಿ ಇವುಗಳ ನಡುವಿನ ಸಂಬಂಧಗಳು ಕಡಿದುಹೋಗಿ ಮಾನಸಿಕ ಅನಿಶ್ಚಿತ ಪರಿಸ್ಥಿತಿ ಉದ್ಭವಿಸುತ್ತದೆ. ಈ ಬೆಳವಣಿಗೆ ನಮ್ಮ ದೇಹದಲ್ಲಿ ಹೃದಯ ಮತ್ತು ರಕ್ತ ಪರಿಚಲನೆಯ ಕರ್ತವ್ಯವನ್ನು ಹದಗೆಡಿಸುತ್ತದೆ. ಮಾನವರಲ್ಲಿ ಹಠಾತ್ ಸಾವಿಗೆ ಇದೂ ಒಂದು ಮುಖ್ಯ ಕಾರಣವೆನ್ನಬಹುದು. ಹೃದಯ ಚಟುವಟಿಕೆ ತೀವ್ರವಾಗಿ ಅಸ್ತವ್ಯಸ್ತವಾಗಿ ಹಠಾತ್ ಸಾವು ಸಂಭವಿಸುತ್ತದೆ.

ತೀವ್ರ ಭಾವನಾತ್ಮಕ ತುಮುಲಗಳಿಗೆ ಗುರಿಯಾದಾಗ ಶರೀರದಲ್ಲಿ ಹಾರ್ಮೋನ್ ಘಟಕಗಳ ಸ್ರಾವವೂ ಹೃದಯದ ಚಟುವಟಿಕೆಯ ಮೇಲೆ ಪ್ರಭಾವ ಬೀರುತ್ತದೆ. ಹೀಗಾಗಿ ಭಾವನಾತ್ಮಕ ತುಮುಲ ಹಾಗೂ ಮಾನಸಿಕ ಒತ್ತಡಕ್ಕೂ ಸಾವಿಗೂ ನಿಕಟ ಸಂಬಂಧವಿದೆ. ಹೃದಯ ವ್ಯಾಧಿಯಿಂದ ನರಳುವ ರೋಗಿಗಳು ಹಾಗೂ ದೀರ್ಘಕಾಲದಿಂದ ತೀವ್ರ ಕಾಯಿಲೆಯಿಂದ ನರಳುವ ರೋಗಿಗಳಿಗೆ ಚಿಕಿತ್ಸೆ ನೀಡುವ ವೈದ್ಯರು ಮುಂದೆ ಈ ರೋಗಿಗಳು ಬದುಕಿನಲ್ಲಿ ಎದುರಿಸ ಬೇಕಾಗುವ ಭಾವನಾತ್ಮಕ ತುಮುಲಗಳ ಬಗ್ಗೆ ಆದಷ್ಟು ಜಾಗರೂಕತೆ ವಹಿಸಲು ಮುಂಚಿತವಾಗಿಯೇ ಎಚ್ಚರಿಕೆ ನೀಡುತ್ತಾರೆ. ಉದಾಹರಣೆಯಾಗಿ ನಿವೃತ್ತಿ ಜೀವನದ ಆರಂಭ, ಬದುಕಿನಲ್ಲಿ ತಮಗೆ ಅತ್ಯಂತ ಪ್ರೀತಿ ಪಾತ್ರರಾದವರು ಸತ್ತು ಒಂದು ವರ್ಷವಾಗುವುದರೊಳಗೆ ಅವರ ಪುಣ್ಯತಿಥಿ ಆಚರಿಸುವ ಸಂದರ್ಭ, ದೀರ್ಘಕಾಲದ ಅಗಲುವಿಕೆಯ ಬಳಿಕ ಆತ್ಮೀಯರ ಪುನರ್ಮಿಲನ - ಇವೇ ಮುಂತಾದ ದೈನಂದಿನ ಬದುಕಿನ ಘಟನಾವಳಿಗಳ ಸಮ್ಮುಖದಲ್ಲಿ ತೀವ್ರ ಭಾವೋದ್ವೇಗಕ್ಕೆ ಒಳಗಾಗದಂತೆ ಮಾನಸಿಕ ಸ್ಥಿಮಿತವನ್ನು ನಾವು ಕಾಯ್ದುಕೊಳ್ಳಬೇಕು. ಹಠಾತ್ ಸಾವಿನಿಂದ ನಮ್ಮನ್ನು ರಕ್ಷಿಸಿಕೊಳ್ಳಲು ಇದೊಂದು ಪ್ರಮುಖ ಮಾರ್ಗವಾಗಿದೆ. ●

(ಕೃಪೆ: ರೀಡರ್ಸ್ ಡೈಜೆಸ್ಟ್).

## ಲಿಂಕನ್‌ರ ಮಾನವೀಯತೆ

ಅಬ್ರಹಾಂ ಲಿಂಕನ್ ವಕೀಲ ವೃತ್ತಿಯನ್ನು ನಡೆಸುತ್ತಿದ್ದ ದಿನಗಳಲ್ಲಿ ಒಬ್ಬಾತ ತಾನು ಇನ್ನೊಬ್ಬನಿಗೆ ನೀಡಿದ ಸಾಲವನ್ನು ವಸೂಲಿ ಮಾಡಲು ಅವನ ವಿರುದ್ಧ ಮೊಕದ್ದಮೆ ಹೂಡುವಂತೆ ಅವರನ್ನು ಕೇಳಿಕೊಂಡ. ತನ್ನ ಬಳಿಗೆ ಬಂದ ಕಕ್ಷಿದಾರನ ಕಡೆ ನ್ಯಾಯವಿರುವದು ಲಿಂಕನ್‌ರಿಗೆ ಮನದಟ್ಟಾಯಿತು. ಸಾಲವನ್ನು ಪಡೆದ ವ್ಯಕ್ತಿಯ ಬಗ್ಗೆ ವಿಚಾರಿಸಿದಾಗ ಆತನ ದಾರುಣ ಪರಿಸ್ಥಿತಿಯ ವಿವರಗಳು ತಿಳಿದವು.

ಸಾಲ ಪಡೆದವನು ಒಬ್ಬ ಬಡ ರೈತ. ಪ್ರಾಮಾಣಿಕ. ಸಾಲ ಪಡೆದದ್ದು ದಿಟ. ಆದರೆ ಪ್ರಾಮಾಣಿಕತೆಯಿಂದ ದುಡಿದರೂ ಪಡೆದ ಸಾಲವನ್ನು ಆತನಿಂದ ತೀರಿಸಲಾಗಲಿಲ್ಲ. ಆತನ ಪ್ರಯತ್ನಗಳೆಲ್ಲ ವಿಫಲವಾದವು.

ಈ ಮೊಕದ್ದಮೆಯಲ್ಲಿ ರೈತ ಸೋತರೆ ಆತನ ಹೆಂಡತಿ ಮಕ್ಕಳು ಬೀದಿಯಲ್ಲಿ ಬೀಳುವರು ಎಂಬುದನ್ನು ಗ್ರಹಿಸಿದ ಲಿಂಕನ್ ಫಿರ್ಯಾದುದಾರನನ್ನು ಕಂಡು ಈ ಸಾಲದ ಹಣ ವಸೂಲಾದ ತಕ್ಷಣ ನೀವು ಸಿರಿವಂತರಾಗುವುದಿಲ್ಲ ಹಣ ಬರದಿದ್ದರೆ ನೀವೇನೂ ಬಡವರಾಗುವುದಿಲ್ಲ. ಆದರೆ ಆ ಮನುಷ್ಯನ ಬದುಕು ಹಾಳಾಗುತ್ತದೆ. ಆದ್ದರಿಂದ ಮೊಕದ್ದಮೆ ಹೂಡುವದು ಬೇಡ. ಆದ್ದರಿಂದ ನಿಮ್ಮ ಉದಾರತೆ ನೆಲೆಗೊಳ್ಳುತ್ತದೆ. ನಿಮಗೆ ಮತ್ತು ಆತನಿಗೆ ನೆಮ್ಮದಿ ಸಿಗುತ್ತದೆ ಅಂದರು.

ಅವರ ಮಾತಿಗೆ ಫಿರ್ಯಾದುದಾರ ಒಪ್ಪಿಕೊಂಡ. ರೈತ ಉಳಿದುಕೊಂಡ.

• (ಸಂ) ಬಾಲಯೋಗಿ.

# ವಿಚಿತ್ರ ಜಗತ್ತು

## ಗಜರಾಜನ ಪಶ್ಚಾತ್ತಾಪ

ಅಸ್ಸಾಂನಲ್ಲಿ ಕಾಡಾನೆಯೊಂದು ಒಬ್ಬನನ್ನು ತುಳಿದು ಸಾಯಿಸಿತು. ಮೃತ ವ್ಯಕ್ತಿಯ ಕಳೇಬರವನ್ನು ಪಡೆಯಲು ಅರಣ್ಯಾಧಿಕಾರಿಗಳು ಎಷ್ಟೇ ಪ್ರಯತ್ನಿಸಿದರೂ ಆನೆ ಸುತರಾಂ ಬಿಟ್ಟುಕೊಡಲಿಲ್ಲ.

ಈ ಘಟನೆ ಅಸ್ಸಾಂ ರಾಜಧಾನಿ ಗೌಹಾತಿಯಿಂದ 125 ಕಿ.ಮೀ. ದೂರದಲ್ಲಿರುವ ಗ್ರಾಮವೊಂದರಲ್ಲಿ ನಡೆಯಿತು. ಗ್ರಾಮದೊಳಗೆ ನುಗ್ಗಿ ಹಾವಳಿ ಎಬ್ಬಿಸಿದ್ದ ಕಾಡಾನೆಗಳ ಹಿಂಡಿನಿಂದ ಪಾರಾಗಲು ಕೊಟಮಾ ಬೋರಾ ಎಂಬಾತ ಎತ್ತರದ ಮರವೇರಿ ಕುಳಿತ. ಸಿಟ್ಟಿಗೆದ್ದ ಕಾಡಾನೆ ಅವನನ್ನು ಓಡಿಸಿಕೊಂಡು ಬಂದು ಸೊಂಡಿಲಿನಿಂದ ಮರವನ್ನು ಸುತ್ತು ಹಾಕಿ ಎಳೆದು ಉರುಳಿಸಿ ಕೊಟಮಾ ಬೋರಾನನ್ನು ತುಳಿದು ಸಾಯಿಸಿತು. ಎರಡುವಾರಗಳ ಕಾಲ ಈ ಕಾಡಾನೆ ಕೊಟಮಾ ಬೋರಾನ ಕಳೇಬರದ ಪಕ್ಕದಲ್ಲಿಯೇ ಮಲಗಿ ಅದನ್ನು ಕಾಯುತ್ತಿತ್ತು. ನಿತ್ಯವೂ ಅದು ಪಕ್ಕದ ಕೆರೆಯಿಂದ ಸೊಂಡಿಲಿನಲ್ಲಿ ನೀರು ತುಂಬಿಕೊಂಡು ಬಂದು ಹೆಣದ ಮೇಲೆ ಸುರಿದು ಅದನ್ನು ತೊಳೆಯುತ್ತಿತ್ತು. ಆನೆಯ ಈ ವಿಚಿತ್ರ ನಡವಳಿಕೆ ಅರಣ್ಯಾಧಿಕಾರಿಗಳಿಗೆ ಸೋಜಿಗ ಉಂಟುಮಾಡಿದೆ.

'ಪ್ರಾಣ ರಕ್ಷಣೆಗಾಗಿ ಮರವೇರಿ ಕುಳಿತಿದ್ದ ಅಮಾಯಕ ವ್ಯಕ್ತಿಯೊಬ್ಬನನ್ನು ತುಳಿದು ಸಾಯಿಸಿದನಲ್ಲಾ ಎಂದು ಆನೆಗೆ ಪಶ್ಚಾತ್ತಾಪವಾಗಿದೆಯೇನೊ? ಅದಕ್ಕೆ ಅದು ಕಳೇಬರವನ್ನು ನಿತ್ಯವೂ ಸ್ನಾನ ಮಾಡಿಸುತ್ತಿದೆ" ಎಂದು ಅರಣ್ಯಾಧಿಕಾರಿಗಳು ಊಹಿಸುತ್ತಾರೆ.

## 25 ಮಕ್ಕಳನ್ನು ಹೆತ್ತಳಾ ತಾಯಿ

ಪಶ್ಚಿಮ ಬಂಗಾಳದ ಸೊನಾಕಲಿ ಕುಶೀರಾಮ್ ಎಂಬ 45ರ ಹರೆಯದ ಮಹಿಳೆ ಈ ವರೆಗೆ 22 ಮಕ್ಕಳಿಗೆ ಜನ್ಮ ನೀಡಿದ್ದಾಳೆ. ಹೆಚ್ಚು ಮಕ್ಕಳನ್ನು ಹಡೆದವರಿಗೆ ಸರಕಾರ ಬಹುಮಾನ ನೀಡುತ್ತದೆ ಎಂದು ಗ್ರಾಮದ ಸರಪಂಚರು ಆಕೆಗೆ ಹೇಳಿದ್ದರು. ಅನಕ್ಷರಸ್ಥ ಸೋನಾಕಲಿ ಮತ್ತು ಅವಳ ಪತಿ ಆ ಮಾತನ್ನು ನಿಜವೆಂದೇ ನಂಬಿ ಅಕ್ಷರಶಃ ಪಾಲಿಸಿದರಂತೆ.

ಸೊನಾಕಲಿಯ ದೊಡ್ಡ ಕುಟುಂಬ ಪಶ್ಚಿಮ ಬಂಗಾಳದ ಬಿಹಾರಿಪುರ ಗ್ರಾಮದಲ್ಲಿ ನೆಲಸಿದೆ. ವರ್ಷದ ಮೂರು–ನಾಲ್ಕು ತಿಂಗಳು ತೀವ್ರ ಮಳೆಗಾಲದ ದಿನಗಳಲ್ಲಿ ಬಿಹಾರಿ ಪುರ ಗ್ರಾಮಕ್ಕೂ ಉಳಿದ ಗ್ರಾಮಗಳಿಗೂ ಸಂಪರ್ಕವೇ ಕಡಿದುಹೋಗುತ್ತದೆ. ಈ ಗ್ರಾಮದಲ್ಲಿ ಒಂದು ಶಾಲೆಯಾಗಲಿ, ಆರೋಗ್ಯ ಕೇಂದ್ರವಾಗಲಿ ಇಲ್ಲ. ವಿದ್ಯುತ್ ಸೌಲಭ್ಯ ಇನ್ನೂ ದೊರಕಿಲ್ಲ.

ಹೆಚ್ಚು ಮಕ್ಕಳನ್ನು ಹಡೆದರೆ ಸರಕಾರ ಬೋನಸ್ ನೀಡುತ್ತದೆ ಎಂಬ ವದಂತಿ ಬಿಹಾರಿಪುರದ ಇತರ ಗ್ರಾಮಗಳಿಗೂ ಹರಡಿದವು. ಅಲ್ಲಿರುವ ದಂಪತಿಗಳೂ ತಮಗೆ 25 ಮಕ್ಕಳಾಗಬೇಕೆಂದು 'ಶ್ರಮಿಸ'ತೊಡಗಿದರು.

ಬಿಹಾರಿಪುರದಲ್ಲಿ ಸದ್ಯದ ಜನಸಂಖ್ಯೆ 5,000. ಅಲ್ಲಿರುವ ಅನೇಕ ದಂಪತಿಗಳಿಗೆ ಹನ್ನೆರಡಕ್ಕಿಂತಲೂ ಅಧಿಕ ಮಕ್ಕಳಿದ್ದಾರೆ.

## ತರಕಾರಿಯಾದ ಶಾಲಾ ಬಾಲಕ

ಆಫ್ರಿಕಾದ ನೈಜೀರಿಯಾದಲ್ಲಿ ಮಾಟಗಾರನೊಬ್ಬ ಶಾಲಾ ವಿದ್ಯಾರ್ಥಿಯನ್ನು ತರಕಾರಿಯಾಗಿ ಪರಿವರ್ತಿಸಿದನಂತೆ!

ನೈಜೀರಿಯಾದ ಮೈದುಗುಂ ಎಂಬಲ್ಲಿ ಒಂದು ಶಾಲೆಯಲ್ಲಿ ಕಲಿಯುತ್ತಿದ್ದ ಮೂವರು ವಿದ್ಯಾರ್ಥಿಗಳು ಒಂದು ಸಂಜೆ ತಮ್ಮ ಮುಖ್ಯೋಪಾಧ್ಯಾಯರನ್ನು ಭೇಟಿಯಾಗಿ ಮಾಟಗಾರನೊಬ್ಬ ತಮ್ಮ ಗೆಳೆಯನನ್ನು ಆಫ್ರಿಕಾದ 'ಯಮ್'(ಜನಪ್ರಿಯ ತರಕಾರಿ)ಯಾಗಿ ಪರಿವರ್ತಿಸಿದನೆಂದು ದೂರು ನೀಡಿದರು. ಅಪರಿಚಿತ ವ್ಯಕ್ತಿಯೊಬ್ಬ ಬಂದು ನಮ್ಮ ಮಿತ್ರನಿಗೆ ಮಿಠಾಯಿ ನೀಡಿದನೆಂದೂ, ಮಿಠಾಯಿ ತಿಂದ ಕೂಡಲೇ ಆತ ತರಕಾರಿಯಾಗಿ ಪರಿವರ್ತಿತನಾದನೆಂದೂ ಅವರು ಮುಖ್ಯೋಪಾಧ್ಯಾಯರಿಗೆ ದೂರು ನೀಡಿದರು.

ನೈಜೀರಿಯಾದ 'ದಿ ಡೇಲಿ ಸ್ಟಾರ್' ಪತ್ರಿಕೆ ಈ ವಿಚಿತ್ರ ವಿದ್ಯಮಾನವನ್ನು ವರದಿ ಮಾಡಿದೆ.

ಬಾಲಕನಿಗೆ ಮಿಠಾಯಿ ಹಂಚಿದ ಅಪರಿಚಿತನನ್ನು ನೈಜೀರಿಯಾದ ಪೊಲೀಸರು ಹುಡುಕುತ್ತಿದ್ದಾರೆ. ತರಕಾರಿಯಾಗಿ ಪರಿವರ್ತನೆ ಹೊಂದಿದ ಶಾಲಾ ಬಾಲಕನ ವೃತ್ತಾಂತ ಮೈದುಗುಂನಲ್ಲಿ ಹರಡುತ್ತಿದ್ದಂತೆ ಈ ವಿಚಿತ್ರವನ್ನು ನೋಡಲು ಅಸಂಖ್ಯಾತ ಮಂದಿ ಶಾಲೆಗೆ ಧಾವಿಸಿದರಂತೆ.

• (ಸಂಗ್ರಹ) ಸುಮ

ಪುಸ್ತಕ ವಿಭಾಗ

# ಜಾನಪದ ದಿಗ್ಗಜರ ಅಪರೂಪದ ಸಂವಾದ




- ಬೆಳಗೆರೆ ಕೃಷ್ಣಶಾಸ್ತ್ರಿ
- ಡಾ. ಎಸ್. ಕೆ. ಕರೀಂಖಾನ್

# ಜಾನಪದ ದಿಗ್ಗಜರ ಅಪರೂಪದ ಸಂವಾದ

ಇದೊಂದು ಅಪೂರ್ವ ಸಂದರ್ಶನ. ಒಬ್ಬರು ಜ್ಞಾನವೃದ್ಧರು, ಆಧ್ಯಾತ್ಮ ಸಾಧಕರು. ಕರ್ನಾಟಕದ ಹಿರಿಯ ಬರಹಗಾರರಾದ ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಯವರು. ಇನ್ನೊಬ್ಬರು ಜಾನಪದ ಸಾಹಿತ್ಯ ಜಗತ್ತಿನ ಕರ್ಮಯೋಗಿ ಕರೀಂಖಾನರು. ಅವರಿಬ್ಬರ ನಡುವಣ ಸಂದರ್ಶನದ ಅಮೃತ ಕ್ಷಣಗಳಲ್ಲಿ ಹೊರ ಹೊಮ್ಮಿದ ವಿಚಾರಧಾರೆ ಹೃದಯ ಮಿಡಿಯುವಂತೆ ಇಲ್ಲಿ ನಿರೂಪಿತವಾಗಿದೆ. ಕರೀಂಖಾನರು ಜಾನಪದ ಲೋಕದ ಕರ್ಮಯೋಗಿಯಂತೆ ಬಾಳಿದವರು. ಸ್ವಾತಂತ್ರ್ಯ ಹೋರಾಟಗಾರರು, ನಾಟಕಕಾರರು, ಕಾದಂಬರಿಕಾರರು ಚಲನಚಿತ್ರಗಳಿಗೆ ಹಾಡುಗಳನ್ನು, ಕಥಾ ಸಾಹಿತ್ಯವನ್ನು ರಚಿಸಿದವರು. ನಾಲ್ಕು ವರ್ಷಗಳ ಹಿಂದೆ ಬೆಳಗೆರೆ ಕೃಷ್ಣಶಾಸ್ತ್ರಿಗಳು ಬೆಳಗೆರೆಯಲ್ಲಿ ಊರವರ ವತಿಯಿಂದ ಕರೀಂಖಾನರನ್ನು ಸನ್ಮಾನಿಸುವ ಸಲುವಾಗಿ ಸಮಾರಂಭಕ್ಕೆ ಆಹ್ವಾನಿಸಲು ಬೆಂಗಳೂರಿಗೆ ಬಂದಿದ್ದಾಗ ಖಾನರನ್ನು ಬೆಂಗಳೂರಿನ ಬಸವನಗುಡಿಯ ದ್ವಾರಕಾ ಹೊಟೇಲಲ್ಲಿ ಭೇಟಿಯಾದಾಗ ನಡೆದ ಮಾತುಕತೆಗಳು ಪ್ರತಿಯೊಬ್ಬ ವಿಚಾರವಂತ ಕನ್ನಡಿಗನ ಕಣ್ತೆರೆಸುವಂತದ್ದಾಗಿದೆ.

ಸುಮಾರು 110 ನಿಮಿಷಗಳ ಕಾಲ ಲೋಕಾಭಿರಾಮವಾಗಿ ನಡೆದ ಈ ಸಂದರ್ಶನದ ಧ್ವನಿಮುದ್ರಣವನ್ನು ಯಥಾವತ್ತಾಗಿ ಲೇಖನ ರೂಪಕ್ಕೆ ಇಳಿಸಲಾಗಿದೆ. ನಮ್ಮ ಕಾಲದ ಓರ್ವ ಹಿರಿಯ ಚೇತನ, ಜಾನಪದ ಸಾಹಿತ್ಯ ಸಂಗ್ರಹಕ್ಕಾಗಿಯೇ ಜೀವನವನ್ನು ಗಂಧದ ಕೊರಡಿನಂತೆ ತೇಯ್ದವರು ಕರೀಂಖಾನರು. ಶಿಶುನಾಳ ಷರೀಫರಂತೆ ಡಾ. ಕರೀಂಖಾನರು ಹಿಂದೂ ಮುಸ್ಲಿಂ ಏಕತೆಯ ಸಂಕೇತವಾಗಿ ನಿಲ್ಲಬಲ್ಲ ಸಂತ ಸಾಹಿತಿ. ಕನ್ನಡ ಇಬ್ಬರು ಹಿರಿಯ ಚೇತನಗಳ ನಡುವಣ ಸುದೀರ್ಘ ಸಂವಾದದಲ್ಲಿ ಸಾಹಿತ್ಯ-ಜೀವನ ಮೌಲ್ಯಗಳ ಬಗ್ಗೆ ಹೊಸ ದರ್ಶನ ವ್ಯಕ್ತವಾಗಿದೆ.

## ಜಾನಪದ ದಿಗ್ಗಜರ ಸಂವಾದ




ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳು: ನಮಸ್ಕಾರ, ಕರೀಂಖಾನ್‌ರಿಗೆ.....

ಡಾ. ಎಸ್.ಕೆ. ಕರೀಂಖಾನ್: ನಮಸ್ಕಾರ, ನಮಸ್ಕಾರ ಬನ್ನಿ.

ಶಾಸ್ತ್ರಿಗಳು: ಬಹಳ ದಿವಸಗಳ ತರುವಾಯ ಬಂದು ತಮ್ಮನ್ನು ನೋಡ್ತಾ ಇದ್ದೀನಿ ನಾನು. ತಮಗೆ ಜ್ಞಾಪಕವಿರಬಹುದು.....

ಕರೀಂಖಾನ್: ಜ್ಞಾಪಕ ಇದೆ.

ಶಾಸ್ತ್ರಿಗಳು: ನಾನು ಬೆಳಗೆರೆ ಕೃಷ್ಣಶಾಸ್ತ್ರಿ.....

ಕರೀಂಖಾನ್: ತಮ್ಮ ಅಕ್ಕನವರ ಒಂದು ಕವನ ಸಂಕಲನ.....

ಶಾಸ್ತ್ರಿಗಳು: ಜಾನಕಮ್ಮ...

ಕರೀಂಖಾನ್: ಜಾನಕಮ್ಮ ಅವರ ಕವನ ಸಂಕಲನ ನನ್ನ ಹತ್ತಿರ ಇದೆ. ಆದ್ರಿಂದ ತಾವು ಇಂಥವರೇ ಅನ್ನುವುದು ಜ್ಞಾಪಕಕ್ಕೆ ಬಂತು.

ಶಾಸ್ತ್ರಿಗಳು: ತಾವು ದೇವನೂರಿಗೆ ಬಂದಿದ್ದಿರಲ್ಲ, 1962 ನೇ ಇಸವಿ, ಲಕ್ಷ್ಮೀಶ ಕವಿಯ ಜಯಂತಿ. ಆ ಸಂದರ್ಭದಲ್ಲಿ ನೀವು ಬಂದದ್ದು ನಮಗೆಲ್ಲಾ ಬಹಳ ಸಂತೋಷ ಅನ್ನಿಸ್ತು. ಊರಿನವರೆಲ್ಲಾ ಬಹಳ ಆನಂದಪಟ್ಟರು. ಹರ್ಷಪಟ್ಟರು....

ಕರೀಂಖಾನ್: ನನಗೂ ಅಷ್ಟೇ ಸಂತೋಷವಾಯ್ತು. ಯಾಕೆಂದರೆ ಅವತ್ತಿನ ಕಾರ್ಯಕ್ರಮದ ಮುಖ್ಯ ಅತಿಥಿಗಳು ಬರಬೇಕಾಗಿತ್ತು. ಬರಲಿಲ್ಲ....

ಶಾಸ್ತ್ರಿಗಳು: ಅ.ನ. ಕೃಷ್ಣರಾಯರು....

## ಪುಸ್ತಕ ವಿಭಾಗ

**ಕರೀಂಖಾನ್:** ಹಾಂ, ಅ.ನ.ಕೃ., ಆ ಕಾರಣದಿಂದ ಅನೇಕರು ನಿರಾಶರಾಗಿ ಹೊರಟುಹೋದ್ರು. ನಾನೊಬ್ಬನೇ ಮುಖ್ಯ ಅತಿಥಿಯಾಗಿ ಉಪನ್ಯಾಸ ಪ್ರಾರಂಭ ಮಾಡ್ದೆ. ನನ್ನ ಉಪನ್ಯಾಸ ನಡೀತಾ ಇದ್ದಾಗ, ಆ ದಿನ ಅಧ್ಯಕ್ಷತೆ ವಹಿಸಿದ್ದ ಚಿಕ್ಕಮಗಳೂರಿನ ಜಿಲ್ಲಾಧಿಕಾರಿ ಅನಂತ ರಾಮನ್ ಅವರು "ನೋ ಟೈಮ್ ಲಿಮಿಟ್ ಫಾರ್ ಯು" ಅಂತ ಹೇಳಿ ನನಗೆ ಸಂಪೂರ್ಣ ಅವಕಾಶ ಕೊಟ್ರು: ಪರಿಣಾಮಾನೂ ಒಳ್ಳೇದಾಯ್ತು. ಉಪನ್ಯಾಸನೂ ಚೆನ್ನಾಗಿ ಬಂತು. ಸುಧನ್ವನ ವಿಚಾರ ಎತ್ತಿ ನಾನು ಆ ದಿನ ಮಾತನಾಡಿದ್ದೆ.

**ಶಾಸ್ತ್ರಿಗಳು:** ಅನಂತರಾಮನ್ ಅವರು ನನ್ನನ್ನೂ ಕರೆದು ಕೇಳಿದ್ರು ಆವತ್ತು. ಎಲ್ಲಿಂದ ಕರ್‍ಕೊಂಬಂದ್ರಿ? ಎಲ್ಲಿ ಸಿಕ್ಕಿದ್ರು? ಎಂಥಾ ವಿಚಾರ? ಎಷ್ಟು ಶಬ್ಧಭಂಡಾರ ಇದೆ ಇವರ ಹತ್ತಿರ! ಅಂತ ಬಹಳ ಸಂತೋಷ ವ್ಯಕ್ತಪಡಿಸಿದ್ರು....

**ಕರೀಂಖಾನ್:** ಮಾರನೇ ದಿನ ಮತ್ತೆ ಅದೇ ಸ್ಥಳದಲ್ಲಿ ಜಾನಪದ ಸಾಹಿತ್ಯದ ಒಂದು ಕಾರ್ಯಕ್ರಮ ನಡೀತು. ಆ ದಿನವೂ ಕಾರ್ಯಕ್ರಮ ತುಂಬಾ ಚೆನ್ನಾಗಿ ಬಂತು....

**ಶಾಸ್ತ್ರಿಗಳು:** ಅದೆಲ್ಲಾ ತುಂಬಾ ನೆನಪಿಟ್ಟುಕೊಂಡಿದ್ದೀರಿ ಇನ್ನೂ...

**ಕರೀಂಖಾನ್:** ಹೌದು.

**ಶಾಸ್ತ್ರಿಗಳು:** ಚೆನ್ನಾಗಿತ್ತು, ಆಮೇಲೆ ಅದ್ರಿಂದ ನನಗೆ ಬಹಳ ಶಹಭಾಸ್‌ಗಿರಿ ಬಂತು. ನಮ್ ಜನಕ್ಕೆಲ್ಲಾ ತುಂಬಾ ಸಂತೋಷ ಆಯ್ತು ಅಂತ ಬಹಳ ಕೊಂಡಾಡಿದ್ರು ಅನ್ನಿ. ಇವೆಲ್ಲಾ ನಮ್ಮ ಹಳೇ ನೆನಪುಗಳು. ಆದ್ರೆ ನನ್ನ ಸ್ನೇಹಿತರು ತಮ್ಮ ಬಗ್ಗೆ ಕೆಲವು ವಿಚಾರಗಳನ್ನು ಕೇಳಿ ತಿಳ್ಕೋಬೇಕು ಅಂತ ಅಂದ್ಕೊಂಡಿದ್ದಾರೆ. ಅದ್ರಿಂದ, ತಮ್ಮನ್ನು ಕುರಿತಾಗಿ ಕೆಲವು ವಿಷಯಗಳನ್ನು ತಮ್ಮಿಂದಲೇ ಕೇಳಿ ತಿಳ್ಕೊಳ್ಳೋಣ ಅಂತ..... ತಮ್ಮ ಬಾಲ್ಯ ಸಕಲೇಶಪುರದಲ್ಲಿ ಅಂತ ಭಾವಿಸಿದ್ದೇವೆ. ತಮ್ಮ ತಂದೆ, ತಾಯಿ, ತಮ್ಮ ಬಾಲ್ಯ ಜೀವನ, ವಿದ್ಯಾಭ್ಯಾಸ, ಇವುಗಳ ಬಗ್ಗೆ ತಿಳಿಸ್ತೀರಾ?

### ಅಫಘಾನಿಸ್ಥಾನದಲ್ಲಿ ಪೂರ್ವಜರು

**ಕರೀಂಖಾನ್:** ನಮ್ಮ ತಂದೆ ಅಫ್ಘಾನಿಸ್ತಾನದವರು, ಕಾಬೂಲ್‌ನವರು. ರಹಮಾನ್‌ಖಾನ್ ಅಂತ ಅವರ ಹೆಸರು. ಮೂರನೇ ಅಫ್ಘನ್ ಯುದ್ಧದಲ್ಲಿ ನಮ್ಮ ತಂದೆಯವರಿಗೆ 16 ವರ್ಷ. ಆವಾಗ ಬ್ರಿಟಿಷರ ಅಧೀನ ಆಗ್ಹೋಗಿತ್ತು. ದೋಸ್ತ್ ಮಹಮದ್ ಅನ್ನುವವ ಬ್ರಿಟಿಷರಿಗೆ ವಿರುದ್ಧವಾಗಿದ್ದ. ಆವಾಗ ಆ ಕ್ರಾಂತಿಯಲ್ಲಿ ಭಾಗವಹಿಸಿದವರಲ್ಲಿ ಇಪ್ಪತ್ತು ಸಾವಿರ ಜನರನ್ನು ಕ್ರಾಂತಿಕಾರರು ಕೊಂದು ಹಾಕಿದರು. ಈ ವಿಷಯ ಭಾರತದಲ್ಲಿದ್ದ ಒಬ್ಬ ಜನರಲ್ ಬೇರ್ಡ್ ಅನ್ನುವ ಡಾಕ್ಟರ್‌ನಿಗೆ ತಿಳಿಸು ಅಂತ ಹೇಳಿ ನಮ್ಮ ತಂದೆಯನ್ನು ಭಾರತಕ್ಕೆ ಕಳಿಸಿಕೊಟ್ರು. ಆ ವೇಳೆಗೆ ನಮ್ಮ ತಂದೆ ಇಲ್ಲಿಗೆ ಬಂದವ್ರು ಅನಂತರದಲ್ಲಿ ಅವರ ಅಣ್ಣ- ತಮ್ಮಂದಿರ ಮಧ್ಯೆ ಕಲಹವಾಗಿ ಅವ್ರು ಈ ಕಡೇನೇ ಬಂದುಬಿಟ್ರು. ನಮ್ಮ ತಾಯಿ ಅರಬ್ ಮೂಲದವರು. ಜೈನಬಿ ಅಂತ ಅವರ ಹೆಸರು. ನಮ್ಮ ಅಜ್ಜ ಸೈಯದ್ ಅಂತ. ಅರಬ್ ದೇಶದವರು. ನಮ್ಮ ತಂದೆ ಸಕಲೇಶಪುರದಲ್ಲಿ ನೆಲಸಿದರು. ನಾನೂ ಇಲ್ಲಿಯೇ ಹುಟ್ಟಿದೆ. ಬಾಲ್ಯ ಎಲ್ಲಾ ಚೆನ್ನಾಗಿ ಕಳೀತು. ನದಿ ತೀರ, ಮಲೆನಾಡಿನ ಪ್ರಕೃತಿ ದೃಶ್ಯಗಳು, ಹೇಮಾವತಿ ನದಿ ತೀರ, ಇವುಗಳ ಮಧ್ಯದಲ್ಲಿ ನನ್ನ ಬಾಲ್ಯ ಕಳೀತು.

**ಶಾಸ್ತ್ರಿಗಳು:** ಬಾಲ್ಯ ಅಲ್ಲೇ ಕಳೀತು, ವಿದ್ಯಾಭ್ಯಾಸ?

## ಜಾನಪದ ದಿಗ್ಗಜರ ಸಂವಾದ

**ಕರೀಂಖಾನ್:** ನನ್ನ ವಿದ್ಯಾಭ್ಯಾಸ ಸಕಲೇಶಪುರದಲ್ಲೇ ಆಯ್ತು. ಆವಾಗ ಹೈಸ್ಕೂಲುಗಳಿರಲಿಲ್ಲ. ಹೊಳೆನರಸೀಪುರದಲ್ಲಿ ಒಂದು, ಹಾಸನದಲ್ಲಿ ಒಂದು ಇತ್ತು. ಇಡೀ ಜಿಲ್ಲೆಯವರು ಅಲ್ಲಿ ಹೋಗಿ ವ್ಯಾಸಂಗ ಮಾಡ್ಬೇಕಾಗಿತ್ತು. ಆದ್ದರಿಂದ ನಾನು ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಹಾಸನಕ್ಕೆ ಹೋದೆ. ಅನಂತರ ಬಡತನದ ಕಾರಣದಿಂದ ವ್ಯಾಸಂಗ ಮುಂದುವರೆಸಲಿಕ್ಕಾಗಲಿಲ್ಲ.

## ಗುರುವಿನ ಅನುಗ್ರಹ

**ಶಾಸ್ತ್ರಿಗಳು:** ಶಾಲೆ ಕಾಲೇಜಿನ ವಿದ್ಯಾಭ್ಯಾಸದ ಮಾತು ಬೇರೆ. ನೀವು ಸಾಧಿಸಿರೋ ವಿದ್ಯೆಯ ಪ್ರೌಢಿಮೆ, ಅದರ ವಿಚಾರವೇ ಬೇರೆಯಾಗುತ್ತೆ. ಅದರ ಬಗ್ಗೆ ತಿಳಿಸಿ.

**ಕರೀಂಖಾನ್:** ನನ್ನ ಗುರುಗಳು ಆಚಂಗಿ ನಾರಾಯಣ ಶಾಸ್ತ್ರಿಗಳು ಅಂತ. ಮಹಾವಿದ್ವಾಂಸರು. ಸಂಸ್ಕೃತ, ಕನ್ನಡ, ಇಂಗ್ಲೀಷ್‌ಗಳಲ್ಲಿ ಪಂಡಿತರು. ಹಾಗೆಯೇ ಸಂಗೀತದಲ್ಲಿ, ಜ್ಯೋತಿಷ್ಯದಲ್ಲಿ, ಪ್ರತಿಯೊಂದರಲ್ಲಿಯೂ ಅವರು ಪರಿಪೂರ್ಣವಾದ ಪಾಂಡಿತ್ಯ ಪಡೆದಿದ್ದರು. ಅವ್ರಿಂದ ಅಲ್ಪಸ್ವಲ್ಪ ನನಗೂ ಲಭ್ಯವಾಯ್ತು. ಅಷ್ಟೇ ನನ್ನ ಬಂಡವಾಳ. ಅದನ್ನೇ ಬಳಸಿಕೊಂಡೆ.

**ಶಾಸ್ತ್ರಿಗಳು:** ಅಲ್ಪ ಸ್ವಲ್ಪ ಅಂದ್ರೆ, ಅವರಿಂದ ಸಂಸ್ಕೃತ ಕಾವ್ಯಗಳ ಬಗ್ಗೆ ಪರಿಚಯ ನಿಮಗಾಯ್ತು.....

**ಕರೀಂಖಾನ್:** ಸಾಮಾನ್ಯವಾಗಿ ನಾನು ಅವರ ಜೊತೆಯಲ್ಲೇ ಇರ್ತಾ ಇದ್ದೆ. ಅವರು ಊರ ಹೊರಗಡೆ ಒಂದು ತೋಟ ಮಾಡಿಕೊಂಡಿದ್ರು. ಅಲ್ಲಿ ಜೊತೇಲೇ ಇದ್ದೆ. ಅವಾಗ ಎಲ್ಲಾ ವಿಷಯಗಳನ್ನೂ ಹೇಳೋವ್ರು.....

**ಶಾಸ್ತ್ರಿಗಳು:** ಹೌದು. ಅಂಥಾ ಉದ್ದಾಮ ಪಾಂಡಿತ್ಯವುಳ್ಳವರು ಹತ್ತಿರ ಇದ್ದಾಗ ಅವರಿಗೆ ಅನೇಕ ಶಿಷ್ಯರು. ಅವರ ಮಕ್ಕಳು ಮೊಮ್ಮಕ್ಕಳು ಇವ್ರೆಲ್ಲಾ ಇದ್ದಾಗ ಅವರಿಗೆಲ್ಲಾನೂ ಅದು ಲಭ್ಯವಾಗಿರಬೇಕಲ್ವೇ?

**ಕರೀಂಖಾನ್:** ಕಲಿಯೋರಿಗೆ ಸಾಧನೆ ಬೇಕು. ಆಮೇಲೆ ಅದನ್ನು ಸಾಧಿಸೋ ಛಲ ಇರ್ಬೇಕು. ಎಲ್ಲರಿಗೂ ಆ ಅಭಿರುಚಿ ಇರೋದಿಲ್ಲ....

**ಶಾಸ್ತ್ರಿಗಳು:** ಹುಟ್ಟು ಗುಣ ಆಗಿ ಬಂದಿರಬೇಕು ಅನ್ನಿ.

**ಕರೀಂಖಾನ್:** ಹೌದು. ಆ ಕಾರಣದಿಂದ ಇತರರಾರೂ ಕಲೀಲಿಲ್ಲ. ಸರಿ, ನನ್ನ ವಿಚಾರದಲ್ಲಿ ಅವ್ರಿಗೆ ಸಂಪೂರ್ಣ ಮಮತೆ ಬಂದು "ನನ್ ವಿದ್ಯೇನೆಲ್ಲಾ ನಿಂಗೆ ಧಾರೆ ಎರೀತೀನಿ" ಅಂತ ಹೇಳಿದ್ರು. ಆದ್ರೆ ನಂಗೆ ಬಾಲ್ಯದಲ್ಲಿ ಈ ವಿದ್ಯೆ ಬಗ್ಗೆ ಅಷ್ಟಾಗಿ, ಭವಿಷ್ಯ ಉಜ್ವಲವಾಗುತ್ತೆ ಅನ್ನೋದರ ಬಗ್ಗೆ ಆಶೋತ್ತರವೇನೂ ಇರಲಿಲ್ಲ. ಏನೋ ಸಾಧ್ಯವಾದಷ್ಟು ಅವ್ರಿಂದ ಕಲ್ತೆ. ಮತ್ತೊಂದು ಮುಖ್ಯವಾಗಿ ಹೇಳ್ಬೇಕಂದ್ರೆ, ಅವ್ರು ತೀರಿಕೊಂಡ ಸುದ್ದಿ ಕೇಳಿ ಅವ್ರ ಮನೇಗೆ ಹೋದೆ. ಅಲ್ಲಿಂದ ಶವಾನ ನದೀ ಹತ್ರ ತಗೊಂಡು ಹೋಗಿದ್ರು ಸಂಸ್ಕಾರಕ್ಕಾಗಿ. ಅಲ್ಲಿಗೇ ಓಡಿದೆ. ಇನ್ನೂ ಸಂಸ್ಕಾರ ಕಾರ್ಯ ನಡೀತಾ ಇತ್ತು. ಅವರ ದೇಹವನ್ನು ಚಿತೆಯ ಮೇಲೆ ಇಟ್ಟಾಗ ನಾನು ಕೇಳ್ಕೊಂಡೆ, "ಹೊರಟು ಹೋಗ್ತಾ ಇದ್ದೀರಲ್ಲಾ ಏನಾದ್ರೂ ಒಂದಷ್ಟು ಅನುಗ್ರಹ ಮಾಡಿ ಹೋಗಿ" ಅಂತ. ಆಮೇಲೆ ಬಂದು ನಾನೇನು ಬರಿಯೋದಿಕ್ಕೆ ಆರಂಭ ಮಾಡ್ದೆ. ಅದೆಲ್ಲಾ ಸಾಹಿತ್ಯಮಯವಾಗೋದಕ್ಕೆ ಪ್ರಾರಂಭವಾಯ್ತು.....

**ಶಾಸ್ತ್ರಿಗಳು:** ತಾವು ಕೇಳಿಕೊಂಡದ್ದನ್ನು ಅವ್ರು ಪ್ರದಾನ ಮಾಡಿದ್ರು.

**ಕರೀಂಖಾನ್:** ಹೌದು. ಗುರುವಿನ ಅನುಗ್ರಹ ಆಗಿದೆ ನನಗೆ.

**ಶಾಸ್ತ್ರಿಗಳು:** ಆ ಮುಂಚೆ ತಾವು ಆ ರೀತಿ ಅವ್ರ ಹತ್ತಿರ ಕೇಳಿ ಕೊಂಡದ್ದುಂಟೋ?

**ಕರೀಂಖಾನ್:** ಕೊನೇ ಘಳಿಗೇಲಿ ವೇದನೆಯಾಯ್ತು. ಗುರು ಹೊರಟು ಹೋಗ್ತಾ ಇದ್ದಾರೆ. ಗುರು ಇದ್ದಾಗ ತಿಳ್ಕೋಬೇಕು ಅನ್ನೋದು; ಯಾವಾಗ್ಲಾದ್ರೂ ತಿಳ್ಕೋಬಹುದು ಅಂತ ನಂಬಿಕೆ ಇರುತ್ತಲ್ವಾ? ಈಗ ಗುರುವೇ ಹೊರಟುಹೋದ ಮೇಲೆ ಇನ್ನೇನು ಅಂತಹೇಳಿ ಅದು ಕೊನೇ ಸಲ ಕೇಳಿಕೊಂಡೆ.

**ಶಾಸ್ತ್ರಿಗಳು:** ನೀವು ಆತ್ಮಪೂರ್ವಕವಾಗಿ ಕಳಕಳಿಯಿಂದ ಆ ವಿಯೋಗದ ಸಂದರ್ಭದಲ್ಲಿ ಮಾಡಿಕೊಂಡ ಕೋರಿಕೆ. ಅಪೇಕ್ಷೆ ಅದು. ನೀವು ಸಾಹಿತ್ಯ ರಚನೆ ಮಾಡ್ಲಿಕ್ಕೆ ಪ್ರಾರಂಭ ಮಾಡ್ದಾಗ ಅವರ ಅನುಗ್ರಹ ಆಗಿದ್ದು ಅನುಭವಕ್ಕೆ ಬಂತು....

**ಕರೀಂಖಾನ್:** ಹೌದು. ಯಾಕೆಂದರೆ ನನ್ನ ಸಾಹಿತ್ಯ ರಚನೆಯಾಗಿದ್ದು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ. ನಾನು ರಚನೆ ಮಾಡ್ತಾ ಹೋದೆ. ಹೇಗೆಂದರೆ: "ರಾಷ್ಟ್ರಘಾತಕನು, ನಿರ್ಲಜ್ಜನೂ, ಮೃಗಸ್ವಭಾವದನು, ಪರಮನೀಚನೂ, ಧನಕ್ಕಾಗಿ ಪದವಿಗಾಗಿ, ಐಚ್ಛಿಕ ವಸ್ತುವಿನ ಗಳಿಕೆಗಾಗಿ, ಸ್ವಾತಂತ್ರ್ಯವನ್ನು, ಧರ್ಮವನ್ನು, ನೀತಿಯನ್ನು ತ್ಯಜಿಸಿ ಪಾರತಂತ್ರಕ್ಕೆ ಶರಣುಹೋಗುವನು. ಆದರೆ ಸ್ವಾಭಿಮಾನವುಳ್ಳ ಸತ್ಯಾತ್ಮನು ವಿಪತ್ ಪರಂಪರೆಗಳಿಂದ ಹೃದಯ ವಿಚ್ಛಿದ್ರವಾಗಿರಲಿ, ಕಷ್ಟಜೀವನದಿಂದ ಶಾಂತಾತ್ಮವು ಕಳವಳಗೊಂಡಿರಲಿ, ದುಃಖವು ಮೇಲೆದ್ದು ಬರಲಿ, ಇಡೀ ಜಗತ್ತೇ ತನ್ನನ್ನು ಎದುರಿಸಲಿ, ಖಡ್ಗ, ಶಲ್ಯಗಳ ತೀಕ್ಷ್ಣ ವಿಘಾತಗಳಿಂದ ದೇಹವೆಲ್ಲ ಜರ್ಝರಿತವಾಗಿರಲಿ ತನ್ನ ದೇಹವು ಮಾರಣಕಾತಕ ಶೂಲದೆಡೆಗೆ ತಳ್ಳಲ್ಪಡುತ್ತಿರಲಿ, ಆದರೂ ಆತನು ಸ್ವಾತಂತ್ರ್ಯ ಗೀತೆಯನ್ನು ಹಾಡುತ್ತಲೇ ಹೋಗುವನು, ಸ್ವಾತಂತ್ರ್ಯ ಸನ್ಮಾರ್ಗವನ್ನು ತುಳಿಯುತ್ತಲೇ ನಡೆಯುವನು." ಈ ರೀತಿಯಾಗಿ ನನ್ನ ಬರವಣಿಗೆ ಪ್ರಾರಂಭವಾಯ್ತು.

**ಶಾಸ್ತ್ರಿಗಳು:** ಹೌದು, ಈ ಬರವಣಿಗೆಯ ಪ್ರೌಢಿಮೆ ಇದೆಯಲ್ಲ ಈ ಶಬ್ದಸೌಷ್ಠವ, ಶಬ್ದ ಭಂಡಾರ ಪುಂಖಾನುಪುಂಖವಾಗಿ ಬರುತ್ತಿರುವ ವಿಧಾನ ನಿಮಗೆ ಲಭ್ಯವಾಗಬೇಕಾದರೆ ಇದಕ್ಕೆ ಹಿಂದಿನಿಂದ ಬಂದ ಸಾಧನೆ....?

**ಕರೀಂಖಾನ್:** ಗುರುವಿನ ಅನುಗ್ರಹವೇ ನನ್ನ ಸಾಧನೆ. 1941ರಲ್ಲಿ ಅ.ನ.ಕೃ. "ನನ್ನನ್ನು ನಾನು ಕಂಡೆ" ಅನ್ನೋ ಒಂದು ಪುಸ್ತಕ ಬರೆದಿದ್ರು. ಅವ್ರೇ ಅವರನ್ನು ಭೇಟಿಯಾಗಿ. ಅವ್ರೇ ಅವರನ್ನು ಪ್ರಶ್ನೆ ಮಾಡಿ, ಅವ್ರೇ ಅವರಿಗೆ ಉತ್ತರ ಕೊಡೂವಂಥಾದ್ದು. ಅದ್ರಲ್ಲಿ ಒಂದು ಕಡೆ ಅವ್ರು ಹೀಗೆ ಬರ್ದಿದ್ದಾರೆ: "ಕನ್ನಡ ಪಂಡಿತರನ್ನು ತಲೆದೂಗಿಸುವ ಶೈಲಿ ಗೆಳೆಯ ಕರೀಂಖಾನ್‌ರದ್ದು." ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು, "ಇದೇ ಅಲಂಕಾರಿಕ ಶೈಲಿಯಲ್ಲಿ ಕರೀಂಖಾನ್‌ರವರು ವಿಶ್ವವಿದ್ಯಾಲಯದ ಪ್ರಬುದ್ಧ ಕರ್ನಾಟಕಕ್ಕೆ ಲೇಖನಗಳನ್ನು ಒದಗಿಸುತ್ತಾರೆಂದು ನಂಬಿದ್ದೇನೆ" ಅಂತ ಹೇಳಿದ್ದರು.

**ಶಾಸ್ತ್ರಿಗಳು:** ಅಂದ್ರೆ ನೀವು ಹೈಸ್ಕೂಲ್ ತನಕ ಮಾತ್ರ ಓದಿದ್ರೂ ಅಂಥ ಹಿರಿಯರಿಂದ ಇಷ್ಟೊಂದು ಮೆಚ್ಚುಗೆ ಪಡೆದಿದ್ದೀರಿ. ನಮ್ಮ ಈ ಶಾಲೆಯ ವಿದ್ಯಾಭ್ಯಾಸವನ್ನು ಏನಂತ ಕರೀಬೇಕೋ ಗೊತ್ತಾಗ್ತಾ ಇಲ್ಲ!

**ಕರೀಂಖಾನ್:** ಶಾಲೇಲಿ ಕಲಿಯೋದಕ್ಕಿಂತಾನೂವೇ ತನ್ನ ಶ್ರದ್ಧೆಯಿಂದ, ಪರಿಶ್ರಮದಿಂದ ಕಲಿಯುವುದು ಒಳ್ಳೆಯದು. ಇದಕ್ಕೆ ನಿತಾಂತ ಪ್ರಯಾಸವೇ ಬೇಕು. ಅನವರತ ಶ್ರಮ ಬೇಕು, ಅನ್ಯಾದೃಶವಾದಂಥ ವಾಂಛಲ್ಯ ಬೇಕು. ಈ ಛಲ, ಈ ಪಟ್ಟು ಬಿಡದೆ ಸಾಧನೆ ಮಾಡ್ತೀನಿ ಅಂತ ಅನ್ನೋ ಗುರಿ ಇಟ್ಕೊಂಡಿರೋನಿಗೆ, ತನ್ನ ಉಪಲಕ್ಷ್ಯದ ಕಡೆಗೆ ಹೆಚ್ಚು ಗಮನ ಕೊಡುವವನಿಗೆ ಅದು

# ಜಾನಪದ ದಿಗ್ಗಜರ ಸಂವಾದ



ಸನ್ಮಾನ ಸಮಾರಂಭದಲ್ಲಿ ಕರೀಂಖಾನ್

ಪ್ರಾಪ್ತವಾಗುತ್ತೆ. ವ್ಯವಸಾಯ ಮಾಡೋನಿಗೆ ಧಾನ್ಯ ಲಭ್ಯವಾಗೇ ಆಗುತ್ತೆ...

**ಶಾಸ್ತ್ರಿಗಳು:** ವ್ಯವಸಾಯ ಮುಖ್ಯ ಅನ್ನಿ.

**ಕರೀಂಖಾನ್:** ಹೌದು.

**ಶಾಸ್ತ್ರಿಗಳು:** ನಾನು ಇನ್ನೊಂದು ಮಾತು ಕೇಳಿದ್ದೀನಿ. ತಾವು ಬಾಣಭಟ್ಟನಿಂದ ಬಹಳ ಪ್ರಭಾವಿತರಾಗಿದ್ದೀರಿ ಅಂತ....

**ಕರೀಂಖಾನ್:** "ಬಾಣೋಚ್ಛಿಷ್ಟಂ ಜಗತ್ ಸರ್ವಂ" ಅಂತ ಹೇಳಿ. ಆ ಕವಿ-ಸಾಹಿತಿ-ಪಂಡಿತೋತ್ತಮರ ಅನಿಸಿಕೆ ಅದು. ಬಾಣಭಟ್ಟ ಬರೆದಿರೋದು "ಕಾದಂಬರಿ" ಅನ್ನೋ ಒಂದು ಗದ್ಯ ಕಾವ್ಯ. ಅದನ್ನು ಮುಕ್ಕಾಲು ಭಾಗ ಬರ್ದಿದ್ದಾನೆ. ಪೂರ್ಣ ಬರ್ದಿಲ್ಲ. ಅಷ್ಟರಿಂದಲೇ ಆ ಮಾತು ಬಂತು. ವರ್ಣನಾವೈಖರಿ, ಹೊಗಳೋದಕ್ಕೇ ಅಸಾಧ್ಯ ಬಾಣಭಟ್ಟಂದು. ಆ ಕಾರಣ ನಾನು ಅದನ್ನೇ ಹಿಂಬಾಲಿಸಿಕೊಂಡು ಬಂದು ನನ್ನ ಬರವಣಿಗೇನೂ ಹಾಗೇ ಪ್ರಾರಂಭ ಮಾಡ್ದೆ.

**ಶಾಸ್ತ್ರಿಗಳು:** ಇತ್ತೀಚಿಗೆ ಬರ್‍ತಾ ಇರೋ ಭಾಷಾ ಶೈಲಿ ಇದೆಯಲ್ಲ, ಇದು ಬಹಳ ಸರಳ, ಮೃದು, ಮಧುರ ಇತ್ಯಾದಿ ಏನೇನೋ ಕೇಳ್ತಾ ಇದ್ದೀವಿ. ಈ ಭಾಷೆ ಬದಲಾವಣೆ ಬಗ್ಗೆ ತಮಗೇನನ್ನಿಸುತ್ತೆ?

**ಕರೀಂಖಾನ್:** ಇದು ಅನುಕೂಲ ಸಿಂಧು. ನನ್ನ ಚೈತನ್ಯ ಎಷ್ಟಿದೆ ಅಷ್ಟರಲ್ಲೇ ನಾನು ಹೇಳ್ತೇನೆ. ಇದಕ್ಕೆ ಹೆಚ್ಚಿನ ವೇಳೆ ಬೇಕಾಗುತ್ತೆ. ವರ್ಣನೆಗಳಿಗೆ, ಉಪಮಾನ, ಉಪಮೇಯಗಳ ಪ್ರಯೋಗಗಳಿಗೆ ಹೆಚ್ಚಿನ

ವೇಳೆ ಬೇಕಾಗುತ್ತೆ. ಅದಕ್ಕೋಸ್ಕರ ಸುಲಭದಲ್ಲೇ ನಡೆದು ಹೋಗ್ಬೇಕು; ಅದಕ್ಕೆ ಒಂದು ಒಳ್ಳೇ ಕಾರಣಾನೂ ಕೊಟ್ಕೋಬೇಕು. ತೀರಾ ಸರಳ ಇರಬೇಕು. ತೀರಾ ಸುಂದರವಾಗಿರಬೇಕು ಅನ್ನೋ ಕಾರಣ ಕೊಟ್ಕೊಂಡು ಬೇಕಾದಷ್ಟು ಗ್ರಂಥಗಳನ್ನು ಬರೀತಿದ್ದಾರೆ. ಬಾಣಭಟ್ಟ ಬರ್ದಿದ್ದು ಕೇವಲ ಮುಕ್ಕಾಲು ಗದ್ಯಗ್ರಂಥ. ಈಗ ನನ್ನ ನೂರನೇ ಕಾದಂಬರಿ ಪ್ರಕಟವಾಗ್ತಾ ಇದೆ. ಎಂಬತ್ತನೇ ನಾಟಕ ಪ್ರಕಟವಾಗ್ತಾ ಇದೆ. ಇಷ್ಟು ಸುಲಭವಾಗಿ ಬಾಣಭಟ್ಟನಿಗೆ ಅದು ಸಾಧ್ಯವಾಗಲಿಲ್ಲ. ಹಾಗೆ, ಪ್ರತಿಯೊಬ್ಬನೂ ತನ್ನ ಕಾರ್ಯ ಏನು ಮಾಡ್ತಾನೆ ಅದನ್ನು ಸಮರ್ಥಿಸಿಕೊಳ್ಳಬೇಕು; ಪ್ರತಿಪಾದಿಸಿಕೊಳ್ಳ ಬೇಕು. ಅದಕ್ಕೇನಾದರೂ ಸುಲಭ ಕಾರಣಗಳನ್ನು ಕೊಡಬೇಕು, ಅದರಿಂದ ಜನ ತನ್ನನ್ನು ಒಪ್ಪಬೇಕು, ಮೆಚ್ಚಬೇಕು.....

**ಶಾಸ್ತ್ರಿಗಳು:** ಅಷ್ಟು ಪ್ರಚಾರಾನೂ ಮಾಡ್ತಾ ಹೋಗಬೇಕು. ಏಕೆಂದರೆ ನನಗೂ ಒಂದೊಥ್ಲಲ ಅನ್ನುತ್ತೆ ಈ ಸರಳತೆ ಅನ್ನೋ ಹೆಸರಿನೊಳಗೆ ಭಾಷೆಯನ್ನು ಜಾಳು ಜಾಳಾಗಿ ಮಾಡಿಬ್ಬಿಟ್ಟದ್ದೇವೇನೋ ಅಂತ....

**ಕರೀಂಖಾನ್:** ಆಗುತ್ತೆ. ಅದಕ್ಕೋಸ್ಕರ, ಈಗ ಪರಮೇಶ್ವರ ಪಾರ್ವತಿ ಜೊತೆ ಮಾತಾಡೋ ಸಂಭಾಷಣೆಗೂ ಒಬ್ಬ ರಾಜಾ - ರಾಣಿ ಮಾತಾಡೋ ಸಂಭಾಷಣೆಗೂ ಒಬ್ಬ ಪುರದ ಸಾಮಾನ್ಯ ಪ್ರಜೆ ಮಾತಾಡೋ ಭಾಷೆಗೂ, ಹಳ್ಳಿಯವನು ಮಾತಾಡೋ ಭಾಷೆಗೂ ವ್ಯತ್ಯಾಸ ಇರುತ್ತೆ. ಆಯಾ ಭಾಷೆ ಆಯಾ ಸನ್ನಿವೇಶಕ್ಕೆ, ಆ ವ್ಯಕ್ತಿತ್ವಕ್ಕೆ ತಕ್ಕಂತೆ ಭಾಷೆ ಬರಬೇಕು. ಹಾಗೆ ಬಂದರೇನೇ ಆ ಭಾಷೆ ಸೊಗಸು, ಸಹಜ. ಹಾಗಿಲ್ದೆ ಇರುವಾಗ ಅದು ಏನಾದ್ರೂ ಅಂದ್ಕೊಳ್ರಿ. ಏನಾಗೋಕಾಗೋದಿಲ್ಲ....

**ಶಾಸ್ತ್ರಿಗಳು:** ಈಚೀಚೆಗೆ ಬರ್ತಾ ಇರೋ ಕವನಗಳ ರಚನೆ, ಕನ್ನಡ ಲಘುಕವನಗಳ ರಚನೆ ಇದೆಯಲ್ಲ, ಅದರ ಭಾಷೆ, ಶೈಲಿ, ಬಳಸುವ ವಿಧಾನ ಇವುಗಳ ಬಗ್ಗೆ ತಮಗೇನನ್ನಿಸುತ್ತೆ?

**ಕರೀಂಖಾನ್:** ಕವನಗಳಿಗೆಲ್ಲ ಶಬ್ದಗಳನ್ನು ಬಳಸುವಾಗ ಸಂಗೀತಮಯವಾದ ಶಬ್ದಗಳನ್ನು ಬಳಸಬೇಕು. "ಯ,ರ,ಲ,ವ,ಮ,ನ" ಈ ಅಕ್ಷರಗಳು ಕೂಡಿಕೊಂಡು ಬಂದ್ರೆ ಕರ್ಣಮನೋಹರವಾಗಿ ರುತ್ತೆ: ಕೇಳೋದಿಕ್ಕೆ ತುಂಬಾ ಇಂಪಾಗಿರುತ್ತೆ. ಆದ್ದರಿಂದ ಸಂಗೀತಮಯ ಶಬ್ದಗಳನ್ನೇ ಉಪಯೋಗಿಸ ಬೇಕು. ಮತ್ತೆ "ಸ" ಮುಂದೆ "ಹ" ಆಗಲೀ "ಶ" ಮುಂದೆ "ಸ", "ಳ" ಮುಂದೆ "ಲ" ಅಥವಾ "ಲ" ಮುಂದೆ "ಳ" , "ಹ" ಮುಂದೆ "ಅ" "ಅ" ಮುಂದೆ "ಹ" ಇವುಗಳನ್ನೆಲ್ಲಾ ಸಾಧ್ಯವಾದ ಮಟ್ಟಿಗೆ ಕಡಿಮೆ ಮಾಡಬೇಕು. ಬಳಸದೇ ಹೋದ್ರೇನೆ ಒಳ್ಳೇದು. ಹೀಗೆ ಸಂಗೀತಮಯವಾದ ಶಬ್ದಗಳನ್ನು ಬಳಸಿ ಕವಿತೆ ರಚನೆ ಮಾಡಿದ್ರೆ ಕಿವಿಗೆ ತುಂಬಾ ಹಿತವಾಗಿರುತ್ತೆ. ಯಾವ ಭಾಷೆಯವ್ರು ಕೇಳಿದ್ರೂ ಏನಪ್ಪಾ ಕನ್ನಡ ಎಂಥಾ ಕಮನೀಯವಾದ ಭಾಷೆ ಅನ್ನಿಸುತ್ತೆ. ಹಾಗನ್ನುವಾಗ ನನ್ನ ರಚನೆಯೊಂದನ್ನು ಹೇಳ್ಬೇಕು ಅನ್ನುತ್ತೆ:

**"ಕಮನೀಯ ಕನ್ನಡದ**
**ರಮಣೀಯ ಸಿರಿನಾಡು**
**ಮಹನೀಯ ಕನ್ನಡಿಗ**
**ಬೆಳಗುವ ಕಲೆ ನೋಡು....."**

ಭಾಷೆಯನ್ನು ಸಮರ್ಪಕವಾಗಿ ಸಂಗೀತಮಯ ಶಬ್ದಗಳನ್ನು ಉಪಯೋಗಿಸಿ ಬಳಸಿದಾಗ ಇಂಥ

ಮಧುರ ರಚನೆಗಳು ಬರ್‍ತವೆ. ಇದಕ್ಕೆ ಶ್ರಮ ಪಡಬೇಕು.

ಕೆಲವು ಅನಿರೀಕ್ಷಿತ ಘಟನೆಗಳನ್ನು, ಸಮಯ, ಸಂದರ್ಭ, ಘಟಿತ, ಅಘಟಿತ ಘಟನಾಪರಂಪರೆಗಳ ಸತ್ಪರಿಣಾಮ, ದುಷ್ಪರಿಣಾಮಗಳನ್ನು ಆಧರಿಸಿಕೊಂಡು ಅದೃಷ್ಟ, ವಿಧಿ, ಹಣೆಬರಹ, ಇಂಥ ಶಬ್ದಗಳನ್ನು ನಸೀಬ್, ಕಿಸ್ಮತ್ ಇಂಥಾ ಶಬ್ದಗಳನ್ನು ಪ್ರಯೋಗ ಮಾಡ್ಬೇಕಾಗ್ಬರುತ್ತೆ. ಯಾಕೆಂದ್ರೆ, ತನ್ನ ಅನಾನುಕೂಲತೆಯ ದೆಸೆಯಿಂದ, ತನ್ನ ಶ್ರಮಕ್ಕೆ ಪ್ರತಿಫಲ ಪ್ರಾಪ್ತವಾಗಲಿಲ್ಲ.ಅಂದಾಗ ಇಂಥಾ ಕೆಲವು ಶಬ್ದಗಳು, ಇದರಲ್ಲಿ ಸಹಜತೆ ಇದೆಯೋ ಇಲ್ವೋ. ಆದ್ರೂ ಹುಟ್ಕೊಳ್ಳೋದು "ನನ್ನ ಹಣೇ ಬರಹವೇ ಹೀಗೆ", ಅನ್ನೋ ತೀರ್ಮಾನಕ್ಕೆ ಬರೋದು. "ನಾನೆಷ್ಟೇ ಸತ್ಯಮಾರ್ಗದಲ್ಲಿ ನಡೆದ್ರೂವೇ ಆ ಸತ್ಯವೇ ನನ್ಮೇಲೆ ಬಂತಲ್ಲಾ, ಇದರ ದಾಳಿಯಾಯ್ತಲ್ಲ, ನಾನು ಪಡ್ಕೊಂಡು ಬಂದದ್ದೇ ಇಷ್ಟು. ದೇವ್ರು ನನಗೆ ಅನುಗ್ರಹ ಮಾಡಿರೋದೆ ಇಷ್ಟು" ಅನ್ನೋ ತೀರ್ಮಾನಕ್ಕೆ ಬರ್‍ಬೇಕಾಗುತ್ತೆ. ಇದರಿಂದ ಪ್ರಗತಿ ಕುಂಠಿತವಾಗುತ್ತೆ. ನಿರಾಶಾಭಾವ ತಾಂಡವವಾಡುತ್ತೆ. ನಿರಾಶೆಯ ಮಬ್ಬಿನಲ್ಲಿ ನಾವೂ ಮಾಯವಾಗಿ ಹೋಗ್ತೀವಿ....

## ಜನಪದ ಸಾಹಿತ್ಯ ಹರಿಕಾರ

**ಶಾಸ್ತ್ರಿಗಳು:** ಇದರ ಜೊತೆ ಜೊತೆಗೇನೇ ನೀವು ಜನಪದ ಸಾಹಿತ್ಯಾನ ರೂಢಿಸಿಕೊಂಡ್ರಿ. ಸಂಗ್ರಹಿಸಿದಿರಿ. ಹಳ್ಳಿಹಳ್ಳಿಗಳಲ್ಲಿ ಸುತ್ತಿದಿರಿ, ಪುಸ್ತಕಗಳನ್ನು ಮುದ್ರಿಸಿದಿರಿ, ನೀವೇ ಹೊತ್ತು ಮಾರಿದಿರಿ. ಮಾರುವಾಗ ಅದರ ಹಾಡುಗಳನ್ನು ನೀವೇ ಹಾಡಿ ಅದರ ಮಾಧುರ್ಯಾನ ಎಲ್ಲರಿಗೂ ಪರಿಚಯಮಾಡಿಕೊಟ್ಟಿರಿ. ಹೀಗೆ, ಜನಪದ ಸಾಹಿತ್ಯಕ್ಕೆ, ಅದರ ಪ್ರಚಾರಕ್ಕೆ ತುಂಬಾ ಮುಂಚೂಣಿಯ ಲ್ಲಿನ ಹರಿಕಾರರಾದ್ರಿ. ಅದರ ಒಲವು ನಿಮಗೆ ಹೇಗೆ ಪ್ರಾಪ್ತಿಯಾಯ್ತು?

**ಕರೀಂಖಾನ್:** ನನಗೆ ಸ್ವಲ್ಪ ಶಾಸ್ತ್ರೀಯ ಸಂಗೀತದ ಪರಿಚಯ ಅಭ್ಯಾಸದ ಆರಂಭದಲ್ಲೇ ಲಭ್ಯವಾಯ್ತು. ಆದರೆ ಶಾಸ್ತ್ರೀಯ ಸಂಗೀತದ ಪ್ರತಿ ರಾಗವನ್ನ, ಭಗವಂತನನ್ನು ಒಲಿಸಿಕೊಳ್ಳೋ ಕಾರಣದಿಂದ, ಶಾಸ್ತ್ರೀಯ ಸಂಗೀತಗಾರರು ರಾಗಗಳನ್ನು ಸಂಯೋಜನೆ ಮಾಡ್ತಾ ಇದ್ರು. ಆ ರಾಗದಲ್ಲಿ ದೀನಭಾವ ಇರೋದು. ಪ್ರತಿ ರಾಗದಲ್ಲೂ ದೀನಭಾವ. ಸ್ಫೂರ್ತಿ ಇಲ್ಲ, ಸ್ಫೂರ್ತಿ ಉತ್ಪನ್ನ ಆಗೋದಿಲ್ಲ. ಈ ಸಂದರ್ಭದಲ್ಲಿ ಜನಪದ ಗೀತೆಗಳನ್ನು ಕೇಳಿದಾಗ ಅವುಗಳಲ್ಲಿ ವೇಗ ಇತ್ತು. ಹಾಗೇ, ಆಗ ನಮ್ಮ ಮನೆಯ ಮುಂದೆ ಶ್ರವಣಬೆಳಗೊಳದ ಕಡೆಯವರು, ಕಂಚುಗಾರರು, ಗಾಡಿಕಟ್ಕೊಂಡು ಬರೋರು. ಅವ್ರು ಹಗಲೆಲ್ಲಾ ವ್ಯಾಪಾರ ಮಾಡ್ಕೊಂಡು ಸಾಯಂಕಾಲದ ಹೊತ್ತು ಕೋಲಾಟ ಹಾಕೋವ್ರು. ಹಾಡು ಹಾಡೋವ್ರು. ಅವುಗಳನ್ನು ಕೇಳ್ತಾ ಅದರ ಕಡೆಗೆ ಒಲವು ಉಂಟಾಯ್ತು. ನಾನು ಕೇವಲ ಜನಪದದಿಂದ ಆಕರ್ಷಿತನಾಗಲಿಲ್ಲ, ಪ್ರೌಢ ಸಾಹಿತ್ಯದಿಂದ ಜನಪದದ ಕಡೆಗೆ ಬಂದೆ. ಆದ್ರೆ ಜಾನಪದದಲ್ಲಿ ಉತ್ತಮ ಅಂಶಗಳಿಲ್ಲ ಅಂತ ಅಲ್ಲ, ಅಲ್ಲಿ ಜೀವನಾನುಭವ ತುಂಬಿ ತುಳುಕ್ತಾ ಇದೆ. ಹೇಗೇಂದ್ರೆ:

**"ಆಡುವಾಗ ಇಕ್ಕುವಾಗ ಅಡಿವೆಲ್ಲಾ ನೆಂಟರು**
**ಅಡವಿಯ ಸೊಪ್ಪು ಮೆಲುವಾಗ ನೆಂಟಾರು**
**ಗುರತ ಮರೆತಾರು.'**

ನಮ್ಮ ಕೈ ಚೆನ್ನಾಗಿ ನಡೆದಾಗ, ಮತ್ತೊಬ್ಬರಿಗೆ ಕರೆದು ಕೊಡೋ ಸ್ಥಿತಿಯಲ್ಲಿದ್ದಾಗ ಅಡವೀಲಿರೋರೆಲ್ಲಾ ನಾವು ನಿಮ್ಮ ನೆಂಟರು ಅಂತ ಬರ್‍ತಾರೆ. ಆದ್ರೆ ನಮಗೆ ಕಾಡಿನ ಸೊಪ್ಪು

ಮೆಲ್ಲುವಂಥಾ ದುಸ್ಥಿತಿ ಬಂದಿರುವಾಗ ನಿಜವಾದ ನೆಂಟರೂ ನಮ್ಮ ಗುರುತು ಮರೀತಾ ಇದ್ದಾರೆ ಅಂತ ಹೇಳಿ. ಹೀಗೆ, ಇಂಥಾ ಅನುಭವಪೂರ್ಣವಾದ ಜೀವನ. ಇನ್ನು ಹೆಣ್ಣು ಹೆಚ್ಚಾಗಿ ಹೆಣ್ಣಿನ ಬಗ್ಗೆ ಮಮತೆ ಇಟ್ಕೊಂಡಿರೋಳು. ಉಸುರಿನ ಕೊನೆಯವರೆಗೂ ಹೆಣ್ಣು ತನ್ನ ತಾಯಿಯನ್ನು ನೆನೆಯೋಳು ಆ ತಾಯಿಯ ಬಗ್ಗೆ ಹೆಣ್ಣು ಹೇಗೆ ಹೇಳ್ಕೋತಾಳೆ ಅಂದ್ರೆ:

**"ತಾಯಿಯಿಲ್ಲದ ಮೇಲೆ ಇರಬಾರದೀ ಜನ್ಮ**
**ಹೋಗ್ಬೇಕು ಹೊಳೆಯ ಕರೆಗಾಗಿ| ತಾಯವ್ವ**
**ಬೀಳ್ಬೇಕು ಗಂಗೆಯ ಹೆಸರ್ಹೇಳಿ||"**
**"ತಾಯಿಲ್ದ ತವ್ರೀಗೆ ಹೋಗೋರು ದಡ್ಡಾರು**
**ನೀರಿಲ್ದ ಕೆರೆಗೆ ಕರುಹೋಗಿ| ಅಳುವಂತೆ**
**ತಾಯಿಲ್ದ ತವರಲ್ಲಿ ಹೆಣ್ಣ ಗೋಳು||"**

ಈ ರೀತಿ ತನ್ನ ಅನುಭವವನ್ನು ಹೇಳ್ತಾ ಹೋಗ್ತಾಳೆ. ಮತ್ತೆ ಇನ್ನೊಂದ್ಕಡೆ, ತಾಯಿಯಿಲ್ದೇ ಇರೋ ತವ್ರೀಗೆ ಹೆಣ್ಣು ಬಡವಳಾಗಿ ಬರ್ತಾಳೆ. ಆವಾಗ ಹೇಳ್ಕೋತಾಳೆ ತನ್ನ ಗಂಡ ದಾರಿದ್ರಾವಸ್ಥೆಗೆ ಸಿಕ್ಕಿರುವಾಗ ತೌರುಮನೇಲಿ ಆಶ್ರಯ ಪಡೆದು ಹೋಗೋಣ ಅಂತ ಬಂದ್ರೆ ಅವಳ ಅನುಭವ ಹೇಗಾಗುತ್ತೆ ಅಂದ್ರೆ:

**"ಗಂಜಿಯ ಕುಡಿದರೂ ಗಂಡನ ಮನೆಲೇಸು**
**ಅಂದಳದ ಮೇಲೆ ಚೌರೀಯ ಬೀಸ್ಕೊಂಡ್ರೂ| ಹಂಗೀನ**
**ತೌರ ಮನೆ ಬ್ಯಾಡ||"**
**"ಅಣ್ಣ ಬಾಳಿದರೇನು ತಮ್ಮ ಬಾಳಿದರೇನು**
**ನನ್ನ ಕೈ ಹಿಡ್ದ ಪುರುಷನು| ಬಾಳಿದರೆ**
**ಉಣಲಿಕ್ಕೂ ಭಾಗ್ಯ ತಿನಲಿಕ್ಕೂ||"**

ತನ್ನ ತೌರಿಗೆ ಯಾವ ವಿಧವಾದ ಬಂಧನ ಕಷ್ಟಗಳೂ ಪ್ರಾಪ್ತವಾಗದೆ ಹೋಗ್ಲಿ, ನನ್ನ ತೌರಿನವರ ಇಷ್ಟರು, ಮಿತ್ರರು, ಪುತ್ರರು ಪೌತ್ರರಾದಿಯಾಗಿ ಬಳಗವೆಲ್ಲ ಹೆಚ್ಚಾಗಲಿ ಅಂತ ಹಾರೈಸುತ್ತಾಳೆ. ಆಮೇಲೆ ಹೆಣ್ಣಿಗೆ ತನ್ಮೇಲೇ ಜಿಗುಪ್ಸೆ ಉಂಟಾಗುತ್ತೆ:

**"ಹೆಣ್ಣಾಗಿ ಹುಟ್ಟೋಕ್ಕಿಂತ ಮಣ್ಣಾಗಿ ಹುಟ್ಟಿದರೆ**
**ಮಣ್ಣಿನ ಮೇಲೊಂದು ಮರವಾಗಿ| ಹುಟ್ಟಿದರೆ**
**ಪುಣ್ಯವಂತರಿಗೆ ನೆರಳಾದೆ||"**

**ಶಾಸ್ತ್ರಿಗಳು:** ಜೀವನ ಸಾರ್ಥಕ್ಯ.

**ಕರೀಂಖಾನ್:** ಹೌದು. ಹೆಣ್ಣಾಗಿ ಹುಟ್ಟಬಾರದು. ಮಣ್ಣಾಗಿ, ಮರವಾಗಿ ನೆರಳಾಗಬೇಕು. ಹೆಣ್ಣಾಗಿ ಹುಟ್ಟಿದರೆ ಜೀವನ ವ್ಯರ್ಥ ಅಂತ ಹೇಳಿ. ಈ ರೀತಿಯಲ್ಲೇ ತನ್ನ ಬದುಕಿನ ಬಗ್ಗೆ ಹೇಳ್ಕೋತಾಳೆ:

**"ಹಕ್ಕಿ ಕಾಯ ತಿಂದು ಕೈ ತುಂಬ ನೀರು ಕುಡಿದು**
**ಹಾಸುಗಲ್ಲಾಗೆ ಹರಳೊತ್ತಿ| ಸುಡುವಾಗ**
**ಸಾಕಾಯ್ತು ತೌರೀನ ಮನೆಮಾರು||"**

ಇನ್ನೀ ಕಡೆ ತಿರುಗಿ ನೋಡಬಾರ್ದು. ಹೊರಟು ಹೋಗಿ ಬಿಡಬೇಕು ಅಂದ್ರೆ ಅವ್ರ ಭಾವ ಎಷ್ಟರಮಟ್ಟಿಗೆ ಇತ್ತು.

# ಜಾನಪದ ದಿಗ್ಗಜರ ಸಂವಾದ



**ಶಾಸ್ತ್ರಿಗಳು:** ಜೊತೆಗೆ ಜಾನಪದ ಸಾಹಿತ್ಯ ರಚನೆಯೊಳಗೆ ಬಹುಶಃ ಈ ಉಪಮೆ ಇಲ್ದೇ ಇರೋ ಯಾವ ತ್ರಿಪದಿಯೂ ಇಲ್ಲ ಅಂತ ಅನ್ಸುತ್ತೆ.

**ಕರೀಂಖಾನ್:** ಹೌದು. ಪ್ರತಿಯೊಂದಕ್ಕೂ ಉಪಮೆ ಇದೆ. ಅನುಭವ ಇದೆ.

**ಶಾಸ್ತ್ರಿಗಳು:** ಈಗ, ಕರು, ನೀರಿಲ್ಲದ ಕೆರೆಗೆ ಹೋಯ್ತು ಅನ್ನೋ ಒಂದು ಹೋಲಿಕೆ ಕೊಡುವಾಗ ಅದರೊಳಗೆ ಪೂರ್ವಾರ್ಧದಲ್ಲಿ ವಿಚಾರ ಹೇಳಿದ್ರೆ ಅದರ ಉತ್ತರಾರ್ಧದಲ್ಲಿ ಉಪಮೆ ಬರುವಂಥಾದ್ದು...

**ಕರೀಂಖಾನ್:** ಅದೇ ರೀತಿ, ಮಕ್ಕಳ ಆಟ ನೋಡಿ ಹೇಳ್ತಾಳೆ:

"ನನ್ನಯ್ಯನಂಥೋರು ಹನ್ನೆರಡು ಮಕ್ಕಳು
ಹೊನ್ನೆಯ ಮರದ ಬುಡದಲ್ಲಿ| ಆಡುವಾಗ
ಸನ್ಯಾಸಿ ಜಪವ ಮರೆತಾನು||"

**ಶಾಸ್ತ್ರಿಗಳು:** ಎಷ್ಟು ಲೋಕಾನುಭವ, ಹೃದಯ ಶ್ರೀಮಂತಿಕೆ, ಕವಿತೆಯ ಜಾಣ್ಮೆ ಭಾವ ತುಂಬಿರುವಂಥಾ ನಮ್ಮ ಜನಪದ ಸಾಹಿತ್ಯ ನಿರ್ಮಾಣ ಆಯ್ತಲ್ಲ, ಹಳ್ಳಿ ಸಾಹಿತ್ಯ ಇದನ್ನು ರಚಿಸಬೇಕಾದರೆ ಆ ರಚನಕಾರರು, ಪಾಪ ಅವರ್ಯಾರೋ ಅಜ್ಞಾತರು, ಅವರ ಸಂಸ್ಕಾರ ಎಷ್ಟಿರಬೇಕು!

**ಕರೀಂಖಾನ್:** ಇದೇನಿತ್ತು ಅಂದ್ರೆ, ಈ ಹಿಂದಿನ ಶಿಕ್ಷಣಕ್ಕೂ, ಈಗಿನ ಶಿಕ್ಷಣಕ್ಕೂ ವ್ಯತ್ಯಾಸ ಹೇಳ್ತೀನಿ, ಪ್ರತಿಯೊಂದು ಹಳ್ಳಿಗೂನೂ ಒಂದು ಗರಡಿ ಮನೆ ಇರೋದು: ಒಂದು ಗುರುಮನೆ ಇರೋದು.

## ಪುಸ್ತಕ ವಿಭಾಗ

ಗರಡಿ ಮನೇಲಿ ವ್ಯಾಯಾಮ ಮಾಡಿ ಶರೀರ ರಕ್ಷಣೆ ಮಾಡ್ಕೊಳ್ಳೋದು, ಆರೋಗ್ಯಕಾಪಾಡಿಕೊಂಡು ದೃಢಕಾಯರಾಗಿರೋರು. ಗುರುಮನೆಯಲ್ಲಿ ನಿತ್ಯ ಒಂದೊಂದು ಕಾವ್ಯದ ಅವಲೋಕನ ನಡಿಯೋದು, ಪ್ರವಚನ ನಡಿಯೋದು. ಆಗ ಒಬ್ರು ಓದಿದ್ರೆ ಇನ್ನೊಬ್ರು ಪ್ರತಿ ಶಬ್ದಕ್ಕೆ ಅರ್ಥಮಾಡಿಕೊಳ್ಳೋವ್ರು. ಹಾಗೇ ಕೂತ್ಕೊಂಡು ಕೇಳೋವ್ರಿಗೆ ವಿದ್ಯೆ ಇಲ್ದೇ ಇದ್ರೂನೂ ಆ ಕಾವ್ಯಗಳ ಪದಪ್ರಯೋಗ ಅರ್ಥವಾಗೋದು. ಈ ಕಾರಣದಿಂದಾಗಿ ಕವಿರಾಜಮಾರ್ಗದಲ್ಲಿ;

**"ಪದನರಿದು ನುಡಿಯಲುಂ ನುಡಿದುದನರಿದಾರಯಲುಂ**
**ಆರ್ಪರಾ ನಾಡವರ್ಗಳ್ ಚದುರರ್, ನಿಜದಿಂ**
**ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್...."**

**ಶಾಸ್ತ್ರಿಗಳು:** ಇದು ಆಗಿನ ವಿದ್ಯಾಭ್ಯಾಸಕ್ಕೂ ಈಗಿನ ವಿದ್ಯಾಭ್ಯಾಸಕ್ಕೂ ಇರೋ ವ್ಯತ್ಯಾಸ. ಪಠ್ಯಪುಸ್ತಕಗಳಿಲ್ದೇ ಇದ್ರೂ ಅದು ನಿಜವಾದ ಗಟ್ಟಿಯಾದ ನೆಲಗಟ್ಟು ಇದ್ದಂಥದ್ದು.

**ಕರೀಂಖಾನ್:** ಗಟ್ಟಿ ನೆಲಗಟ್ಟಿನ ಮೇಲೆ ಅದು ನಡೀತಾ ಇತ್ತು.

**ಶಾಸ್ತ್ರಿಗಳು:** ಅನಂತರದಲ್ಲಿ ತಾವು ಜಾನಪದ ಸಾಹಿತ್ಯ ಸಂಗ್ರಹಕ್ಕೆ ಹೊರಟಿರಲ್ಲ. ಅಲ್ಲಿನ ನಿಮ್ಮ ಅನುಭವ ಹೇಳಿ.

**ಕರೀಂಖಾನ್:** ಅವ್ರು ಮೊದಲು ಮೊದಲು ನಾಚಿಕೊಳ್ಳೋರು, ಅದು ಹೆಚ್ಚಾಗಿ ಜಾನಪದ ಸಾಹಿತ್ಯಾನ ಕಾಪಾಡಿಕೊಂಡು ಬಂದಿರೋರು ಈ ಹರಿಜನ ಮಹಿಳೆಯರು. ಅವ್ರು, ನಮ್ಮಂಥವರ ಮುಂದೆ ಹೇಳ್ಬೇಕಾದ್ರೆ ನಾಚ್ಕೊಳ್ಳೋರು, ಮುಜುಗರ ಮಾಡ್ಕೊಳ್ಳೋರು. ಅದ್ರಿಂದ ಸ್ವಲ್ಪ ಸಲಿಗೆ ಮಾಡಿಕೊಳ್ಳಬೇಕು. ಒಂದು ಸೀರೇನೋ ಕುಬುಸಾನೋ ತಗೊಂಡು ಹೋಗಿ ಕೊಡಬೇಕು. ಎಲೆ ಅಡಿಕೆ ಕಡ್ಡೀಪುಡಿ ಕೊಡಬೇಕು. ಅವ್ರ ಮನೆಯ ಗಂಡಸ್ರು "ಪರವಾಗಿಲ್ಲ ನೀ ಹೇಳು" ಅನ್ನೋ ಮಟ್ಟಿಗೆ. ಆ ಸಲಿಗೆ ಮೇಲೆ ಅವ್ರು ಹೇಳ್ತಾ ಹೋಗೋವ್ರು. ಆವಾಗ ಸಂಗ್ರಹ ಮಾಡಬಹುದು. ಈಚೆಗೆ ಟೇಪ್ ರೆಕಾರ್ಡರ್ ಬಂದು ಇನ್ನೂ ಅನುಕೂಲ ಆಗಿದೆ. ಆವಾಗ ಹಾಗಿರಲಿಲ್ಲ, ಬರ್ಕೋಬೇಕು. ಆಮೇಲೆ ಭಾಷೆ, ಶೈಲಿ ಯದ್ವಾತದ್ವಾ ಬಹಳ ಇರೋದು. ಅದನ್ನೆಲ್ಲಾ ಸರಿಪಡಿಸಬೇಕು. ಹೀಗೇ ಸಂಗ್ರಹ ನಡೀತು.

**ಶಾಸ್ತ್ರಿಗಳು:** ಈ ಸೀರೆ ಬಟ್ಟೆ ಇವುಗಳಿಗೆಲ್ಲಾ ಹಣ ಹೇಗೆ ಹೊಂದಿಸಿಕೊಂಡಿರಿ?

**ಕರೀಂಖಾನ್:** ಕೆಲವು ಕಡೆ ನಾವು ಉಪನ್ಯಾಸಗಳನ್ನು ನೀಡ್ತಾ ಇದ್ವಿ. ಅಭಿಮಾನಿಗಳು ಚೂರುಪಾರು ಏನಾದ್ರೂ ಕೊಡೋವ್ರು. ಆಗ ಸಂಗ್ರಹಿಸಿದ್ದನ್ನು ಹೀಗೆ ವಿನಿಯೋಗಿಸ್ತಿದ್ದೆ. ಸಂತೇಲಿ ಕಳೆದು ಹೋದ ಮಕ್ಕಳನ್ನು ಹುಡುಕಿ ಅವರ ತಂದೆ ತಾಯಿಗಳಿಗೆ ಒಪ್ಪಿಸುವ ರೀತೀಲಿ ನಾನು ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಸಂಪಾದಿಸುವ ಕೆಲಸ ಮಾಡಿದೆ. ಜೋಗುಳದ ಹಾಡು, ತಾಯಿ ಮಗಳನ್ನು ಗಂಡನ ಮನೆಗೆ ಕಳಿಸಿ ಕೊಡುವಾಗ ದುಃಖ ಪಡೋವಂಥಾ ನುಡಿಗಳು, ಕೋಲಾಟದವು. ಹೀಗೆ ಕೆಲವೊಮ್ಮೆ ಎಲ್ಲವೂ ಒಂದಕ್ಕೊಂದು ಸೇರಿಕೊಂಡು ಬಿಡೋವು. ಅವುಗಳನ್ನು ಬೇರೆ ಮಾಡಿ ಸಂಪಾದಿಸಬೇಕಾಗ್ತಿತ್ತು. ಆಮೇಲೆ ಅದರ ಸಿರಿ ಸಂಪತ್ತು ಎಷ್ಟೆಂದರೆ ರಾಗಿ ಬೀಸೋ ಹೆಣ್ಣಿಗೆ ವಿದ್ಯೆ ಇರ್ಲಿಲ್ಲ, ಆದ್ರೂ ಆಕೆ ಅಭಿಮಾನದಿಂದ ಹ್ಯಾಗೆ ಹೇಳ್ತಾಳೆ ಅಂದ್ರೆ:

**ರಾಗಿಕಲ್ಲಿನ ಮೇಲೆ ಚೆಲ್ಲಿರೋ ನಮ್ ಹಾಡ**
**ಬಲ್ಲಂಥ ಜಾಣರು ಬರ್ಕೊಳ್ಳಿ| ನಮ್ ಹಾಡ**



ಬಳ್ಳತಕ್ಕೊಂಡು ಅಳ್ಕೊಳ್ಳಿ||

ತುಂಬ್ಕೊಂಡು ಹೋಗಿ, ಚೆಲ್ಲಾಡಿ ಹೋಗ್ತಾ ಇದ್ದಾವೆ ಹಾಡುಗಳು ಅಂತೆ. ಅದು, ಬಲ್ಲಂಥ ಜಾಣಾರು ಬರ್ಕೊಳ್ಳಿ. ಅಷ್ಟು ಅಭಿಮಾನ ವ್ಯಕ್ತಪಡಿಸ್ತಾ ಇದ್ರು. ಅದ್ರಿಂದ ಆ ಸಾಹಿತ್ಯ ನನಗೆ ಪ್ರಿಯವಾಯ್ತು.

ಶಾಸ್ತ್ರಿಗಳು: ಜನಪದ ಸಾಹಿತ್ಯದಲ್ಲಿ ತೊಡಗಿಸಿಕೊಂಡು ಅದಕ್ಕೆ ಮಾಡಬಹುದಾದಷ್ಟು ಉತ್ಕೃಷ್ಟವಾದ ಸೇವೆ ತಮ್ಮಿಂದ ಸಂದಿದೆ. ಇದನ್ನು ಮಾಸ್ತಿಯವರೂ ಕೂಡ ಹೇಳಿದ್ದಾರೆ. ಪ್ರಪ್ರಥಮದಲ್ಲಿ ನೀವೇ ಇದಕ್ಕೆ ಚಾಲನೆ ಕೊಟ್ಟವರು ಅಂತ. ಅನಂತರದಲ್ಲಿ ತಾವು ಈ ನಾಟಕ, ಸಿನಿಮಾ ಸಾಹಿತ್ಯಕ್ಕೆ ಪ್ರವೇಶ ಮಾಡಿದ್ರಿ. ಅದು ಹೇಗೆ?

## ನಾಟಕಗಳಲ್ಲಿ ಅಭಿರುಚಿ

ಕರೀಂಖಾನ್: ಅಭಿರುಚಿ ಕಾರಣ ಅಂತ ಹೇಳ್ಬೇಕಾಗುತ್ತೆ. ಈ ಕನ್ನಡ ನಾಟಕಗಳನ್ನು ನೋಡೋ ಒಂದು ಅಭಿರುಚಿ ನನ್ನಲ್ಲಿ ಬೆಳೀತು. ನಾನೂ ಯಾಕೆ ಆ ತರಹದ ನಾಟಕಗಳನ್ನು ಬರೀಬಾರ್ದು ಅಂತ ಹೇಳಿ ಪ್ರಯತ್ನ ಪಟ್ಟೆ. ಆರಂಭದಲ್ಲಿ ಸೋತೆ. ಯಾಕೆಂದ್ರೆ ಸಮುದ್ರದ ನೀರನ್ನು ಒಂದು ಕೊಡದಲ್ಲಿ ತುಂಬಬೇಕು. ನಾಟಕದಲ್ಲಿ ಕೇವಲ ಇಪ್ಪತ್ತಾಲ್ಕು ದೃಶ್ಯಗಳಲ್ಲೇ ಸಂಪೂರ್ಣ ಕಥಾಭಾಗ ತರಬೇಕಾಗುತ್ತೆ. ಆಮೇಲೆ ಒಂದು ಅರಮನೆ ದೃಶ್ಯ ಬಂದಾಕ್ಷಣ ಇನ್ನೊಂದು ನದೀ ದೃಶ್ಯ ಹಾಕೋದಕ್ಕಾಗಲ್ಲ. ಮಧ್ಯದಲ್ಲಿ ರೋಡ್‌ಸೀನ್ ಹಾಕಬೇಕು. ಸ್ಟೇಜ್‌ನ ಎಕ್ವಿಪ್ ಮಾಡಿಕೊಳ್ಳೋದಕ್ಕೋಸ್ಕರ. ಇವನ್ನೆಲ್ಲಾ ಅರ್ಥ ಮಾಡ್ಕೋಬೇಕು. ಆ ವೇಳೇಲಿ ಹಾಸ್ಯಾನೋ ಏನೋ ಸೇರಿಸ್ಬೇಕು. ಹೀಗೆ ಎಲ್ಲಾ ನವರಸಗಳು ಕೂಡ ಇಲ್ಲಿ ಗುಂಫಿತವಾಗುತ್ತವೆ. ಆದ್ದರಿಂದ ನನಗೆ ಆರಂಭದಲ್ಲಿ ಸ್ವಲ್ಪ ಸೋಲಾಯ್ತು. ಆದ್ರೆ ಕ್ರಮೇಣಾ ಅದು ಸುಲಭವಾಗ್ತಾ ಬಂತು.

## ಪುಸ್ತಕ ವಿಭಾಗ

**ಶಾಸ್ತ್ರಿಗಳು:** ನೀವು ಪ್ರಾರಂಭದಲ್ಲಿ ಸುಬ್ಬಯ್ಯನಾಯ್ಡು ಅವ್ರಿಗೆ ಒಂದು ನಾಟಕ ಬರ್ದ್ಕೊಟ್ರಿ....

**ಕರೀಂಖಾನ್:** "ನಿರ್ದೋಷಿ" ಅಂತ. ಅದ್ರಲ್ಲಿ ಡಾ. ರಾಜ್‌ಕುಮಾರ್ ಅವ್ರೆಲ್ಲಾ ಇದ್ರು.

**ಶಾಸ್ತ್ರಿಗಳು:** ದೊಡ್ಡ ನಾಟಕ ಕಂಪನಿಗಳು ನಿಮ್ಮಿಂದ ಪ್ರಯೋಜನ ಪಡೆದುಕೊಂಡಿದ್ದಾರೆ.

**ಕರೀಂಖಾನ್:** ಅದ್ರೂರ್ವೇ ಆರ್ಥಿಕವಾಗಿ ನಾನು ಸುಧಾರಿಸಿಕೊಳ್ಳಲಿಕ್ಕಾಗಲೇ ಇಲ್ಲ....

**ಶಾಸ್ತ್ರಿಗಳು:** ನೀವು ಆರ್ಥಿಕ ಸಂಗತಿಗಿಂತ ನಿಮ್ಮ ರಚನೆಗೆ, ಸಾಹಿತ್ಯ ಅಭ್ಯಾಸಕ್ಕೆ ತೊಡಗಿಸಿಕೊಂಡಿರಿ. ನಿಮ್ಮ ಇತರ ನಾಟಕಗಳು.....

**ಕರೀಂಖಾನ್:** ನಿರ್ದೋಷಿ, ಮಧುಮೋಹನ (300 ಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡಿದೆ ಇದು.) ಮಾಗಡಿ ಕೆಂಪೇಗೌಡ, ಬೆಂಗಳೂರ್ ಕೆಂಪೇಗೌಡ ಹೀಗೆ ಸುಮಾರು ಎಂಬತ್ತು ನಾಟಕಗಳು. ಕ್ರಮೇಣ ನಾಟಕ ಕಂಪನಿಗಳು ಹೋಗಿಬಿಟ್ಟು ಪ್ರೋತ್ಸಾಹ ಕಡಿಮೆ ಆಗಿದ್ರಿಂದ ಅದನ್ನು ಬಿಡಬೇಕಾಗಿ ಬಂತು.

**ಶಾಸ್ತ್ರಿಗಳು:** ನೀವು ಸಿನಿಮಾಕ್ಕೆ ಬಂದದ್ದು ಹೇಗೆ?

**ಕರೀಂಖಾನ್:** ನನಗೆ ಜನಪದ ಸಾಹಿತ್ಯ ಅನ್ನ ಕೊಡ್ತಾ ಇತ್ತು. ಸಣ್ಣ ಸಣ್ಣ ಹೊತ್ತಗೆಗಳನ್ನು ಮುದ್ರಣ ಮಾಡಿ ಅಲ್ಲಲ್ಲೇ ಹಾಡಿ ಮಾರಾಟ ಮಾಡ್ತಾ ಇದ್ದೆ. ಎಂಟಾಣೆಗೊಂದು ಪುಸ್ತಕದಂತೆ ತಿಪಟೂರಿನ ಒಬ್ಬ ಪ್ರಕಾಶಕ ಎರಡು ಸಾವಿರ ರೂಪಾಯಿಗಳ ಪುಸ್ತಕಗಳನ್ನು ತಗೊಂಡು ಅಷ್ಟೂ ದುಡ್ಡನ್ನು ತಿಂದುಹಾಕಿಬಿಟ್ಸ. ಅವ್ನೇ ಪುನಃ ತನ್ನ ಹೆಸರಿನಲ್ಲೇ ಮುದ್ರಣ ಮಾಡೋದಕ್ಕೆ ಪ್ರಾರಂಭ ಮಾಡ್ದ. ನನ್ನ ಸಂಗ್ರಹ ನನ್ಮೇಲೇ ದಾಳಿಗಿಳೀತು. ಅವನ ವಿರುದ್ಧ ಕೋರ್ಟು ಕಚೇರಿ ಅಂತ ಹೋರಾಡೋ ಸಾಮರ್ಥ್ಯ ನನ್ನಲ್ಲಿರಲಿಲ್ಲ. ಆವಾಗ ಇದೆಲ್ಲಬಿಟ್ಟು ಮದ್ರಾಸ್ ಕಡೆಗೆ ಹೊರಟೆ. ಸಿನಿಮಾ ಲ್ಯಾಂಡಿಗೆ ಕರ್ಕೊಂಡು ಹೋದ್ರು. ಯಾಕೆಂದರೆ ನನ್ನ ಹತ್ತಿರ 'ಸ್ವರ್ಣ ಕಾಳಿಂಗ' ಅಂತ ಒಂದು ಕಥೆ ಇತ್ತು. ಪರಮೇಶ್ವರನ ಜಟೆಯಲ್ಲಿರುವ ಸರ್ಪಕ್ಕೆ ಸ್ವರ್ಣ ಕಾಳಿಂಗ ಅಂತ ಕರೀತಾರೆ. ಅದರ ಕಥೆ ಅದು. ಜಾನಪದ ಸಾಹಿತ್ಯದಲ್ಲಿ ಬರುತ್ತೆ. ಆ ಕಥೇನ ಸ್ವರ್ಣಗೌರಿ ಅಂತ ಒಂದು ಸಿನಿಮಾ ಮಾಡಿದ್ರು. ಅದಕ್ಕಾಗಿ ಅವ್ರು ಕರ್ಕೊಂಡು ಹೋದ್ರು. ಆರಂಭದಲ್ಲಿ ಎಲ್ಲಾ ಚೆನ್ನಾಗಿತ್ತು. ನಂತರ ಅಲ್ಲಿನ ರಾಜಕೀಯದಲ್ಲಿ ನನಗೆ ಅದರಲ್ಲಿ ತಲೆ ಎತ್ತೋದಕ್ಕೇ ಆಗ್ಲಿಲ್ಲ....

**ಶಾಸ್ತ್ರಿಗಳು:** ನಿಮ್ಮ ಹಾಡು....ನಟವರ ಗಂಗಾಧರ..... ಬಾಲಮುರಳಿಯವರು ಹಾಡಿದ್ದು.... ಅದು ತುಂಬಾ ಜನಪ್ರಿಯ ಆಯ್ತು. ಸಿನಿಮಾ ಹಾಡುಗಳಲ್ಲಿ ನಿಮ್ಮ ರಚನೆಗಳಲ್ಲಿನ ಸೊಗಡಿಗೂ ಬೇರೆಯವರ ರಚನೆಗಳಿಗೂ ಹೋಲಿಸಿದ್ರೆ ನಿಮ್ಮದ್ದೇ ಆದ ವೈಶಿಷ್ಟವನ್ನು ಗುರುತಿಸಬಹುದಲ್ವೇ?

**ಕರೀಂಖಾನ್:** ಹೌದು. ಇತ್ತೀಚೆಗೆ ಒಂದು ಕ್ಯಾಸೆಟ್ ಸಿದ್ಧವಾಗಿದೆ. ಧರ್ಮಸ್ಥಳ ಮಂಜುನಾಥನನ್ನು ಕುರಿತು ಅದರಲ್ಲಿನ ರಚನೆ ಹೇಗಿದೆ ಅಂದ್ರೆ:

**ಕಮನೀಯ ಕಲಿ ನೀನು ಕರುನಾಡ ಸಿರಿ ನೀನು**
**ಕಣ್ಣು ಮನ ಬೆಳಗುತಿಹ ಮಂಜುನಾಥನು ನೀನು ||ಪ||**

**ನೀ ಮುತ್ತು ಮಾಣಿಕ್ಯ ವಜ್ರ ಮರಕತ ನೀಲ**
**ಗೋಮೇಧಿಕಾ ಹವಳ ವೈಡೂರ್ಯ ಸಿರಿ ನೀನು**
**ಶಂಖಪದ್ಮ ಮಹಾಪದ್ಮ ಖರ್ವಖಚಿತ ನೀಲ**

# ಜಾನಪದ ದಿಗ್ಗಜರ ಸಂವಾದ

**ಮಕರನಂದ ಮುಕುಂದ ನವನಿಧಿಯ ತನು ನೀನು ||1||**

**ದೇವಲೋಕದ ದೊರೆಯೆ ಸುರಕಲ್ಪ ಸುಮತರುವೆ**
**ನಿನ್ನ ಸಂದರ್ಶನದಿ ಸ್ವರ್ಗೀಯ ಸುಖಕೊಡುವೆ**
**ನಿನ್ನ ದೇಹದ ಗಂಧ ಮಂದಾರ ಮಕರಂದ**
**ನೀನೊಲಿದು ನಲಿವಾಗ ನಮಗೆ ಪರಮಾನಂದ ||2||**

ಹೀಗೆ ರಚನೆಗಳನ್ನು ಮಾಡಿದ್ದೀನಿ.

**ಶಾಸ್ತ್ರಿಗಳು:** ನಿಮ್ಮ ಭಾಷಾ ಶೈಲಿಯೊಳಗೆ ಪ್ರೌಢಿಮೆ, ಸೌಂದರ್ಯ, ಸೌಷ್ಠವದ ಜೊತೆಗೆ ಇನ್ನೊಂದಿಷ್ಟು ಅಧ್ಯಾತ್ಮಛಾಯಿಷ್ಟವಾಗಿರುತ್ತೆ ಅಲ್ವೇ?

**ಕರೀಂಖಾನ್:** ಅದು ತಾನಾಗಿ ಬಂದಿದೆ. ಜೀವನದಲ್ಲಿ ಜರುಗುವ ಘಟನೆಗಳ ಪರಿಣಾಮ ಹಾಗಾಗಿಬಿಡುತ್ತೆ. ಆಮೇಲೆ ಹೋರಾಟದಲ್ಲಿ ಗೆಲವು ಸಾಧಿಸಿದರೆ ಅನಂತರದಲ್ಲಿ ನಮ್ಮ ಅಭಿಪ್ರಾಯಗಳು ಪ್ರತ್ಯೇಕವಾಗಿಬಿಡುತ್ವೆ. ಹೋರಾಟದಲ್ಲಿ ಸೋಲು ಕಂಡಾಗ ಆ ನಿರಾಶೆಯ ಮಧ್ಯದಲ್ಲಿಯೂ ಏನೋ ಒಂದು ಹೊಳೆಯುತ್ತೆ. ಹೊಳೆಯೋದು ಅದು ಕೆಲವೊಮ್ಮೆ ವಿಶ್ವಸಾಹಿತ್ಯವೂ ಆಗಬಹುದು. ಇಷ್ಟೇ ಜೀವನ ಅನ್ನೋ ತೀರ್ಮಾನಕ್ಕೂ ಬರ್ತೀವಿ.

**ಶಾಸ್ತ್ರಿಗಳು:** ಇನ್ನೊಂದು ಬಹುಮುಖ್ಯ ಅಂಶ- ನೀವು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಕೊಂಡಿರಿ. ಅದು ಹೇಗೆ ಆರಂಭವಾಯ್ತು?

## ಸ್ವಾತಂತ್ರ್ಯ ಹೋರಾಟದ ದಿನಗಳು

**ಕರೀಂಖಾನ್:** ಹೈಸ್ಕೂಲ್ ಮೊದಲನೇ ತರಗತಿಯಲ್ಲಿ ಓದ್ತಾ ಇದ್ದಾಗ ಹೆಡ್ ಮಾಸ್ಟರು "ದಿ ಹಿಂದು" ಪತ್ರಿಕೆ ತಂದು ಅದರಲ್ಲಿ ಅಂದಿಗೆ ನಡೆಯುವ ಘಟನೆಗಳನ್ನೆಲ್ಲಾ ಓದಿ ಹೇಳೋವ್ರು. ಆಗ ಗಾಂಧೀಜಿಯವರ ವ್ಯಕ್ತಿತ್ವ ಆಕರ್ಷಣೀಯವಾಯ್ತು. ನಾನು ಇವರನ್ನು ಯಾಕೆ ಹಿಂಬಾಲಿಸಬಾರದು ಅನ್ನೋ ಮನಸ್ಸಾಯ್ತು. ಅದು ಬೆಳೀತಾನೂ ಬಂತು. ಪರಿಸರಾನೂ ಅದಕ್ಕೆ ಅನುಕೂಲವಾಗಿತ್ತು. ಇಷ್ಟಮಿತ್ರರೂ ಕೂಡ ಅದಕ್ಕೆ ಸಹಾಯಕರಾದ್ರು. ನಾನು ರಾಷ್ಟ್ರಧ್ವಜ ಹಿಡ್ಕೊಂಡು ಪ್ರಭಾತ್‌ಪೇರಿ ನಡೆಸ್ತಾ, ಸ್ವಾತಂತ್ರ್ಯ ಗೀತೆಗಳನ್ನು ಹಾಡುತ್ತಾ ಹೋಗ್ತಾ ಇದ್ದೆ. ಇದರ ಬಗ್ಗೆ ಒಂದು ವರದಿಯನ್ನು 1932ರ ಅಕ್ಟೋಬರ್‌ನಲ್ಲಿ "ತಾಯ್ನಾಡು" ಪತ್ರಿಕೆ ಪ್ರಕಟಿಸಿದೆ. ಹೀಗೆ ಪ್ರಭಾತ್ ಪೇರಿಗಳಲ್ಲಿ ಭಾಗವಹಿಸ್ತಾನೇ ಇದ್ದೆ. ಆ ಆಕಾಂಕ್ಷೆಯೂ ಬೆಳೀತಾ ಬಂತು. ಪರಿಣಾಮ, ಸ್ವಾತಂತ್ರ್ಯ ಬರೋವರೆಗೂ ಎಲ್ಲರೂ ತ್ಯಾಗಿಗಳಾಗೇ ಇದ್ರು. ನಾನು ಐದು ಸಲ ಜೈಲಿಗೆ ಹೋಗಿದ್ದೇನೆ.

**ಶಾಸ್ತ್ರಿಗಳು:** ಸ್ವಾತಂತ್ರ್ಯಾನಂತರ....ಪರಿಸ್ಥಿತಿ ಹೇಗಿದೆ?

**ಕರೀಂಖಾನ್:** ಯಾವಾಗ ಖಜಾನೆ ಬೀಗದ ಕೈ ನಮ್ ಕೈಗೆ ಬರುತ್ತೆ, ನಿಧಿ ತುಂಬಿಕೊಂಡಿರೋದನ್ನ ಯಾವಾಗ ನೋಡ್ತೀವಿ. ಆವಾಗ ಮನಸ್ಸು ಬದಲಾಗುತ್ತೆ. ಸ್ವಾತಂತ್ರ್ಯ ಬಂದಮೇಲೆ ಎಲ್ಲಾ ಸೌಕರ್ಯಗಳು ಬಂದ್ವು. ಇದುವರೆಗೆ ನಾನು ಮಾಡಿದ ತ್ಯಾಗದ ಪ್ರತಿಫಲ ಪಡೀಬೇಕು ಅನ್ನೋ ವಾಂಛಲ್ಯ. ಬರ್ತಾ ಬರ್ತಾ ಅದು ಏನು ದೈವದುರ್ವಿಪಾಕವೋ ಏನೋ ಗೊತ್ತಿಲ್ಲ, ಜಾತೀಯತೆ ಹೆಚ್ಚಾ ಬಂತು. ಅದು ಯಾವ ಕಾರಣದಿಂದಲೂ ಕಡಿಮೆಯಾಗುವ ಸಂಭವ ಇಲ್ಲ, ಅದು ಬೆಳೀತಾನೇ

ಹೋಯ್ತು. ಆದರೆ ಅದರ ಸಹಾಯಕ್ಕೆ ಈ ತತ್ವಗಳು ಬೇಕು. ಗಾಂಧಿ ಹೆಸರು ಬೇಕು. ಗಾಂಧೀಜಿ ಹೇಳಿದ ಸತ್ಯ. ಧರ್ಮ, ನ್ಯಾಯ ಈ ಬಾಣಗಳನ್ನು ನಾವು ಪ್ರಯೋಗಮಾಡಲೇಬೇಕು. ಇವು ಸಂಮೋಹನಾಸ್ತ್ರಗಳು. ಇವುಗಳಿಂದ ಜನರನ್ನು ಸಂಮೋಹನಗೊಳಿಸಿ ಮರಳುಮಾಡಬೇಕು. ಅವುಗಳಿಗೇನಾದರೂ ಜನ ಸಿಡಿದ್ರೆ ಆಗ ಜಾತಿ ಪ್ರಯೋಗ ಮಾಡ್ಬೇಕು. ಹೀಗೆ ಅಧಿಕಾರದ ರುಚಿ ಕಂಡ ಮೇಲೆ ಪ್ರತಿಯೊಬ್ಬನಲ್ಲಿಯೂ ತಾನೂ ಅಧಿಕಾರದ ಗದ್ದುಗೆ ಹಿಡೀಬೇಕು ಅನ್ನುವ ವಾಂಛಲ್ಯ ಬಂತು. ಇಂಥವರಿಂದ ದೇಶೋದ್ಧಾರ ನಿರೀಕ್ಷಿಸಲಿಕ್ಕೆ ಸಾಧ್ಯವಿಲ್ಲ.

**ಶಾಸ್ತ್ರಿಗಳು:** ನೀವು ಈ ಯಾವ ಜಂಜಡಕ್ಕೂ ಸಿಲುಕದೆ ಅತಿ ಶುದ್ಧವಾಗಿ ಶ್ರಮಿಸಿದ್ದೀರಿ. ಈಗ ಅನೇಕರು ಆಗ ಶ್ರಮಿಸಿದ್ದರ ಪ್ರತಿಫಲ ಅನ್ನೋ ಹಾಗೆ ಈ ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿ ಇತ್ಯಾದಿ ತಗೋತಾ ಇದ್ದಾರೆ. ಅದರ ಬಗ್ಗೆ ತಮ್ಮ ಅಭಿಪ್ರಾಯವೇನು?

**ಕರೀಂಖಾನ್:** ಈಗ ವೃದ್ಧಾಪ್ಯದಲ್ಲಿರೋ ಆಗಿನ ಹೋರಾಟಗಾರರು ಸ್ವಲ್ಪ ಧನ ಸಹಾಯ ಪಡೆದ್ರೆ ತಪ್ಪೇನಿಲ್ಲ. ಬಹಳ ಜನ ಈಗಾಗಲೇ ತೀರಿಕೊಂಡಿದ್ದಾರೆ. ಆದ್ರೆ, ಈ ನೆಪದಲ್ಲಿ ಈಗ ಕೆಲವರು. ಸಮುದ್ರ ಮಥನದಲ್ಲಿ ಅಮೃತ ಉದ್ಭವ ಆದಾಗ ರಾಹು ಯಾವ ರೀತಿಯಲ್ಲಿ ತಾನೂ ದೇವತೆಗಳ ವೇಷ ಹಾಕಿ ಅಮೃತ ಕುಡಿದನೋ ಹಾಗೆ ಇವ್ರೂ ರಾಹುಕೇತುಗಳಾಗಿ ಸೇರ್ಕೊಂಡಿದ್ದಾರೆ. ನಿಜವಾದ ಸ್ವಾತಂತ್ರ್ಯ ಹೋರಾಟಗಾರರಿಗಿಂತ ಖೊಟ್ಟಿ ಹೋರಾಟಗಾರರ ಸಂಖ್ಯೆನೇ ಸಾಕಷ್ಟಿದೆ ಈಗ. ಇವ್ರೆಲ್ಲಾನೂವೆ ಪ್ರತಿಫಲ ಪಡೀತಿದ್ದಾರೆ. ಏನಾಡ್ಲಿಕಾಗುತ್ತೆ?

**ಶಾಸ್ತ್ರಿಗಳು:** ಬೆಳಗಾವಿ ಜಿಲ್ಲೆಯ ಪಾರವ್ವ ಎಂಬಾಕೆ ಹಿಂದೆ ಝುಂಡಾ ಹಾರಿಸಿ ಜೈ ಅಂದಾಕೆ. ಅವಳಿಗೆ ಪೆನ್ಶನ್ ಕೊಡಿಸ್ತೇನೆ ಅಂದ್ರೆ "ನನಗೇಕೆ ಕೂಲಿ" ಅಂದ್ಲು. ಅಂಥವರ ಸಾಲಿನಲ್ಲೇ ನೀವೂ ಕೂಡ. ಪೆನ್ಶನ್ ತಗೊಳ್ದೇನೇ ಇದ್ದೀರಿ......

**ಕರೀಂಖಾನ್:** ವೃದ್ಧಾಪ್ಯ ರೋಗದ ತೌರುಮನೆ. ಒಂದಲ್ಲಾ ಒಂದು ರೋಗ ಕಾಡ್ತಾನೇ ಇರುತ್ತೆ. ಅಂಗಾಂಗಗಳೆಲ್ಲಾ ಶಕ್ತಿ ಕಳ್ಕೋತಾ ಇರುತ್ವೆ. ಒಳಗಡೆ ಜಠರದಲ್ಲಿ ಕೆಲವು ರಸಗಳು ಉತ್ಪನ್ನವಾಗಿ ಏನು ಜೀರ್ಣ ಮಾಡುತ್ವೋ ಅವುಗಳ ಚೈತನ್ಯ ಕಡಿಮೆ ಆಗ್ತಾ ಇರುತ್ತೆ. ಆ ಸಮಯದಲ್ಲಿ ಔಷಧೋಪಚಾರಗಳಿಗಾಗಿ ಹಣದ ಅಗತ್ಯಇರುತ್ತೆ. ಅದು, ಈ ಪಾರವ್ವ ಪಿಂಚಣಿ ತಗೊಂಡಿದ್ರೆ ಚೆನ್ನಾಗಿರೋದು. ಅದು ತಪ್ಪೇನಲ್ಲ. ಯಾರೋ ಭೋಗಿಜನ ಸಹಸ್ರಾರು ಕೋಟಿ ರೂಪಾಯಿಗಳನ್ನು ಷೇರುಪೇಟೆಯಲ್ಲಿ ವಂಚನೆ ಮಾಡ್ತಾ ಇರುವಾಗ ದೇಶಕ್ಕಾಗಿ ದುಡಿದಿದ್ದವರು, ಅಪಮಾನಗಳನ್ನು ಅನುಭವಿಸಿದವರು, ಅಂಥವರು ನಿತ್ಯ ಜೀವನಕ್ಕಾಗಿ ಒಂದಿಷ್ಟು ಪಡೆದರೆ ತಪ್ಪೇನಿಲ್ಲ. ಪ್ರಜಾಪ್ರಭುತ್ವ ದಲ್ಲಿ ಶ್ರಮವೆಲ್ಲಾ ಅಧಿಕಾರ ಗದ್ದುಗೆಗೆ ಅಷ್ಟೆ. ಸಾಮಾನ್ಯ ಪ್ರಜೆಯ ಬದುಕು, ದೇಶದ ಪ್ರಶ್ನೆ ಇವ್ಯಾವೂ ಮುಖ್ಯ ಆಗ್ತಾ ಇಲ್ಲ. ಒಬ್ಬರನ್ನ ಇನ್ನೊಬ್ರು ಕಾಲೆಳೆಯೋದಕ್ಕೆ ಪ್ರಯತ್ನಿಸ್ತಾ ಇದ್ದಾರೆ. ಜನ ಇದನ್ನು ಅರ್ಥಮಾಡಿಕೊಳ್ಳಬೇಕು. ಅದಕ್ಕಾಗಿ ವಿದ್ಯೆ ಬೇಕು. ಅವಿದ್ಯಾವಂತರಿಂದ ತುಂಬಿರೋ ಈ ದೇಶದಲ್ಲಿ ಒಳ್ಳೇದು ಬೇಕು ಅಂದರೆ ಸರ್ವಾಧಿಕಾರ ಬೇಕು. ದುರಾಶಾಪೀಡಿತರನ್ನು ಬಡಿದು ಶಾಂತಿ ನೆಲೆಗೊಳಿಸೋದಕ್ಕೋಸ್ಕರ ಸರ್ವಾಧಿಕಾರ ಒಂದೇ ಇದಕ್ಕೆ ದಿವ್ಯ ಔಷಧ ಹೊರತು ಈ ಪ್ರಜಾಪ್ರಭುತ್ವ ರೀತಿಯಲ್ಲಿ ಈಗಿನ ಆಡಳಿತ ಕ್ರಮದಲ್ಲಿ ಏನೂ ಮಾಡೋದಕ್ಕಾಗಲ್ಲ.

# ಜಾನಪದ ದಿಗ್ಗಜರ ಸಂವಾದ

## ಸರ್ವಾಧಿಕಾರ - ದಿವ್ಯ ಔಷಧ

ಶಾಸ್ತ್ರಿಗಳು: ಬೇರೆ ರಾಷ್ಟ್ರಗಳಲ್ಲಿಯೂ ಸರ್ವಾಧಿಕಾರ ಇದೆ. ಅಲ್ಲಿಯೂ ದುರಾಡಳಿತ ಇದೆಯಲ್ಲ?

ಕರೀಂಖಾನ್: ಸರ್ವಾಧಿಕಾರಿ ಏನ್ಮಾಡ್ತಾನೆ? ನೀನು ರಸ್ತೆ ಪಕ್ಕದಲ್ಲಿ ನಡೆದುಕೊಂಡು ಹೋಗ್ಬೇಕು. ರಸ್ತೆ ಮಧ್ಯದಲ್ಲಿ ನಡೆಯಕೂಡದು. ಪೊಲೀಸಿನವನು ಎಲ್ಲಿ ಕೈ ತೋರಿಸ್ತಾನೋ, ಎಲ್ಲಿ ರಸ್ತೆ ದಾಟಬೇಕು ಅಂತಾನೋ ಅಲ್ಲೇ ನಾವು ದಾಟ್ತೇವಿ. ರಸ್ತೆ ಪಕ್ಕದಲ್ಲೇ ನಡೆದುಕೊಂಡು ಹೋಗ್ತೀವಿ. ಅವನ ಆಜ್ಞೆಯನ್ನು ನಾವು ಪಾಲನೆ ಮಾಡ್ತೀವಿ. ಅದ್ರಿಂದ ಅವ್ನು ಸಂಪ್ರೀತನಾಗ್ತಾ ದೇಶದ ಅಭಿವೃದ್ಧಿಯ ಕೆಲಸ ಕಾರ್ಯಗಳಲ್ಲಿ ನಿರತನಾಗ್ತಾನೆ. ಇದು ಮೂರು ದಿನಕ್ಕೂ ಬದಲಾವಣೆಗಳಾಗ್ಬೇಕು. ಚುನಾವಣೆಗಳು ನಡೀಬೇಕು, ಇದಕ್ಕಾಗಿ ಸಹಸ್ರಾರು ಕೋಟಿ ರೂಪಾಯಿಗಳ ವೆಚ್ಚ ಆಗ್ಬೇಕು, ಹೋರಾಟ, ಕೊಲೆ, ಸುಲಿಗೆ ಇವುಗಳೆಲ್ಲಾ ನಡೀಬೇಕು ಅಂದ್ರೆ ನೆಮ್ಮದಿ ಹೇಗೆ ಕಾಣೋದಿಕ್ಕೆ ಸಾಧ್ಯ? ಈಗ ರಾಜಕೀಯ ಹಳ್ಳಿಹಳ್ಳಿಗೂ ವಿಸ್ತಾರ ಆಗ್ಬೋಯ್ತು. ಹಳ್ಳಿಗಳ ಜನಜೀವನ ಸಾಕಪ್ಪಾ ಅನ್ನಿಸೋಮಟ್ಟಿಗೆ ರಾಜಕಾರಣಿಗಳು ತಂದಿಟ್ಟು ಬಿಟ್ಟರು. ದೇಶವೇ ಹಾಳಾಗ್ಲಿ ಮೂರುಕಾಸಿಗೆ ಬೇಕಾದ್ರೆ ಮಾರಿಬಿಡ್ತಾರೆ. ತಮ್ಮ ಜೇಬಿಗೆ ಹಾಕಿಕೊಂಡು ಬಿಡ್ತಾರೆ.

ಶಾಸ್ತ್ರಿಗಳು: ಇದರಿಂದ ನಿಮ್ಮ ಮನಸ್ಸಿಗೆ ವೇದನೆಯಾಗಲಿಲ್ಲವೇ?

ಕರೀಂಖಾನ್: ವೇದನೆಗೆ ಏನೂ ಮಾಡಕ್ಕಾಗಲ್ಲ. ಯಾಕೆಂದರೆ ಪರಂಪರೆ ನಡೀತಾ ಹೋಗ್ಬೇಕು ನೋಡಿ. ಎಲ್ಲಾರೂ ಏಕ ಮನಸ್ಸಿನವರು ಹುಟ್ಬೋದಿಲ್ಲ. ತಂದೆ ಶ್ರಮಪಟ್ಟು ಸಂಗ್ರಹಿಸಿದ ಧನವನ್ನು ಮಗ ನೀರಿನಂತೆ ಪೋಲು ಮಾಡ್ತಾನೆ. ಇಸ್ಪೀಟು ಆಟದಲ್ಲಿ ಕವಡೆ ಚಿಮ್ಮುವಂತೆ ಹಣ ಖರ್ಚು ಮಾಡ್ತಾನೆ. ಯಾಕೆಂದರೆ ಅವ್ನು ಕಷ್ಟಪಟ್ಟಿಲ್ಲ ನೋಡಿ ಅದಕ್ಕೋಸ್ಕರ. ಅನಂತರ ಬರೋ ಪೀಳಿಗೆ ಶ್ರಮಪಟ್ಟಿರೋಲ್ಲ, ಇದರಿಂದ ಲಾಭ ಪಡಿಯೋದಕ್ಕೆ ಯತ್ನಿಸುತ್ತೆ. ಇದರಿಂದ ಸುಖಭೋಗಗಳು ಪಡೆಯುವುದಕ್ಕೆ ಏನೇನಿದೆಯೋ ಅಂತಹ ಅಂಶಗಳನ್ನೆಲ್ಲಾ ಹುಡುಕುತ್ತಾ ಹೋಗುತ್ತೆ. ಆದ್ದರಿಂದ ನೀವು ಏನನ್ನೂ ನಿರೀಕ್ಷೆ ಮಾಡ್ಲಿಕ್ಕಾಗಲೀ ಅನ್ನೋದಕ್ಕಾಗಲೀ ಬರೋದಿಲ್ಲ, ಏನೋ ಆಗ್ತಾ ಇದೆ. ಇದು ನನ್ನ ಶಕ್ತಿಗೆ ಮೀರಿದ್ದು ಯಾವುದೋ ಒಂದು ಅಗೋಚರ ಶಕ್ತಿ ನನ್ನ ತೀರ್ಮಾನ ತಗೊಂಡಾಗ ಅದೇನಾದ್ರೂ ಆಗಬಹುದು. ಪವಾಡಕ್ಕೆ ನಾವು ಕಾಯಬೇಕಾಗಿದೆಯೇ ಹೊರತು ನಮ್ಮ ಚೈತನ್ಯದಿಂದಲೇ ಏನೂ ಆಗೋದಿಲ್ಲ, ಈಗ ಈ ಜಪಾನ್ ಜರ್ಮನಿಯಂತಹ ಧೂಳಾಗಿದ್ದ ರಾಷ್ಟ್ರಗಳು ಆ ಧೂಳಿನ ಮಧ್ಯದಲ್ಲಿ ಪುನಃ ಎದ್ದು ಜಗತ್ತಿಗೇ ಸಾಲ ಕೊಡೋ ಮಟ್ಟಕ್ಕೆ ಬಂದ್ವು. ಅಂದ್ರೆ, ನಾವು ಅದನ್ನು ನೋಡಿ ಕಲಿಯುವುದು ಬಹಳಷ್ಟಿದೆ. ನಮ್ಮಲ್ಲಿರೋ ಈ ಸಂಕುಚಿತ ಮನೋಭಾವಗಳನ್ನೆಲ್ಲಾ ಬಿಟ್ಟು "ನಿನ್ನ ನೋವು ನನ್ನ ನೋವು" "ತನ್ನಂತೆ ಬಗೆದಂದು ಕೈಲಾಸ ಬಿನ್ನಾಣವಕ್ಕು" ಅಂತ ಏನು ಸರ್ವಜ್ಞ ಹೇಳಿದ್ದಾನೆ. ಆ ರೀತಿ ಮತ್ತೊಬ್ಬನ ಸಂತೋಷದಲ್ಲಿ ನಮ್ಮ ಸಂತೋಷ ಕಾಣಬೇಕು. ಮತ್ತೊಬ್ಬನ ಸುಖದಲ್ಲಿ ಸುಖ ಕಾಣಬೇಕು. ಆ ವಿಶಾಲ ಮನೋಭಾವ ನಾವು ಬೆಳೆಸಿಕೊಳ್ಳಬೇಕು. ಇದನ್ನೆಲ್ಲಾ ಪ್ರಚಾರ ಮಾಡಬೇಕು. ಮಕ್ಕಳಲ್ಲೂ ಈ ಭಾವನೆ ಬಿತ್ತಬೇಕು. ಆ ರೀತಿ ನಾವು ಪ್ರಯತ್ನಪಟ್ಟರೆ ಬುದ್ಧಿಜೀವಿಗಳೆನಿಸಿಕೊಂಡವರು ಈ ದೇಶಾನ, ಇದು ಒಂದು ಆದರ್ಶ ರಾಷ್ಟ್ರವಾಗುವಂತೆ ಕಟ್ಟಬಹುದು. ಹಾಗಿಲ್ದೆ ರಾಜಕಾರಣಿಗಳು ಯಾವ ಒಳ್ಳೇದಕ್ಕೂ ಅವಕಾಶಮಾಡಿಕೊಡದೇ ಇರೋದೆಲ್ಲವನ್ನು ನಾಶಮಾಡ್ತಾ ಇದ್ದಾರೆ.....

**ಶಾಸ್ತ್ರಿಗಳು:** ಹೊಸ ಆಂದೋಲನ ಪ್ರಾರಂಭವಾಗಬೇಕು. ನಿಜ, ಯಾರು ಮಾಡಬೇಕು?

**ಕರೀಂಖಾನ್:** ಕಾಂಗ್ರೆಸ್‌ನೋರು 'ಹೊಸ ಆಂದೋಳನ ಮಾಡ್ತಾ ಇದ್ದ ಕಾಲದಲ್ಲಿ ಒಂದು ರೂಪಾಯಿಗೆ 16 ಸೇರು ದಪ್ಪಕ್ಕಿ, 12 ಸೇರು ಸಣ್ಣಕ್ಕಿ ಸಿಗೋದು. ಒಂದು ರೂಪಾಯಿಗೆ 30 ಸೇರು ರಾಗಿ ಅಥವಾ 30 ಸೇರು ಜೋಳ ಇತ್ತು. 16 ಸೇರು ಗೋಧಿ ಇತ್ತು. ಇನ್ನು ಜೈಲಿಗೆ ಹೋದರೆ ಅವರಿವರು ಒಂದೆರಡು ಮೂಟೆ ಅಕ್ಕಿ ಹಾಕಿಬಿಡೋರು ಮನೆಗೆ. ಜೈಲಿಗೆ ಹೋದವನ ಕುಟುಂಬಕ್ಕೆ ಒಂದು ದಾರಿಯೂ ಆಗೋದು. ಅಷ್ಟು ಸುಲಭ ಇತ್ತು. ಈಗ ಹಾಗಲ್ಲ. ಈಗ ಗಂಡ ನಾಲ್ಕು ದಿನ ಜೈಲಿಗೆ ಹೋದರೆ ಹೆಂಡತಿ ರಸ್ತೆಗಿಳಿದುಬಿಡಬೇಕಾದ ಪರಿಸ್ಥಿತಿ ಇದೆ. ಈ ಅಭಾವ, ಈ ಜನ, ಎಲ್ಲಿ ಕ್ರಾಂತಿ ಆಗುತ್ತೋ, ಎಲ್ಲಿ ಆಡಳಿತಕ್ಕೆ ವಿರುದ್ಧವಾಗಿ ಈ ಜನ ತಲೆ ಎತ್ತುತ್ತಾರೋ ಅನ್ನೋ ಕಾರಣದಿಂದ ಇವ್ರೇನು ಮಾಡಿದ್ರು ಎಲ್ಲಾ ಪದಾರ್ಥಗಳ ಬೆಲೆ ಏರಿಸಿ ಆಡಳಿತ ಹಿಡಿದವರು ಈ ಮುಗ್ಗಟ್ಟು ನಮ್ಮ ರಾಷ್ಟ್ರದಲ್ಲಿ ತಂದಿಟ್ರು. ಇನ್ನು ಚಳುವಳಿ ಸಾಧ್ಯವಿಲ್ಲ. ಅಂದೋಲನ ಕನಸಿನ ಮಾತು...

**ಶಾಸ್ತ್ರಿಗಳು:** ಇದಕ್ಕೆ ಪರಿಹಾರ?

**ಕರೀಂಖಾನ್:** ನಮ್ಮಿಂದೇನೂ ಆಗೋದಿಲ್ಲ. ಯಾವುದೋ ಒಂದು ಅಗೋಚರ ಶಕ್ತೀನೇ ಮೊರೆ ಹೋಗ್ಬೇಕು, ಅಷ್ಟೇ. ಆಮೇಲೆ, ನಮ್ಮಲ್ಲಿ ದೈವಭಕ್ತಿಯಿಲ್ಲ. ದೈವಭೀತಿ ಇಲ್ಲ. ದಯೆ ಇಲ್ಲ. ನಿರ್ದಯೀ ಜನ. ಈ ಕಾರಣದಿಂದ ಇಂಥವರು. ಆಮೇಲೆ ನಾಲ್ಕು ಕಾಸಿಗೋಸ್ಕರ ಏನ್ಮಾಡೋದಕ್ಕೂ ಸಿದ್ಧ. ಇಂಥಾ ಜನಗಳಿಂದ ನೀವು ಒಂದು ರಾಷ್ಟ್ರ ಉಜ್ವಲವಾಗಬೇಕು ಅಂತ ಬಯಸೋದಾದ್ರೂ ಹೇಗೆ ಸಾಧ್ಯ? ಹಿಂದಿನವರಲ್ಲಿ ಚೈತನ್ಯ ಇತ್ತು. ಇವ್ರಲ್ಲಿ ಅದೂ ಇಲ್ಲ. ಅಸಮರ್ಥರೇ ಎಲ್ಲ.

## ಮಾಸ್ತಿಯವರ ಹಿರಿಮೆ

**ಶಾಸ್ತ್ರಿಗಳು:** ಮಾಸ್ತಿಯವರು ಒಮ್ಮೆ ನಿಮ್ಮಲ್ಲಿ ಬಂದಿದ್ರಂತೆ....

**ಕರೀಂಖಾನ್:** ಹೌದು. ಯಾರೋ ಹೇಳಿದ್ರಂತೆ ಕರೀಂಖಾನ್ ತೊಂದರೇಲಿದ್ದಾನೆ ಅಂತ. ಅವರು ಮಹಡಿ ಮೆಟ್ಟಿಲುಗಳನ್ನು ಹತ್ತಿ, ನನ್ನ ರೂಮಿಗೆ ಬಂದು, ಕೂತು, ಹೇಳಿದ್ರು. "ಹೇಗೆ ನಡೀತಾ ಇದೆ?" ಅಂತ. ನಾನು "ದೇವ್ರು ನಡಸ್ತಾ ಇದ್ದಾರೆ" ಅಂದೆ. "ಅವ್ನೇ ನಡಸೋದು. ನಾನು ಹೇಗೂ ಬಂದಿದ್ದೇನೆ, ಬ್ಯಾಂಕಿನಲ್ಲಿ ಸ್ವಲ್ಪ ಹಣ ಇಟ್ಕೊಂಡಿದ್ದೇನೆ. ಅದ್ರಲ್ಲಿ ಒಂದು ಸ್ವಲ್ಪ ಭಾಗ ನಿಮಗೆ ಕೊಡೋಣ ಅಂತ ಹೇಳಿ ಬಂದಿದ್ದೇನೆ" ಅಂದ್ರು. ನಾನು "ಬೇಡ" ಅಂದೆ. ಅವರು ಗಾಬರಿಯಾಗ್ಬಿಟ್ರು. "ಹಣ ಕೊಡ್ತೀನಿ ಅಂದ್ರೆ ಯಾರಾದ್ರೂ ಬೇಡ ಅಂತಾರೆಯೇ? ನೀವೇನೂ ಕೇಳ್ಲಿಲ್ಲವಲ್ಲ? ಆತ್ಮಪೂರ್ವಕವಾಗಿ ನಾನು ಕೊಡ್ತಾ ಇದ್ದೇನೆ. ಈ ವೃದ್ಧಾಪ್ಯದಲ್ಲಿ ತೊಂದರೆ ಅನುಭವಿಸ್ಬೇಡಿ. ನಾನು ಕೊಟ್ಟಿದ್ದನ್ನು ಬ್ಯಾಂಕಿನಲ್ಲಿ ಇಟ್ಕೊಳ್ಳಿ. ನಿಮಗೆ ಕಷ್ಟವಾದಾಗ ಉಪಯೋಗಿಸಿಕೊಳ್ಳಿ" ಅಂತ ಹೇಳಿದ್ರು. ನಾನೆಂದೆ, "ನೀವು ಅನೇಕರಿಗೆ ಸಹಾಯ ಮಾಡಿದ್ದೀರ, ನನಗೆ ಗೊತ್ತಿದೆ. ನನಗೆ ಅಗತ್ಯ ಇದ್ದಾಗ ಕೇಳ್ತೀನಿ" ಅಂತ. ಹಾಗೇ ನನಗೊಂದಿಪ್ಪತ್ತು ಸಲ ಒತ್ತಾಯ ಮಾಡಿದ್ರು, ನಾನು ತಗೋಳ್ಳಿಲ್ಲ. ಆದರೆ, ಯಾಕೆ ಅವರನ್ನ ನೆನೀತೇನೆ ಅಂದ್ರೆ, ಅವರ ವಿಶಾಲ ಹೃದಯ. ಕಷ್ಟದಲ್ಲಿದ್ದರೆ ಇದ್ಕೊಳ್ಳಿ, ನನಗೇನು ಅಂತ ಅಂದುಕೊಳ್ಳದೆ ಸಹಾಯಕ್ಕೆ ಮುಂದಾದ್ರು, ಜೊತೆಗಾರರಲ್ಲ, ಸ್ವಜಾತಿಯವರಲ್ಲ, ಮತ್ತೊಂದಲ್ಲ, ಆದ್ರೂ ಅವರು ಮರುಗಿದ್ರು. ಏನೋ ಪಾಪ ಕಷ್ಟದಲ್ಲಿದ್ದಾನೆ. ಸಹಾಯ ಮಾಡಬೇಕು ಅನ್ನೋ ಮರುಕ ಹುಟ್ಟಬೇಕಾದರೆ ಅದು ಸಾರ್ವಭೌಮಿಕ ಹೃದಯ. ಅದು ಅಷ್ಟು ವಿಶಾಲವಾದದ್ದು, ಜಾತ್ಯತೀತವಾ

ದದ್ದು. ಇಲ್ದೆ ಇದ್ರೆ ಇಲ್ಲಿಗ್ಯಾಕೆ ಬರ್ತಾರೆ ಹೇಳಿ? ಹಿಂದೂ-ಮುಸ್ಲಿಂರಿಗೆ ದ್ವೇಷ ಹರಡಿರುವ ಈ ದಿನಗಳಲ್ಲಿ ಮುಸ್ಲಿಂನ ನೋವು ನಲಿವು, "ನಾನು ಇಟ್ಕೊಂಡಿದ್ದೀನಿ, ನಿಮಗೆ ಕೊಡ್ತಾ ಇದ್ದೀನಿ. ಬ್ಯಾಂಕ್‌ನಲ್ಲಿ ಇಟ್ಕೊಳ್ಳಿ" ಅಂತ ಹೇಳೋ ಹೃದಯ ಇನ್ನೆಲ್ಲಿ ಸಿಕ್ಕುತ್ತೆ. ಅಲ್ವೆ. ಅದು ಅಷ್ಟು ಸಾರ್ವಭೌಮಿಕವಾದದ್ದು, ವಿಶಾಲವಾದದ್ದು.

**ಶಾಸ್ತ್ರಿಗಳು:** ಅದು ಅವರ ಹಿರಿಮೆ. ಮಾಸ್ತಿತನ ಅದು. ಅದೂ ಅಲ್ದೆ ನೀವು ಬೇರೆ ಜನ ಅನ್ನೋ ಹಾಗೆ ನಡೀಲಿಲ್ಲ....

**ಕರೀಂಖಾನ್:** ಸಾಯೋವರೆಗೂ ಹಾಗೆ ನಡೆಯೋದಿಲ್ಲ.....

**ಶಾಸ್ತ್ರಿಗಳು:** ಜಾತ್ಯತೀತತೆ ಅನ್ನೋದು ಮೈಗೂಡಿಬಿಟ್ಟಿದೆ ನಿಮಗೆ.....

**ಕರೀಂಖಾನ್:** ಎಷ್ಟೋ ಜನ ಬ್ರಾಹ್ಮಣ ಹುಡುಗರು ನನ್ನ ಶಿಷ್ಯರಿದ್ದಾರೆ. ಅವ್ರಿಗೆ ನಾನು ಹಾಡುಗಳನ್ನು ಹೇಗೆ ಬರೀಬೇಕು. ಸಿನಿಮಾಕ್ಕೆ ಹೇಗೆ ಬರೀಬೇಕು. ಸಾಹಿತ್ಯ ಹೇಗೆ ಅಭ್ಯಾಸ ಮಾಡಬೇಕು. ಅನ್ನೋದನ್ನ ಹೇಳಿಕೊಟ್ಟಿದ್ದೇನೆ. ಒಂದಿಬ್ಬರಿಂದ ಸಿನಿಮಾಕ್ಕೂ ಹಾಡುಗಳನ್ನು ಬರೆಸಿದ್ದೇನೆ. ನನ್ನಹತ್ರ ಜಾತಿ ಸುಳಿಯೋದಿಲ್ಲ.

**ಶಾಸ್ತ್ರಿಗಳು:** ಸಿನಿಮಾಕ್ಕೆ ಬರ್ಕೊಟ್ರಲ್ಲಾ ಆಗ್ಲಾದ್ರೂ ಹಣದ ಕೊರತೆ ನೀಗಲಿಲ್ಲವೇ?

**ಕರೀಂಖಾನ್:** ಆವಾಗ ಅಷ್ಟಾಗಿರಲಿಲ್ಲ. ಹೆಚ್ಚು ಹಣಾನೂ ಸಿಕ್ತಾ ಇರ್ಲಿಲ್ಲ. ಅಲ್ಪ ಸ್ವಲ್ಪ ಸಿಗೋದು. ಅದ್ರಲ್ಲೂ ಅನೇಕರು ನನ್ನ ಹಾಗೆ ಕಷ್ಟದಲ್ಲಿರೋರು, ಅವಕಾಶ ಇಲ್ದೆ ತೊಂದರೆ ಪಡ್ತಾ ಇದ್ದೋರು ಇದ್ರು. ಅವರ ಬಗ್ಗೆ ಮರುಕದಿಂದ ಈ ಸಂಪಾದನೇನೆಲ್ಲವನ್ನು ಅವ್ರ ಜೊತೆ ಹಂಚಿಕೊಳ್ತಾ ಇದ್ದೆ. ಆದ್ರಿಂದ, ಅದನ್ನ ಅನುಭವಿಸಲಿಕ್ಕಾಗಲಿಲ್ಲ. ನಂತರ ರಾಜಕೀಯ ಬಂದು ನೆಲೆ ತಪ್ಪಿತು. ಸಿನಿಮಾದಲ್ಲೂ ರಾಜಕೀಯ ಪ್ರವೇಶಿಸಿ ಹೊಲಸೆದ್ದು ಹೋಯ್ತು...

**ಶಾಸ್ತ್ರಿಗಳು:** ಜೀವನದುದ್ದಕ್ಕೂ ನೀವು ಯಾವುದೇ ರಂಗದಲ್ಲಿ ಪ್ರವೇಶ ಮಾಡ್ಲಿ, ಶ್ರಮಿಸಿರ್ಲಿ, ದುಡಿದಿರ್ಲಿ, ಅಲ್ಲೆಲ್ಲಾ ಸಮಷ್ಟಿಭಾವವೇ ಕಂಡು ಬಂತಲ್ವೇ?

**ಕರೀಂಖಾನ್:** ಸಮಷ್ಟಿಭಾವ ಬೇಕು. ವ್ಯಷ್ಟಿಯಿಂದ ಏನೇನೂ ಪ್ರಯೋಜನವಿಲ್ಲ. ದೇವ್ರಿಗೆ ವಿರುದ್ಧ ಅದು. ಮುಖ್ಯವಾದ ವಿಚಾರ ಹೇಳೋದಾದ್ರೆ, ಪಾಕಿಸ್ತಾನ ಪಡೆದದ್ದು. ಭಾರತ ಎರಡಾಗಿ ಪಾಕಿಸ್ತಾನ ರಚನೆಯಾಯ್ತು. ಅವ್ರು ಹೇಳ್ಕೊಂಡಿದ್ದೇನೆಂದರೆ, "ನಮ್ಮ ಭಾಷೆ, ನಮ್ಮ ಧರ್ಮ, ನಮ್ಮ ಜಾತಿ ಕಾಪಾಡಿಕೊಳ್ಳೋದಿಕ್ಕೆ ನಾವು ಪಾಕಿಸ್ತಾನ ಕೇಳ್ತಾ ಇದ್ದೀವಿ" ಅಂತ. ಪಾಕಿಸ್ತಾನ ತಕೊಂಡ ತಕ್ಷಣ ಉರ್ದು ಭಾಷೆ ಅಗತ್ಯ ಇಲ್ಲ ಅಂತ ಪೂರ್ವ ಪಾಕಿಸ್ತಾನದವ್ರು ವಿರುದ್ಧವಾದ್ರು. ಅರ್ಧ ಭಾಗ ಪಾಕಿಸ್ತಾನಕ್ಕೆ ಉರ್ದು ಭಾಷೆ ಬೇಡವಾಯ್ತು. ನಾವು ಬಂಗಾಳಿಗಳು ಅಂತ ಪ್ರಾಂತೀಯ ಭೇದ ಬಂತು. ಮೊದಲನೇ ಪ್ರಧಾನಿಯನ್ನು ಬಹಿರಂಗ ಸಭೆಯಲ್ಲಿ ಕೊಂದು ಹಾಕಿದ್ರು. ಹೀಗೆ, ಆ ಹೊತ್ತು ಅವರಿಗೆ ಅಶಾಂತಿ ಆ ಕಾಲಕ್ಕೆ ಹೋಗಿದ್ದು ಈವರೆಗೂ ತಿರುಗಿ ಬಂದಿಲ್ಲ. ಅವ್ರು ಪ್ರತ್ಯೇಕವಾಗಿದ್ದರಿಂದ ಉದ್ಧಾರವೇನಾದ್ರೂ ಆದ್ರೇನು? ಭಗವಂತ ಸಂಕುಚಿತ ಮನೋಭಾವವನ್ನು ಯಾವ ಕಾರಣದಿಂದಲೂ ಸಹಿಸೋಲ್ಲ. ನಿಮಗೆ ಒಂದು ಮಾತು ಹೇಳೋದಾದ್ರೆ ಎರಡು ಮಹಾಯುದ್ಧಗಳು ನಡೆದ್ವು. ಯಾರಿಗೆ ನಡೀತು? ಬ್ರಿಟಿಷರಿಗೆ, ಜರ್ಮನರಿಗೆ ಪ್ರಾರಂಭ ಆಯ್ತು. ಬ್ರಿಟಿಷರ ಚಕ್ರವರ್ತಿ ಐದನೇ ಜಾರ್ಜ್ ವಿಕ್ಟೋರಿಯಾ ರಾಣಿಯ ಮೊಮ್ಮಗ, ಜರ್ಮನಿಯ ಚಕ್ರವರ್ತಿ ಕೈಸರ್

ವಿಕ್ಟೋರಿಯಾಳ ಅಳಿಯ. ಇಷ್ಟು ನಿಕಟವಾದ ಸಂಬಂಧದವರು ಎಷ್ಟರ ಮಟ್ಟಿಗೆ ಹೋರಾಡಿದ್ರು ಅಂದ್ರೆ ಸಂಪೂರ್ಣ ನಾಶವಾಗುವವರೆಗೂ ಹೋಯ್ತು. ಅದ್ಕೇ ಹೇಳೋದು, ವ್ಯಷ್ಟಿಗಿಂತ ಸಮಷ್ಟಿಭಾವ ಇದ್ರೆ ಉದ್ಧಾರ ಸಾಧ್ಯ ಅಂತ.

**ಶಾಸ್ತ್ರಿಗಳು:** ಒಬ್ಬ ಸಾಹಿತಿಯಾಗಿ ಏನೇನು ರಚನೆ ಮಾಡಿದ್ದೀರಿ?

**ಕರೀಂಖಾನ್:** ನಾನು ಕವನಗಳನ್ನು ರಚನೆ ಮಾಡೋದಕ್ಕಿಂತಾನೂ ಹಾಡುಗಳ ಕಡೆಗೆ ಹೆಚ್ಚು ಗಮನ ಕೊಟ್ಟೆ. ನನ್ನ ಹಾಡುಗಳು ಸಾಧ್ಯವಾದ ಮಟ್ಟಿಗೆ ಸಂಗೀತಮಯವಾದ ಶಬ್ದಗಳಿಂದ ಕೂಡಿರಬೇಕು. ಕರ್ಣ ಮನೋಹರವಾಗಿರಬೇಕು, ಇಂಪಾಗಿರಬೇಕು ಅನ್ನೋ ದೃಷ್ಟಿಯಿಂದ ರಚನೆ ಮಾಡ್ದೆ. ರಾಘವೇಂದ್ರ ಸ್ವಾಮಿಗಳ ಮೇಲೆ ಬರ್ದಿರೋ ಹಾಡಿನಲ್ಲಿ:

**ಭುವನ ಫಲಕದ ಮೇಲೆ ಮೂಡಿದ**
**ಶರದ್ ಚಂದ್ರ ತುಷಾರ ಬೃಂದಾವನ**
**ದುಃಖ ಸಂಕಟ ಹರಣ ಗುರುವಿನ**
**ವರದಾನುಸದನ ಬೃಂದಾವನ.**
**ಬೃಂದಾವನದ ಬಾನುಲಿಯಿಂದ**
**ಮಧುರ ಸುನಾದ ಬರುತಲಿದೆ**
**ಬದುಕಿನ ಬವಣೆ ಕಳೆಯುವೆ ಎನುವ**
**ಗುರುವಿನ ವಚನ ಮೊಳಗುತಿದೆ.**

ಆಮೇಲೆ "ನಿಂದಾಸ್ತುತಿ" ಅಂತ ಇರುತ್ತೆ ನೋಡಿ. ನಮಗೆ ಬೇಕಾದವರಿಗೆ ನಾವು ಬೈಯ್ದು ಅವ್ರನ್ನ ಸ್ತೋತ್ರ ಮಾಡೋದು. ಹಾಗೆ ರಾಘವೇಂದ್ರ ಸ್ವಾಮೀಜಿಯ ಮೇಲೇನೆ ಬರೆದೆ:

**ಕಷ್ಟಗಳನ್ನು ಕದಿಯುವ ಕಳ್ಳ ಬರ್‍ತಾನಂತೆ**
**ಜೊತೆಯಲಿ ಸುಖದ ಸುಗ್ಗಿಯನ್ನು ತರ್‍ತಾನಂತೆ**
**ನಮ್ಮ ಕಷ್ಟ ನಮಗೇ ಇರಲಿ ಇವನಿಗೆ ಏನಂತೆ?**
**ಕಷ್ಟವ ಕಂಡರೆ ಹಸಿವು ಎಂದು ನುಂಗುತ್ತಾನಂತೆ.**

ಅನ್ನೋ ರೀತಿಯಲ್ಲಿ ನಿಂದಾಸ್ತುತಿ ಮಾಡ್ಕೊಂಡು ಅದೊಂದು ಹಾಡು ಬರ್ದಿದ್ದೀನಿ. ಹಾಗೇ ವೆಂಕಟೇಶ್ವರನ ಮೇಲೂ ಕೂಡ:

**ಮಾನವೇನಪಮಾನವೇನು**
**ಶ್ರೀನಿವಾಸ ನಿನ್ನ ಚರಣ**
**ನಂಬಿ ಮೊರೆಯುವ ದುಂಬಿ ನಾನು ||ಪ||**
**ನೀನು ನುಡಿಸಿದಂತೆ ನುಡಿಯುವ**
**ನಿನ್ನ ವೀಣೆಯ ಸ್ವರವು ನಾನು**
**ನೀನು ಆಡಿಸಿದಂತೆ ಆಡುವ**
**ನಿನ್ನ ಸೂತ್ರದ ಬೊಂಬೆ ನಾನು ||1||**

ಹಾಗೇ ಮಂಜುನಾಥ ಸ್ವಾಮಿಯ ಮೇಲೇನೂ ಹಲವಾರು ಹಾಡು ಬರೆದಿದ್ದೀನಿ:

## ಜಾನಪದ ದಿಗ್ಗಜರ ಸಂವಾದ

ಶ್ರೀಮದ್ಧರ್ಮಸ್ಥಳ ನಿವಾಸಂ
ಸುಹಾಸಂ ಸುಭಾಸಂ ವರಚಂದ್ರಾವತಂಸಂ
ಸತ್ಯಂ ಶಿವಂ ಸುಂದರಂ ದಿವ್ಯತೇಜಂ
ಓಂಕಾರ ನಾದ ಸ್ವರೂಪಂ
ಓಂಕಾರ ನಾದಸ್ವರೂಪಂ
ವಂದೇ ಸದಾನಂದಂ ವರ ಮಂಜುನಾಥಂ
ಮುನಿವಂದ್ಯಂ ಸುರವಂದ್ಯಂ ಕರುಣಾವತಣಂ
ಅಸುರಾರಿ ಮದನಾರಿ ಭವರೂಪಹರಣಂ

ಆಮೇಲೆ, ನಾರಾಯಣನ ಮೇಲೂ ಬರ್ದಿದ್ದೀನಿ:

ಹೇಪುರಾತನ ಪರಮಪಾವನ
ಕಲುಷದಹನ ದಯಾಘನ
ಪಾಪಪಾಶನ ಪುಣ್ಯವರ್ಧನ
ಸ್ವಾಮಿ ಸನಾತನ ನಾರಾಯಣ

ಆಮೇಲೆ ಕೊಲ್ಲೂರು ಮೂಕಾಂಬಿಕೆಯ ಮೇಲೆ ಬರ್ದಿದ್ದೀನಿ:

ಪಾಹಿ ಶ್ರೀಸೌಪರ್ಣಿಕಾ ನದಿಹಂಸಿಕಾ
ಕೊಲ್ಲೂರು ಮೂಕಾಂಬಿಕಾ
ನಿನ್ನ ಚರಣದಿ ಮೊಳಗಲಿ
ಗಾನಮಧುರ ಸಚಂದ್ರಿಕಾ
ಮಧುರಗಾನ ರಸತಾನಧಾರ
ತಾನ ತರಂಗಿಣಿ ವಾಹನವೇರಿ
ನಾದೋಲ್ಲಾಸದ ಮೋದವ ತೋರಿ
ರಾಗಿರಾಗಿಣೀ ವೈಭವಸಾರಿ
ಬೆಳಗಿದೆ ನಿರುಪಮ ಪದಸಂಚಾರ
ಮಧುರಗಾನ ರಸತಾನ ಧಾರ

ಇನ್ನು ಚಲನಚಿತ್ರದಲ್ಲಿ "ನಟವರ ಗಂಗಾಧರ....." ತುಂಬ ಪ್ರಸಿದ್ಧವಾಯ್ತು. ಹಾಗೇ ಗವಿರಂಗಾಪುರದ ರಂಗನಾಥನ ಮೇಲೆ ಬರೆದೆ:

ಶ್ರೀನಾಥ ಜಗನ್ನಾಥ
ಭೂತ ಭವ್ಯ ಭವನ್ನಾಥ
ಮಹನ್ನಾಥ ಬೃಹನ್ನಾಥ
ಪಾಹಿಶ್ರೀಗವಿರಂಗಪುರಾಧಿನಾಥ
ದೀನಜನ ಮಂದಾರ ದಾತಾ
ಮಾನಿತಾ ಗವಿರಂಗನಾಥ
ಪರಮ ಪಾವನ ನಾಮಗೀತ
ಬೆಳಗಲಿ ಕರುಣಾ ಪ್ರಭಾತ

ಹೀಗೆ ವರ್ಣನಾವೈಖರಿಯಿಂದಾನು ಕೂಡ ಪ್ರೇಮಗೀತೆಗಳನ್ನು ಬರ್ದಿದ್ದೀನಿ:

**ಮನಮೋಹಿನಿ ವನರಾಣಿನೀ**
**ಮಧುಚಂದ್ರ ತೇಜ ಪ್ರಭಾಮಣೀ**
**ರವಿಬಾಲಮೋದ ವಿನೋದವೆ**
**ರತಿಯಾದ ರಮ್ಯ ಸ್ವರೂಪಿಣಿ**
**ಸುಮವೆಂದು ನೋಡಿತು ಈ ಮನ**
**ಅದೆ ನಿನ್ನ ಕೋಮಲ ದರ್ಶನ**
**ಶರನೀಲ ನೈದಿಲೆ ಶೋಭನ**
**ತನುಪದ್ಮರಾಗ ವಿಭೂಷಣ**
**ನಿಜ ನೀನೇ ಗೀತೆಯ ನಂದನ**
**ಕವಿಕಾವ್ಯ ನಿನ್ನ ಪ್ರಸಾದನ.**

ಹೀಗೆ ಹಲಕೆಲವು ರಚನೆಗಳನ್ನು ಮಾಡಿದ್ದೀನಿ.

**ಶಾಸ್ತ್ರಿಗಳು:** ನಿಮ್ಮ ಹಾಡುಗಳ ಪೈಕಿ ಅತ್ಯಂತ ಜನಪ್ರಿಯತೆ ಗಳಿಸಿರುವುದು "ನಟವರ ಗಂಗಾಧರ....." ಇದನ್ನು ಕರೀಂಖಾನ್ ರಚಿಸಿದ್ದು ಅಂತ ಹೇಳ್ದಾಗ ಜನ ಆಶ್ಚರ್ಯಪಡ್ತಾರೆ. ಏನು ಅಂದ್ರೆ ನೀವು ಹಿಂದೂ ಅಲ್ಲ ಅನ್ನೋ ಒಂದು ಕಾರಣದಿಂದ.....

**ಕರೀಂಖಾನ್:** ನಾನು ಜಾತೀಯತೆ ಅನುಸರಿಸಿದ್ರೆ "ನುಡಿಮನ ಶಿವಗುಣ" ಹೇಗೆ ಬರ್ತಿತ್ತು? "ಜಯಗೌರಿ ಜಗದೀಶ್ವರಿ....." ಇವನ್ನೆಲ್ಲಾ ಹೇಗೆ ಬರೀಬೇಕಿತ್ತು? ನಾನು ಶುದ್ಧ ಭಾರತೀಯ. ಭಾರತದ ಪ್ರತಿಯೊಬ್ಬನೂ ನನ್ನ ಸಹೋದರ. ಅವನು ಯಾವ ಜನಾಂಗದಲ್ಲೇ ಇರ್ಲಿ ಅವನು ನನ್ನ ಸಹೋದರ. ನೊಂದು ಬೆಂದವರ್‍ಯಾರಿದ್ರೂ ಅವನ್ನ ಕಂಡಾಗ ಕಣ್ಣೀರು ತುಂಬಿ ಬರುತ್ತೆ. ಆದ್ರಿಂದ ಜಾತೀಯತೆಯನ್ನು ನಾನು ವಿರೋಧಿಸ್ತೀನಿ. ನನ್ನ ಗುರುಗಳು ನಾರಾಯಣ ಶಾಸ್ತ್ರಿಗಳು. ಅಪಾರ ಮಮತೆ ಇಟ್ಟಿದ್ರು ನನ್ಮೇಲೆ. ಆ ಗುರುವಿನಿಂದ ನಾನು ವಿದ್ಯೆ ಪಡೆದಿರುವಾಗ ಆ ವಿದ್ಯೆಯಿಂದ ಈ ಜಾತೀಯತೆ ಪ್ರೇರೇಪಿಸೋದು ಮಹಾ ಪಾಪಕಾರ್ಯ ಆಗುತ್ತೆ.

**ಶಾಸ್ತ್ರಿಗಳು:** ನೀವು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾದ ಮೇಲೆ ಕೈಗೊಂಡ ಕಾರ್ಯಕ್ರಮಗಳ ಬಗ್ಗೆ ಹೇಳ್ತೀರಾ?

**ಕರೀಂಖಾನ್:** ನಾನು ಈ ಅಕಾಡೆಮಿ ಅಧ್ಯಕ್ಷನಾದ ಮೇಲೆ, ಈ ಪುರಾತನ ಕಲೆಗಳು ಕೈಬಿಟ್ಟು ಹೋಗ್ತಾ ಇವೆ, ಜನ ಇದರಿಂದ ದೂರ ಆಗ್ತಾ ಇದ್ದಾರೆ, ತಾತ್ಸಾರ ಭಾವ ತಾಳಿದ್ದಾರೆ, ಈ ಕಾರಣದಿಂದ ಆ ಪುರಾತನ ಕಲೆಗಳನ್ನು ಭದ್ರವಾಗಿ ಇಡಬೇಕು ಅನ್ನೋ ದೃಷ್ಟಿಯಿಂದ ವಿಡಿಯೋ ಚಿತ್ರೀಕರಣ ಕೈಗೊಂಡೆ. ಸುಮಾರು 240 ಗಂಟೆಗಳ ಕಾಲ ಕೂತು ನೋಡುವಷ್ಟು ಈ ಕಲೆಗಳನ್ನು ವಿಡಿಯೋ ರೆಕಾರ್ಡಿಂಗ್ ಮಾಡಿಸ್ದೆ. ಆಮೇಲೆ, ಈ ಜನಾಂಗಗಳು, ಸಹ್ಯಾದ್ರಿ ಶ್ರೇಣಿಯಲ್ಲಿ ಇರುವಂಥಾ ಜನಾಂಗಗಳನ್ನೆಲ್ಲಾ ಭೇಟಿ ಮಾಡಿ ಅವುಗಳ ಬಗ್ಗೆ ಚಿತ್ರೀಕರಣ ಮಾಡಿಸಿದೆ. ಅವರ ಆಚಾರ, ವಿಚಾರ, ಅವ್ರು ಬಾಳ್ತಾ ಇರೋ ರೀತಿ, ಹಬ್ಬಗಳು ಇವನ್ನೆಲ್ಲಾ ಚಿತ್ರೀಕರಿಸಿದೆ. ಅದರಲ್ಲಿ ಮುಂದಿನವರು ಈ ಬಗ್ಗೆ ಗಮನ ಕೊಟ್ರೆ ಒಳ್ಳೇದು. ಇಲ್ದಿದ್ರೆ ಏನಾಗ್ಬೇಕೋ ಆಗೋಲ್ಲ ಅನ್ನೋದನ್ನ ತಿಳಿಸಿದ್ದೀನಿ. ಜಾನಪದ ಕ್ಷೇತ್ರ ಮೊದಲಿನಿಂದಾನೂ ನನ್ನ ನೆಚ್ಚಿನ ಕ್ಷೇತ್ರ. ಆದರಲ್ಲಿ ದುಡಿಯೋದಕ್ಕೆ ಅವಕಾಶ ಸಿಕ್ಕಿತು. ಇನ್ನು ಹಣಕಾಸಿನ ದೃಷ್ಟಿಯಿಂದ ಅಂದ್ರೆ ಆರ್ಥಿಕವಾಗಿ

# ಜಾನಪದ ದಿಗ್ಗಜರ ಸಂವಾದ

ನನಗೇನೂ ಸಹಾಯವಾಗಿಲ್ಲ. ಅದೂವೇ, 'ಋಣಾನುಬಂಧ ರೂಪೇಣ ಪಶುಪತ್ನಿ ಸುತಾಲಯ' ಅಂತ ಪೂರ್ವಿಕರು ಹೇಳಿದಂತೆ ಋಣಾನುಬಂಧಾನೂ ಇರ್ಬೇಕು. ಅದಿಲ್ದೆ ಇದ್ರೆ ಸುಯೋಗ ಪ್ರಾಪ್ತವಾಗಲ್ಲ.

**ಶಾಸ್ತ್ರಿಗಳು:** ನಿಮ್ಮನ್ನು ಗುರ್ತಿಸಿ ಅನೇಕರು ಸನ್ಮಾನಗಳನ್ನು ಮಾಡಿದ್ದಾರೆ. ಪ್ರಶಸ್ತಿ ಕೊಟ್ಟಿದ್ದಾರೆ. ಅವುಗಳ ಬಗ್ಗೆ.....

**ಕರೀಂಖಾನ್:** ಎಲ್ಲಾ ಅಕಾಡೆಮಿಯವರೂ ಸೇರಿ ಡಾ. ಜಿ.ಎಸ್. ಶಿವರುದ್ರಪ್ಪನವರ ಮುಖಾಂತರ "ಜಾನಪದ ಜಂಗಮ" ಅಂತ ಬಿರುದು ಕೊಟ್ರು. ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಬಂತು. ರಾಜ್ಯಪ್ರಶಸ್ತಿ ಬಂದಿದೆ. ಕೆಲವು ಸಂಘ ಸಂಸ್ಥೆಗಳು ಸಾಹಿತ್ಯ ಭೂಷಣ, ಅದೂ ಇದೂ ಅಂತ ಬಿರುದುಗಳನ್ನು ಕೊಟ್ಟಿವೆ. ಏನೋ ಎಲ್ಲಾ ಭಗವಂತನ ಅನುಗ್ರಹ. ಅವ್ನ ನೀಡಿದ್ದು, ನಾವು ಕೈ ಒಡ್ಡಿದಾಗ ಅದರಲ್ಲಿ ಎಷ್ಟು ಬಿತ್ತೋ ಅಷ್ಟು ನಮ್ಮ ಪಾಲಿನದು. ದೇವರ ಸುಪ್ರಸನ್ನತೆ. ನನ್ನ ಬಯಕೆ ಏನು ಅಂದ್ರೆ, ಇದು ಮಹಾನ್ ರಾಷ್ಟ್ರ. ಇಲ್ಲಿ ತ್ಯಾಗಿಗಳು, ಬಲಿದಾನಗಳು ಎಲ್ಲ ತುಂಬಿ ತುಳುಕ್ತಾ ಇದ್ದ ರಾಷ್ಟ್ರ ಇದು. ಇಲ್ಲಿ ಸುಖ ಸಂತೋಷ ನೆಲೆಗೊಳ್ಳಬೇಕು. ಸದಾ ಶಾಂತಿ ಇರಬೇಕು. ಭಗವಂತನ ಅನುಗ್ರಹ ಇದಕ್ಕಾಗಿ ಪ್ರತ್ಯೇಕವಾಗಿ ಇರ್ಬೇಕು. ಯಾವ ಕಾರಣಕ್ಕೂ ಇದು ಆದರ್ಶವಾಗಬೇಕು. ಈಗಲೂ ಇದೆ. ಇನ್ನೂ ಹೆಚ್ಚು ಆದರ್ಶವಾಗಿರಬೇಕು. ನಮ್ಮ ಕಲ್ಯಾಣಗುಣಗಳು ಅನುಕರಣಯೋಗ್ಯವಾಗಬೇಕು. ಬದುಕಿದರೆ ಮಾನವನಾಗಿ, ನೀತಿ ನಿಯಮದಂತೆ ನಡೆದ್ರೆ, ಭಾರತೀಯರಂತೆ ಇರಬೇಕು ಅನ್ನೋ ರೀತಿ. ಆಮೇಲೆ ವಿವೇಕಾನಂದರಂತಹ ಪುತ್ರರಾಗಬೇಕು. ವಿವೇಕಾನಂದರು ವಿದೇಶಕ್ಕೆ ಹೋಗೋ ಮೊದಲು ಬರೆದ ಗ್ರಂಥಗಳಲ್ಲಿ ಅದೇ ಆತ್ಮ ಪರಮಾತ್ಮ ಅನಾತ್ಮ ಮೋಕ್ಷ ಅದೂ ಇದೂ ಅಂತ ಇವೆ. ಆದರೆ ಅವರು ವಿದೇಶ ಪ್ರವಾಸದಿಂದ ಬಂದ ನಂತರ ಅವರ ಗ್ರಂಥಗಳ ರೀತೀನೇ ಬೇರೇಯಾಯ್ತು. ಹೆಚ್ಚು ಸಾಮಾಜಿಕ ದೃಷ್ಟಿ ಬಂದೇ ಅಲ್ಲ ಆ ದೇಶಗಳು ಸುಖ ಸಂತೋಷದಿಂದ ಬಾಳ್ತಾ ಇರೋದನ್ನ ನೋಡಿ ನಮ್ಮ ದೇಶದ ಬಡತನ, ನಮ್ಮ ಜನಜೀವನ ನೋಡಿ ಬಹಳ ದುಃಖಪಟ್ಟಿದ್ದಾರೆ. ಅವ್ರ ಸ್ವಭಾವ ಹೇಗಿತ್ತು ಅಂದ್ರೆ ನಮ್ಮ ದೇಶದ "ಒಂದು ನಾಯಿ ಹಸಿದಿರೋವರೆಗೂ ನನ್ನ ಆತ್ಮಕ್ಕೆ ತೃಪ್ತಿ ಇಲ್ಲ." ಇಂತಹ ಮಾತನ್ನು ಆಡಿದವ್ರು. ಇನ್ನು ಜನಗಳ ಬಗ್ಗೆ ಅವರ ನಿಲುವು, ಅದಕ್ಕೋಸ್ಕರ ಮಾತೃದೇವೋಭವ, ಪಿತೃದೇವೋಭವದ ಜೊತೆಗೆ ಹೊಸದಾಗಿ ಒಂದನ್ನು ಸೇರಿಸಬೇಕು, "ದರಿದ್ರ ದೇವೋಭವ" ದಾರಿದ್ರ್ಯ ನಿವಾರಣೆ ಆಗಬೇಕು ಅಂತ ಬಯಸಿದ್ರು. ಅವರ ಬಯಕೆ ಪೂರ್ಣ ಮಾಡಲಿಕ್ಕೆ ಸಾಧ್ಯವಿಲ್ಲವೇ? ಅಂದ್ರೆ, ಆ ಹೃದಯ ಬೇಕು. ಅವ್ರು ಉಪದೇಶ ನೀಡಿದ್ರೇ ಹೊರತು ತಮ್ಮ ಹೃದಯ ನೀಡಲಿಲ್ಲ. ಆ ಹೃದಯ ನಮಗೆ ನೀಡಿದ್ದಿದ್ರೆ ನಾವು ಅವರಂತೆಯೇ ಆಗಬಹುದಿತ್ತೇನೋ?....

**ಶಾಸ್ತ್ರಿಗಳು:** ನಮಗೆ ತಗೊಳ್ಳೋವಷ್ಟು ಅರ್ಹತೆ ಬೇಕಲ್ವೇ? ಸಂಸ್ಕಾರ ಇರಬೇಕಲ್ವೇ?

**ಕರೀಂಖಾನ್:** ಇದ್ರಲ್ಲಿ ಯಹೂದ್ಯ ಗುರುಗಳು ಮೋಸೆಸ್ ಮೂಸಾ ಅಂತ, ಅವ್ರಿಗೆ ಭಗವಂತನ ಸಾನ್ನಿಧ್ಯದವರೆಗೆ ಹೋಗಲು ಅವಕಾಶವಿತ್ತು. ಭಗವಂತನಿಗೆ ಅವರು, "ಪರಮಾತ್ಮ ನಿನ್ನ ರೂಪವನ್ನು ನಾನು ನೋಡಬೇಕು" ಅಂತ ಕೇಳಿದ್ರು. "ಬೇಡ, ನೋಡಬೇಡ" ಅಂದ್ರು ಭಗವಂತ. "ಇಲ್ಲ, ನಾನು ನೋಡಲೇಬೇಕು" ಅಂತ ಮೋಸೆಸ್ ಹಠ ಹಿಡಿದು ಅನುಗ್ರಹ ಮಾಡು ಅಂದಾಗ ಭಗವಂತ "ಆಯ್ತು" ಅಂದ "ನೋಡು" ಅಂದಾಗ ಆ ಜ್ಯೋತಿ, ಭಗವಂತನ ದಿವ್ಯಜ್ಯೋತಿ ಏನು ಬೆಳಗ್ತು ಅದನ್ನು ನೋಡಿ ಮೂರ್ಛೆ ಬಿದ್ದುಬಿಟ್ಟರು. ಅದನ್ನು ತಾಳಲಾಗಲಿಲ್ಲ, ಹಾಗೆ, ನಾವು ಆ ಮಟ್ಟಕ್ಕೆ ತಲುಪಬೇಕು. ಸ್ವಾಮಿ

## ಪುಸ್ತಕ ವಿಭಾಗ

ವಿವೇಕಾನಂದರು ಹೀಗೆ ಹೇಳಿದ್ದಾರೆ ಅಂತ ಬರೀ ನಿದರ್ಶನಕ್ಕೆ ಹೇಳಿಕೊಂಡರೆ ಆಗಲಿಲ್ಲ. ವಿವೇಕಾನಂದರ ಹೃದಯ ನಮ್ಮ ಹೃದಯದಲ್ಲಿ ಸಂಸಪ್ತವಾಗಬೇಕು. ಭಗವಂತ ಯಾವ ಕೃಪಾಪೂರ್ಣ ದೃಷ್ಟಿಯಿಂದ ಜಗತ್ತನ್ನು ಈಕ್ಷಿಸುತ್ತಾನೋ ಅದೇ ಕೃಪಾಪೂರ್ಣ ದೃಷ್ಟಿ ನಮ್ಮ ನಯನಗಳಲ್ಲಿ ಸಂಸಪ್ತಗೊಳಿಸಿಕೊಂಡು ನಾವು ನೋಡಿದ್ರೇನೇ ನಮಗೆ ಮತ್ತೊಬ್ಬರ ಕಷ್ಟ ನಷ್ಟ. ದುಃಖ ದುಮ್ಮಾನಗಳು ಗೊತ್ತಾಗುತ್ವೆ. ಅದೇ ಇಲ್ದೆ ಇರೋವಾಗ ನನಗೆ ಲಭ್ಯವಿರುವ ಅತ್ಯಲ್ಪ ಐಶ್ವರ್ಯದಿಂದ ನಾನು ಉನ್ಮತ್ತನಾದರೆ ನನಗೆ ಇದು ಪ್ರಾಪ್ತವಾಗೋದಿಲ್ಲ.

**ಶಾಸ್ತ್ರಿಗಳು:** ನಿಮಗೆ ಮುಖ್ಯವಾಗಿ ಅನ್ನಿಸೋದೇನು ?

### ನಿರ್ಮಲ ಹೃದಯದ ಪ್ರಾರ್ಥನೆ

**ಕರೀಂಖಾನ್:** ರಾಷ್ಟ್ರದ ಭವಿಷ್ಯ ಉಜ್ವಲವಾಗಬೇಕು. ಉಜ್ವಲವಾಗಿಲ್ಲ. ಜನ ಪ್ರತಿಯೊಬ್ಬರೂ ತಮ್ಮ ಹಿತ ಬಯಸ್ತಾ ಇದ್ದಾರೆಯೇ ಹೊರತು ರಾಷ್ಟ್ರದ್ದಲ್ಲ. ಅನೇಕ ಸಂಘ ಸಂಸ್ಥೆಗಳನ್ನು ನಾವು ಸ್ಥಾಪಿಸುತ್ತೇವೆ. ಆ ಸಂಘಕ್ಕೆ ವ್ಯಕ್ತಿಗಳನ್ನು ಸೇರಿಸಿಕೊಳ್ಳಲು ಪ್ರಯತ್ನಪಟ್ಟಾಗ ಆ ವ್ಯಕ್ತಿ ತನ್ನ ಭಾಗ ಏನು ಅಂತ ಕೇಳ್ತಾನೆ. ದುಡಿಮೆಯ ಭಾಗ ಬಯಸೋದಿಲ್ಲ. ಅದರ ಫಲಬಯಸ್ತಾನೆ. ನನ್ನ ಸುಖ ಸಂತೋಷಕ್ಕೆ ಇದು ಎಲ್ಲಿಯವರೆಗೆ ಸಹಾಯಕವಾಗುತ್ತೆ ಅಂತ ಬಯಸೋದ್ರಿಂದ ಯಾವ ಸಂಘ ಸಂಸ್ಥೇನೂ, ರಾಜಕೀಯ ಪಕ್ಷಗಳೂ ತಮ್ಮ ಧ್ಯೇಯೋದ್ದೇಶಾನ ಪೂರ್ಣಮಾಡಲಾರವು. ಎಷ್ಟೋ ಶತಮಾನಗಳ ಕೋರಿಕೆಯ ಮೇರೆಗೆ ಭಾರತಾಂಬೆಗೆ ಗಾಂಧೀಜಿಯವರಂಥ ಒಬ್ಬ ಮಗ ಹುಟ್ಟಿದ. ಅಂತಹ ಇನ್ನೊಬ್ಬ ಮಗ ಇನ್ನೂ ಹುಟ್ಟಿಬರಬೇಕು. ನಮ್ಮನ್ನು ನಿಜವಾದ ಮಾನವರನ್ನಾಗಿ ರೂಪಿಸಬೇಕು. ಅಂತಹ ಮಹಾನುಭಾವ ಯಾವಾಗ ಬರ್ತಾನೋ ಅಲ್ಲಿಯವರೆಗೆ ಕಾಯಬೇಕು. ನಾವಿರ್ತೀವೋ ಇಲ್ವೋ. ಆದ್ರೆ ಮುಂದಿನವರಿಗಾದರೂ ಒಂದು ಸಂದರ್ಶನ ಪ್ರಾಪ್ತವಾಗಲಿ. ಅವ್ರು ಮಾನವ ಶ್ರೇಷ್ಠರಾಗಲಿ. ಈ ಜಗತ್ತಿನ ಅಗ್ರಗಣ್ಯರಾಷ್ಟ್ರಗಳಲ್ಲಿ ಭಾರತದ ಸ್ಥಾನವೂ ಕೂಡ ಗಗನ ಚಂದ್ರನಂತೆ ಇರಲಿ ಅನ್ನೋ ಕೋರಿಕೆ ನನ್ನದು. ನಮ್ಮಿಂದ ಅಷ್ಟು ಸಾಧ್ಯವಿಲ್ಲದ ಹಾರೈಕೆ ಕೊಟ್ಟಿದ್ದಾನೆ ಭಗವಂತ. ಪ್ರಾರ್ಥನೆ ಏನು ಅಂದ್ರೆ, ಈ ಮಹಾನ್ ರಾಷ್ಟ್ರ ನಮ್ಮದ್ದು. ಈ ರಾಷ್ಟ್ರದಲ್ಲಿ ಯಾವತ್ತೂ ಕ್ಷಾಮ ಡಾಮರಗಳು ಪ್ರವೇಶ ಮಾಡದೇ ಹೋಗಲಿ, ದುಃಖ ಸಂಕಟಗಳು ಈ ದೇಶದ ಜನರನ್ನು ಪೀಡಿಸದೇ ಇರಲಿ, ಈ ದೇಶದ ಪ್ರತಿಯೊಂದು ಮಗು, ವಿವೇಕಾನಂದರು ಹೇಳಿರುವಂತೆ- ಪ್ರತಿಯೊಂದು ನಾಯಿಕೂಡ, ಉಂಡು ಸುಖವಾಗಿರ್ಲಿ. ಹಸಿವು, ಸೀರಡಿಕೆಗಳು, ಅಂತಃಕಲಹಗಳು ಇಲ್ಲದಂತಹ ಭಾರತ ನಿರ್ಮಾಣವಾಗಲಿ ಅನ್ನೋ ಬಯಕೆ ನನ್ನದು.

**ಶಾಸ್ತ್ರಿಗಳು:** ಆಗುತ್ತೆ. ನಿಮ್ಮಂಥ ನಿರ್ಮಲ ಹೃದಯದವರಿಂದ ಬಂದಂತಹ ಪ್ರಾರ್ಥನೆ ನಿಷ್ಫಲವಾಗೋದಿಲ್ಲ. ಕಾಲ ಬೇಕು ಅಷ್ಟೆ......

**ಕರೀಂಖಾನ್:** ಈ ಬಯಕೆ, ಜಗತ್ತಿನ ಆದಿಯಿಂದಾನೂವೇ, ಅಸಂಖ್ಯಾತ ಧರ್ಮೋದ್ಧಾರಕರು ಅವತಾರ ಮಾಡ್ದಾಗಲೂ ಇತ್ತು. ಧರ್ಮಶಾಸ್ತ್ರದ ರೀತಿಯಲ್ಲಿ ಧರ್ಮ ಸಂಸ್ಥಾಪಕರೇ ಒಂದು ಕೋಟಿ ಇಪ್ಪತ್ನಾಲ್ಕು ಲಕ್ಷ ಅವತಾರ ಮಾಡಿದ್ದಾರೆ ಅಂತ ಮಹಮದ್ ಪೈಗಂಬರ್ ಹೇಳಿದ್ದಾರೆ ಒಂದ್ಕಡೆ. "ಭಾರತದಲ್ಲಿ 'ಕಹನ್ ಅನ್ನೋ ಧರ್ಮ ಸಂಸ್ಥಾಪಕ ಅವತಾರ ಮಾಡಿದ್ದ. ಅವನ ಬಣ್ಣ ಕಪ್ಪಗಿತ್ತು" ಅಂತ. ಬಹುಶಃ ಕೃಷ್ಣನನ್ನು ಕುರಿತು ಅವರು ಹೀಗೆ ಅಂದಿರಬೇಕು. ಹೀಗೆ ಜಗತ್ತಿನ ಎಲ್ಲಾ ಭಾಗಗಳಲ್ಲೂ ಧರ್ಮ ಸಂಸ್ಥಾಪಕರು ಅವತಾರ ಮಾಡಿದ್ದಾರೆ. ಅಂದ್ರೆ, ಮನುಷ್ಯ ಜೀವಿ ಯಾವುದನ್ನೂ ಪರಿಗ್ರಹಿಸೋದಿಲ್ಲ.

ತಾತ್ಕಾಲಿಕವಾಗಿ ಹೊರತು, ಯಾವ ಧರ್ಮ, ಯಾವ ಸೂತ್ರ, ಯಾವ ಸಿದ್ಧಾಂತ ಇವ್ನಿಗೆ ಅನ್ವಯಿಸೋದಿಲ್ಲ. ಯಾಕೇಂದ್ರೆ "ಭ್ರಷ್ಟಸ್ಯ ಕಾವಾಗತಿಃ"? ಭ್ರಷ್ಟರಿಗೆ ಒಂದು ಸಿದ್ಧಾಂತವಿಲ್ಲ, ತತ್ವ ಇಲ್ಲ, ಪಕ್ಷ ಇಲ್ಲ, ಹೀಗೆ ಭ್ರಷ್ಟಾಚಾರವೇ ಅಧಿಕವಾಗಿರುವಾಗ ಯಾರು ಅವತಾರ ಮಾಡಿದ್ರೇನು? ಕೃಷ್ಣ ಅವತಾರ ಮಾಡಿದ್ರೇನು, ಪೈಗಂಬರ್ ಅವತಾರ ಮಾಡಿದ್ರೇನು? ಮನುಷ್ಯ ತಾನು ಯಾವ ಸ್ಥಳದಲ್ಲಿ ನಿಲ್ತಾನೆ ಅಲ್ಲೇ ನಿಂತು ಹೋಗ್ತಾನೆ. ಕ್ರೋಧ, ದ್ವೇಷ, ಅಸೂಯಾದಿಗಳು ಇವನನ್ನು ಬಿಟ್ಟು ಹೋಗೋದಿಲ್ಲ. ಮತ್ತೊಬ್ಬರ ಸುಖ ಸಂತೋಷ, ಅಭ್ಯುದಯಗಳನ್ನು ಇವ್ನು ಎಂದೆಂದೂ ಸಹಿಸೋಲ್ಲ. ಮತ್ತೊಬ್ಬರ ಏಳಿಗೆಗೆ ಕರುಬುತ್ತಾನೆ. ಬೇರೆ ಜೀವರಾಶಿಗಳಲ್ಲಿ ಇದಿಲ್ಲ.

**ಶಾಸ್ತ್ರಿಗಳು:** ನಮ್ಮ ಬಹುಜನ ಸ್ನೇಹಿತರು ಕೇಳೋ ಪ್ರಶ್ನೆ ಏನಂದ್ರೆ "ನೀವು ಯಾಕೆ ಮದುವೆಯಾಗದೆ ಬ್ರಹ್ಮಚಾರಿಗಳಾಗೇ ಉಳಿದುಬಿಟ್ಟಿರಿ" ಅನ್ನೋದು?

**ಕರೀಂಖಾನ್:** ಕೆಲವು ವೇಳೆ ನಮ್ಮ ಅದೃಷ್ಟದ ಮೇಲೂ ಹೊಂದಿಕೋ ಬೇಕಾಗುತ್ತೆ. ಅದು ಪಲಾಯನವಾದವೋ ಏನೋ, ಹ್ಯಾಗಾದ್ರೂ ಇರ್ಲಿ, ನಮ್ಮ ಅದೃಷ್ಟದಲ್ಲಿ ಲಭ್ಯವಿಲ್ಲದೇ ಇದ್ದದ್ದಕ್ಕೆ ಕೈಚಾಚಿದ್ರೆ ಅದು ಸಿಗೋದಿಲ್ಲ. ಕೆಲವು ವೇಳೆ, ಬಯಕೆಗಳು ಬೇಕಾದಷ್ಟಿರುತ್ವೆ. ಯಾವಾಗ ಬಯಕೆಗಳು ಪೂರ್ಣ ಆಗೋದಿಲ್ವೊ ಅದಕ್ಕಾಗಿ ಹಂಬಲಿಸಬಾರದು. ದುಃಖಪಡಬಾರದು. ಒಂದು ಆಳವಾದ ಗುಂಡಿ ತೋಡಿ ನಮ್ಮ ಬಯಕೆಗಳನ್ನೆಲ್ಲಾ ಅದರಲ್ಲಿ ಹೂತು ಬಿಟ್ಟು ಎರಡು ತೊಟ್ಟು ಕಣ್ಣೀರು ಹಾಕಿ. ನಿಮಗೂ ನಮಗೂ ಸಂಬಂಧ ಇಲ್ಲ, ನೀವ್ಯಾರೋ ನಾವ್ಯಾರೋ ಅನ್ನೋ ರೀತೀಲಿ ಇದ್ದು ಬಿಟ್ರೆ ಈ ಪ್ರಶ್ನೆ ಉದ್ಭವವೇ ಆಗೋಲ್ಲ. ಮದುವೆ ಆಗಲಿಲ್ಲ, ಆಗಲಿಲ್ಲ ಅಷ್ಟೆ. ಆಗೋ ಯೋಗ ಇರ್ಲಿಲ್ಲ. ಭಗವಂತನ ಇಚ್ಛೆ ಇರ್ಲಿಲ್ಲ. ಅದಕ್ಕಾಗಿ ಆಗ್ಲಿಲ್ಲ. ಯಾರನ್ನೂ ದೂರೋದಿಲ್ಲ. ಅದಕ್ಕಾಗಿ ಪಶ್ಚಾತ್ತಾಪಾನೂ ಇಲ್ಲ.

**ಶಾಸ್ತ್ರಿಗಳು:** ನಿಮ್ಮನ್ನು ಸಮಾಜ ಸೇವೆಗಾಗಿ ಅರ್ಪಿಸಿಕೊಳ್ಳೋದಿಕ್ಕೆ ನಿಮ್ಮ ಬ್ರಹ್ಮಚರ್ಯ ಅತಿ ದೊಡ್ಡ ಕಾರಣ ಆಯ್ತು, ಸಂಸಾರ ಬಂಧನ ಇಲ್ದಿದ್ರಿಂದ ಪೂರ್ತಿ ತೊಡಗಿಸಿಕೊಳ್ಳೋದಿಕ್ಕೆ ಸಾಧ್ಯವಾಯ್ತು....

**ಕರೀಂಖಾನ್:** ಎಲ್ಲಾರ ಬಯಕೇನೂ ಈಡೇರೋದಿಲ್ಲ. ಆಮೇಲೆ, ಕೆಲವರ ಸ್ವಭಾವಗಳಿಗೆ ಅವ್ರು ಮದುವೆಯಾದ್ರೆ ಆ ಹೆಣ್ಣು ನೋವು ಅನುಭವಿಸಬೇಕಾಗುತ್ತೆ ಹೊರತು ಅಂಥವರನ್ನು ಕಟ್ಟಿಕೊಂಡು ಆ ಹೆಣ್ಣು ಸುಖಪಡೋದಿಲ್ಲ. ಅದ್ರಿಂದ ಇನ್ನೊಂದು ಜೀವಕ್ಕೆ ಹಿಂಸೆ ಯಾಕೆ ಕೊಡೋದು ಅಂತ ಹೇಳಿ ನಾನು ಮದುವೇನೇ ಆಗ್ಲಿಲ್ಲ. ಜೊತೆಗೆ ನನಗೆ ಮೊದಲಿನಿಂದಾನೂ ಈ ಸಮಾಜ ಸೇವೆಯ ಗೀಳು. ಅದಕ್ಕಾಗಿ ಬ್ರಹ್ಮಚಾರಿಯಾಗಿದ್ರೆ ಹೆಚ್ಚು ತೊಡಗಿಕೊಳ್ಳಲಿಕ್ಕೆ ಸಾಧ್ಯವಾಗುತ್ತೆ ಅನ್ನುವ ಕಾರಣವೂ ಒಂದು ಅನ್ನಬಹುದೇನೋ!

**ಶಾಸ್ತ್ರಿಗಳು:** ಅಂತೂ ನಿಮ್ಮನ್ನು ಈ ಸಂಜೆ ಬಹಳ ಹೊತ್ತು ಚೆನ್ನಾಗಿ ಹಣಿಸಿಬಿಟ್ಟಿದ್ದೇನೆ, ಶ್ರಮಿಸಿಬಿಟ್ಟಿದ್ದೇನೆ. ದಯವಿಟ್ಟು ಕ್ಷಮಿಸಿ. ನಿಮ್ಮ ಈ ಸಾಧನೆ, ಜೀವನ ಎಲ್ಲದರ ಕುರಿತು ಇಷ್ಟೊಂದು ತಿಳಿಸಿಕೊಟ್ಟಿದ್ದೀರಿ. ನಿಮ್ಮ ಈ ಸಹಕಾರಕ್ಕೆ ತುಂಬಾ ಧನ್ಯವಾದಗಳು, ನಮಸ್ಕಾರ.

**ಕರೀಂಖಾನ್:** ನನಗೂ ತುಂಬಾ ಹಿತವಾದದ್ದು ಇದು. ನಿಮಗೂ ಧನ್ಯವಾದಗಳು. ನಮಸ್ಕಾರ.

(ಲೇಖನ ಸಹಾಯ: ಛಾಯಾಪತಿ ಚಿತ್ರದುರ್ಗ)



ಮಕ್ಕಳ ಮಂಟಪ

ವಿಶೇಷ ಅಂಕಣ

# ತುಂಟ ಭೂತ

ನಾವು ಇನ್ನೊಂದು ಮನೆಗೆ ಹೋಗಬೇಕೆಂದು ನಿರ್ಧರಿಸಿದ್ದು ಅಜ್ಜಿ. ಇದಕ್ಕೆಲ್ಲ ಕಾರಣ ಒಂದು ಭೂತ. ಅದೂ ಮನೆಯಲ್ಲಿ ಎಲ್ಲರಿಗೂ ಜೀವನವನ್ನು ಅಸಾಧ್ಯವಾಗಿಸುತ್ತಿದ್ದ ಒಂದು ತುಂಟ ಭೂತ.

ಭಾರತದಲ್ಲಿ ಸಾಮಾನ್ಯವಾಗಿ ಭೂತಗಳು ಆಲದ ಮರಗಳಲ್ಲಿ ವಾಸಿಸುತ್ತವೆ ಎಂದು ಪ್ರತೀತಿ. ಅಂತೆಯೇ ನಮ್ಮ ತುಂಟ ಭೂತದ ನಿವಾಸವೂ ಅಲ್ಲೇ ಆಗಿತ್ತು. ಅದು ಮೊದಲು ಇದ್ದದ್ದು, ಕಂಪೌಂಡ್ ಗೋಡೆಯ ಮೂಲಕ ಬೆಳೆದು ನಮ್ಮ ಕಡೆಗೆ ಉದ್ಯಾನದಲ್ಲಿ ಪಸರಿಸಿದ್ದ ಹಾಗೂ ಇನ್ನೊಂದು ಕಡೆಗೆ ರಸ್ತೆಯ ಕಡೆಗೆ ವಾಲಿದ್ದ ಆಲದ ಮರದ ಕೊಂಬೆಗಳಲ್ಲಿ.

ಅನೇಕ ವರ್ಷಗಳವರೆಗೆ, ಈ ಭೂತವು ಮನೆಯಲ್ಲಿ ಯಾರಿಗೂ ತೊಂದರೆ ಕೊಡದೆ ಅಲ್ಲಿ ಸಂತೋಷದಿಂದಲೇ ಇತ್ತು. ಬಹುಶಃ ರಸ್ತೆಯ ಮೇಲಿನ ಗದ್ದಲವು ಅದರ ಎಲ್ಲ ಗಮನವನ್ನು ಸೆಳೆದಿಟ್ಟುಕೊಂಡಿರಬಹುದೆಂದು ನನ್ನ ಅನಿಸಿಕೆ. ಕೆಲವು ವೇಳೆ, ರಸ್ತೆಯ ಮೇಲೆ ಟಾಂಗಾ ಹಾಯ್ದು ಹೋಗುತ್ತಿದ್ದಾಗ, ಈ ಭೂತವು ಕುದುರೆ ಮರಿಯನ್ನು ಹೆದರಿಸಿದ್ದ ಪರಿಣಾಮವಾಗಿ ಆ ಗಾಡಿಯು ಜೋಲಾಡುತ್ತಾ ತಪ್ಪು ದಿಕ್ಕಿನಲ್ಲಿ ಹೋಗುತ್ತಿತ್ತು. ಕೆಲವು ವೇಳೆ ಭೂತವು ಕಾರು ಅಥವಾ ಬಸ್ಸಿನ ಇಂಜಿನ್ನಿನಲ್ಲಿ ಸೇರಿಕೊಳ್ಳುತ್ತಿತ್ತು. ಆದರಿಂದಾಗಿ ಅವು ಕೂಡಲೇ ಬಂದ್ ಆಗುತ್ತಿತ್ತು. ಅದಕ್ಕೆ ಸಾಹೇಬರುಗಳ ಸೋಲಾ-ಟೋಪಿಗಳನ್ನು ಬೀಳಿಸುವುದೆಂದರೆ ಬಹಳ ಖುಷಿ. ಅವರು, ಆಶ್ಚರ್ಯಪಡುತ್ತಾ ಗಾಳಿಯನ್ನು ಶಪಿಸುತ್ತಿದ್ದರು. ಅನೇಕ ವೇಳೆ ಈ ಭೂತದ ಸಾನಿಧ್ಯ ಗೊತ್ತಾಗುತ್ತಿದ್ದಂತೆ ಹಾಗೂ ಧ್ವನಿಯು ಕೇಳುತ್ತಿದ್ದಂತಿರುತ್ತಿದ್ದರೂ ಭೂತವು ಮಾನವನ ಕಣ್ಣಿಗೆ ಅದೃಶ್ಯವಾಗಿರುತ್ತಿತ್ತು.

ಮೂಲ: ರಸ್ಕಿನ್ ಬಾಂಡ್
ಕನ್ನಡಕ್ಕೆ: ಸುಮಾ ಆರ್. ಪರ್ವತೀಕರ್

ರಾತ್ರಿ ವೇಳೆಯಲ್ಲಿ ಜನರು ಈ ಆಲದ ಮರದ ಕೆಳಗೆ ಓಡಾಡುವದನ್ನು ತಪ್ಪಿಸುತ್ತಿದ್ದರು. ಆಕಸ್ಮಾತ್ತಾಗಿ ನೀವು ಈ ಮರದ ಕೆಳಗೆ ಆಕಳಿಸಿದರೆ, ಭೂತ ನಿಮ್ಮ ಗಂಟಲಲ್ಲಿಳಿದು ನಿಮ್ಮ ಪಚನ ಶಕ್ತಿಯನ್ನು ಹಾಳುಮಾಡುತ್ತದೆ ಎಂಬ ವದಂತಿ ಇತ್ತು. ಸಮಯಕ್ಕೆ ಸರಿಯಾಗಿ

# ಮಕ್ಕಳ ಮಂಟಪ



ಯಾವುದನ್ನೂ ತಯಾರಿಡದ ಅಜ್ಜಿಯ ದರ್ಜಿ, ಜಸ್‌ಪಾಲ್‌ನೂ ತನ್ನ ಎಲ್ಲ ತೊಂದರೆಗಳಿಗೂ ಭೂತವನ್ನೇ ದೂರುತ್ತಿದ್ದನು. ಒಂದು ಬಾರಿ ಜಸ್‌ಪಾಲನು ಆಲದ ಮರದ ಕೆಳಗೆ ಆಕಳಿಸುವಾಗ ಕಡ್ಡಾಯವಾಗಿ ಪಾಲಿಸಲೇಬೇಕಾದ ಬೆರಳುಗಳನ್ನು ಚಿಟಿಕೆ ಹೊಡೆಯುವದನ್ನು ಮರೆತುಬಿಟ್ಟಿದ್ದನು. ಆದ್ದರಿಂದ ಭೂತವು ಅವನೊಳಗೆ ಯಾವ ಕಷ್ಟವೂ ಇಲ್ಲದೆ ಸೇರಿಕೊಂಡಿತು. ಅವತ್ತಿನಿಂದ ಜಸ್‌ಪಾಲನು ಯಾವಾಗಲೂ ಹೊಟ್ಟೆಯ ತೊಂದರೆಗಳಿಂದ ನರಳುತ್ತಿದ್ದನು.

ಆದರೆ ಆ ಆಲದ ಮರವನ್ನು ಕಡಿಯುವ ವರೆಗೂ, ಅದು ನಮ್ಮ ಕುಟುಂಬಕ್ಕೆ ಯಾವ ತೊಂದರೆಯನ್ನೂ ಕೊಟ್ಟಿರಲಿಲ್ಲ.

ನಮ್ಮ ಜಮೀನಿನ ಮೇಲಿದ್ದ ಆ ಮರವನ್ನು ಕಡಿಯಲು ನನ್ನ ಅಜ್ಜ ಲೋಕೋಪಯೋಗಿ ಇಲಾಖೆಯಿಂದ ಅನುಮತಿ ಪಡೆದಿದ್ದರೆಂಬುದನ್ನು ಬಿಟ್ಟರೆ ಅದರಲ್ಲಿ ಯಾರ ತಪ್ಪೂ ಇರಲಿಲ್ಲ. ಲೋಕೋಪಯೋಗಿ ಇಲಾಖೆಯವರು ರಸ್ತೆಯನ್ನು ಹೆಚ್ಚು ಅಗಲ ಮಾಡುವವರಿದ್ದರು. ಈ ಮರ ಹಾಗೂ ಗೋಡೆಯ ಒಂದು ಭಾಗ ದಾರಿಯಲ್ಲಿದ್ದವಾದ್ದರಿಂದ ಅವುಗಳನ್ನು ತೆಗೆಯಬೇಕಾಗಿತ್ತು. ಯಾವುದೇ ಸಂದರ್ಭದಲ್ಲಿಯೂ ಒಂದು ಭೂತವೂ ಕೂಡ ಲೋಕೋಪಯೋಗಿ ಇಲಾಖೆಗೆ (ಪಿಡಬ್ಲ್ಯುಡಿ) ಎದುರಾಗಿ ನಿಲ್ಲಲಾರದು. ಆಲದ ಮರವನ್ನು ಕಡಿದ ನಂತರ ಒಂದು ದಿನ ಕಳೆಯುವುದರೊಳಗಾಗಿ ತನ್ನ ಮರದಿಂದ ವಂಚಿತವಾದ ಭೂತವು ನಮ್ಮ ಮನೆಯಲ್ಲಿ ವಾಸಿಸಲು ನಿರ್ಧರಿಸಿದೆ ಎಂದು ನಾವು ಕಂಡುಕೊಂಡೆವು. ಆದ್ದರಿಂದ ತನ್ನ ಇರುವಿಕೆಯನ್ನು ಸಾಬೀತುಪಡಿಸಲು ಒಂದು ಒಳ್ಳೆಯ ಭೂತ ಕೂಡ ಕೆಟ್ಟದ್ದಾಗಿ ವರ್ತಿಸಬೇಕಾಗುತ್ತದೆ. ಕೆಲವು ಕಾಲದಲ್ಲಿಯೇ ಅದು ನಮ್ಮ ಮನೆಯಲ್ಲಿ ಎಲ್ಲ ತರಹದ ತುಂಟಾಟಗಳಿಗೆ ಮೊದಲು ಮಾಡಿತು.

# ಮಕ್ಕಳ ಮಂಟಪ

ಅಜ್ಜಿ ತನ್ನ ಕನ್ನಡಕವನ್ನು ತೆಗೆದಿಟ್ಟಾಗಲೆಲ್ಲ ಅದನ್ನು ಬಚ್ಚಿಡುವುದರೊಂದಿಗೆ ತನ್ನ ತುಂಟತನದ ಭರಾಟೆಯನ್ನು ಈ ಭೂತ ಪ್ರಾರಂಭಿಸಿತು.

"ನಾನು ಅದನ್ನು ಡ್ರೆಸಿಂಗ್ ಟೇಬಲ್ ಮೇಲೆ ಇಟ್ಟಿದ್ದೆ ಎಂದು ನನಗೆ ಖಚಿತವಾಗಿ ನೆನಪಿದೆ" ಎಂದು ಅವಳು ಸಿಡಿಮಿಡಿಗುಟ್ಟುತ್ತಿದ್ದಳು.

ಸ್ವಲ್ಪ ಹೊತ್ತಿನ ನಂತರ ನಾವು ಕನ್ನಡಕವು, ವರಾಂಡವನ್ನು ಅಲಂಕರಿಸಿದ್ದ ಹುಲ್ಲಿನಿಂದ ತುಂಬಿದ್ದ, ಕಟ್ಟಿಗೆಯ ಹಲಿಗೆಗೆ ಜೋಡಿಸಲ್ಪಟ್ಟಿದ್ದ ಕಾಡು ಹಂದಿಯ ಮೂರ್ತಿಯ ಮೇಲೆ ಅತಿ ಜೋಪಾನವಾಗಿ ಜೋಲಾಡುತ್ತಿರುವದನ್ನು ನೋಡಿದೆವು. ಮನೆಯಲ್ಲಿ ನಾನು ಒಬ್ಬನೇ ಚಿಕ್ಕ ಹುಡುಗನಾಗಿದ್ದರಿಂದ ಈ ತುಂಟಾಟವು ನನ್ನದಿರಬಹುದೆಂದು ಎಲ್ಲರೂ ನನ್ನನ್ನು ದೂಷಿಸಿದರು. ಆದರೆ ಒಂದೆರಡು ದಿನಗಳ ನಂತರ, ಗಿಳಿಯ ಪಂಜರದ ತಂತಿಗಳ ಮೇಲಿಂದ ಅದು ಜೋಲಾಡುತ್ತ ಸಿಕ್ಕಾಗ, ಇದು ಬೇರೆ ಯಾರದೋ ಕೆಲಸ ಎಂದು ಎಲ್ಲರೂ ಒಪ್ಪಿದರು.

ಅನಂತರ ಅಜ್ಜನವರು ಈ ಭೂತದಿಂದಾಗಿ ತೊಂದರೆಗೊಳಗಾದವರಲ್ಲಿ ಎರಡನೆಯವರು. ಒಂದು ಮುಂಜಾನೆ ಅವರು ಉದ್ಯಾನದಲ್ಲಿ ಹೋದಾಗ ತಮ್ಮ ಮೆಚ್ಚಿನ ಸಿಹಿ ವಟಾಣೆಗಳು ಹರಿದು ನೆಲದ ಮೇಲೆಲ್ಲ ಬಿದ್ದಿರುವುದನ್ನು ನೋಡಿದರು.

ಅನಂತರ ತಾಪತ್ರಯಕ್ಕೊಳಗಾದವರು ನನ್ನ ಕಕ್ಕ ಕೆನ್. ಅವರು ಅತ್ಯಂತ ಗಾಢ ನಿದ್ರೆ ಮಾಡುವವರಾಗಿದ್ದರು. ಅವರು ಒಂದು ಸಾರಿ ಮಲಗಲು ಹೋದರೆಂದರೆ ತಮ್ಮನ್ನು ಯಾರಾದರೂ ಎಚ್ಚರಿಸಿದರೆ ಬಹಳ ಕೋಪಗೊಳ್ಳುತ್ತಿದ್ದರು. ಆದ್ದರಿಂದ ಅವರು ಬೆಳಿಗ್ಗೆ ಉಪಹಾರದ ಮೇಜಿಗೆ ಮಬ್ಬುಗಣ್ಣಿನಿಂದ ಹಾಗೂ ದಣಿದವರಂತೆ ಬಂದಾಗ, ಅವರ ಆರೋಗ್ಯ ಚೆನ್ನಾಗಿಲ್ಲವೇ ಎಂದು ಕೇಳಿದೆವು.

"ನಿನ್ನೆ ರಾತ್ರಿ ನನಗೆ ಒಂದು ಬಾರಿಯಾದರೂ ಕಣ್ಣು ರೆಪ್ಪೆ ಮುಚ್ಚಲಾಗಲಿಲ್ಲ" ಅವರು ದೂರಿದರು. "ಪ್ರತಿ ಬಾರಿಯೂ ನನಗೆ ಇನ್ನೇನು ನಿದ್ದೆ ಹತ್ತುತ್ತಿದ್ದಾಗ, ಬೆಡ್‌ಷೀಟ್‌ಗಳು ಹಾಸಿಗೆಯಿಂದ ಎಳೆಯಲ್ಪಡುತ್ತಿದ್ದವು. ನಾನು ಅವುಗಳನ್ನು ನೆಲದ ಮೇಲಿಂದ ತೆಗೆಯಲು ಎಂಟು ಹತ್ತು ಬಾರಿಯಾದರೂ ಏಳಬೇಕಾಯಿತು". ಅವರು ನನ್ನ ಕಡೆಗೆ ಸ್ವಲ್ಪ ಬೇಸರದಿಂದ ನೋಡಿದರು. "ನೀನು ನಿನ್ನೆ ರಾತ್ರೆ ಎಲ್ಲಿ ಮಲಗಿದ್ದೆ - ಮಗು ?"

ನನ್ನ ಬಳಿ ಉತ್ತರ ಸಿದ್ಧವಿತ್ತು. "ಅಜ್ಜನ ಕೋಣೆಯಲ್ಲಿ" ನಾನು ಉತ್ತರಿಸಿದೆ.

"ಅದು ನಿಜ" ಅಜ್ಜ ಒಪ್ಪಿದರು. "ನಾನು ಲಘು ನಿದ್ರೆಯವನಾಗಿದ್ದೇನೆ. ಅವನು ನಿದ್ರೆಯಲ್ಲಿ ನಡೆಯುತ್ತಿದ್ದಿದ್ದರೆ ನನಗೆ ಎಚ್ಚರವಾಗಿರುತ್ತಿತ್ತು. ಆತನದೇನೂ ಕೈವಾಡ ಇದರಲ್ಲಿಲ್ಲ" ಅಜ್ಜ ಹೇಳಿದರು.

"ಇದು ಆ ಆಲದ ಮರದ ಭೂತದ ಕೆಲಸ" ಅಜ್ಜಿ ಸಿಡುಕಿದಳು. "ಅದು ಈಗ ಮನೆಯಲ್ಲೇ ಬಂದಿದೆ. ಮೊದಲು ನನ್ನ ಕನ್ನಡಕ, ನಂತರ ಸಿಹಿ ವಟಾಣೆ, ಈಗ ಕೆನ್‌ನ ಬೆಡ್‌ಷೀಟ್‌ಗಳು! ಮುಂದೆ ಏನು ಮಾಡುತ್ತದೋ ಎಂದು ನನಗೆ ಯೋಚನೆಯಾಗುತ್ತಿದೆ!" ಅಜ್ಜಿ ದೂರಿದಳು.

ನಾವು ಬಹಳ ಕಾಲ ಕಾಯಬೇಕಾಗಲಿಲ್ಲ. ಅನಂತರ ವಿಪತ್ತುಗಳ ಸರಣಿಯೇ ಮೊದಲಾಯಿತು. ಹೂವಿನ ಪಾತ್ರೆಗಳು ಮೇಜಿನಿಂದ, ಚಿತ್ರಪಟಗಳು ಗೋಡೆಯಿಂದ ಕೆಳಗೆ ಬೀಳತೊಡಗಿದವು. ಗಿಳಿಯ ಪುಕ್ಕಗಳು ಚಹಾ ಪಾತ್ರೆಯಲ್ಲಿ ಬರುತ್ತಿದ್ದವಷ್ಟೇ ಅಲ್ಲದೆ, ಗಿಳಿ ಮಧ್ಯರಾತ್ರಿಯಲ್ಲಿ ಭಯದಿಂದ ಕರ್ಕಶವಾಗಿ ಚೀರುತ್ತಿತ್ತು. ಕಕ್ಕ ಕೆನ್ ಅವರು ತಮ್ಮ ಹಾಸಿಗೆಯಲ್ಲಿ ಕಾಗೆಯ ಗೂಡು ಬಿದ್ದಿರುವುದನ್ನು ನೋಡಿ, ಅದನ್ನು ಕಿಟಕಿಯಿಂದ ಹೊರಗೆ ಒಗೆಯಲು ಹೋದಾಗ, ಎರಡು ಕಾಗೆಗಳು ಅವರನ್ನು ಮುತ್ತಿದವು.

ಆದರೆ ಯಾವಾಗ ಚಿಕ್ಕಮ್ಮ ಮಿನ್ನಿ ನಮ್ಮ ಮನೆಯಲ್ಲಿ ಇರಲು ಬಂದಳೋ, ಪರಿಸ್ಥಿತಿ ಇನ್ನೂ ಬಿಗಡಾಯಿಸಿತು. ಭೂತಕ್ಕೆ ಚಿಕ್ಕಮ್ಮ ಮಿನ್ನಿ ಸ್ವಲ್ಪವೂ ಇಷ್ಟವಾದಂತೆ ಕಾಣಿಸಲಿಲ್ಲ. ಆಕೆ ಥಟ್ಟನೆ ಕೆರಳುವ, ಸುಲಭವಾಗಿ ಭಾವೋದ್ರೇಕಗೊಳ್ಳುವ ವ್ಯಕ್ತಿಯಾಗಿದ್ದಳು. ಒಟ್ಟಿನಲ್ಲಿ ಆಕೆ ಒಂದು ತುಂಟ ಭೂತಕ್ಕೆ ಸರಿಯಾದ ಬೇಟೆಯಾಗಿದ್ದಳು.

ಹೇಗೋ ಅವಳ ಟೂತ್‌ಪೇಸ್ಟ್ ಹಾಗೂ ನನ್ನ ಅಜ್ಜನ ಶೇವಿಂಗ್ ಕ್ರೀಮ್ ಅದಲು ಬದಲಾಗಿ, ಅವಳು ಬೈಠಕ್ ಖಾನೆಯಲ್ಲಿ ಬಾಯಿತುಂಬಾ ನೊರೆ ತುಂಬಿಕೊಂಡು ಬಂದಾಗ, ನಾವು ಹೆದರಿ ಓಡಿದೆವು. ಕಕ್ಕ ಕೆನ್ ಆಕೆಗೆ ರೇಬೀಸ್ ಆಗಿದೆಯೆಂದು ಕೂಗಿಕೊಂಡರು.

ಎರಡು ದಿನಗಳ ನಂತರ ಚಿಕ್ಕಮ್ಮ ಮಿನ್ನಿ, ಕಿತ್ತಳೆ ಹಣ್ಣೊಂದು ಅಡುಗೆ ಕೋಣೆಯ ಕಪಾಟಿನಿಂದ ತನ್ನಂತಾನೇ ಜಿಗಿದು, ವೇಗವಾಗಿ ಚಲಿಸಿ ತನ್ನ ಮೂಗಿಗೆ ಅಪ್ಪಳಿಸಿತೆಂದು ದೂರಿದಳು. ನೋವಾಗಿದ್ದ ಮತ್ತು ಉಬ್ಬಿದ ಮೂಗು ಸಂಭವಿಸಿದ ಆಕ್ರಮಣಕ್ಕೆ ಸಾಕ್ಷಿಯಾಗಿತ್ತು. ಚಿಕ್ಕಮ್ಮ ಮಿನ್ನಿ ಉತ್ತರ ಬರ್ಮಾದಲ್ಲಿಯೇ ಜೀವನ ಎಷ್ಟೋ ಸುಖಕರವಾಗಿತ್ತೆಂದು ಖಂಡಿತವಾಗಿ ಹೇಳಿದಳು.

"ನಾವು ಈ ಮನೆಯನ್ನು ಬಿಡಲೇಬೇಕು" ಅಜ್ಜಿ ದೃಢವಾಗಿ ಹೇಳಿದಳು. "ನಾವು ಇನ್ನೂ ಸ್ವಲ್ಪ ಹೆಚ್ಚು ದಿನ ಇಲ್ಲಿದ್ದರೆ, ಕೆನ್ ಮತ್ತು ಮಿನ್ನಿ ಇಬ್ಬರೂ ಅನಾರೋಗ್ಯದಿಂದ ಕುಸಿಯುತ್ತಾರೆ".

"ಚಿಕ್ಕಮ್ಮ ಮಿನ್ನಿ ಯಾವಾಗಲೋ ಕುಸಿದಿದ್ದಾಳೆ ಎಂದು ನಾನೆಂದುಕೊಂಡಿದ್ದೆ" ನಾನೆಂದೆ.

"ನಿನ್ನ ಅಧಿಕಪ್ರಸಂಗದ ಅಗತ್ಯವೇನೂ ಇಲ್ಲ" ಚಿಕ್ಕಮ್ಮ ಮಿನ್ನಿ ಸಿಡುಕಿದಳು.

"ಇರಲಿ, ನಾನೂ ಮನೆಯನ್ನು ಬದಲಾಯಿಸುವುದಕ್ಕೆ ಒಪ್ಪಿದ್ದೇನೆ" ಎಂದು ನಾನು ಹಗುರ ಹೃದಯದಿಂದ ಹೇಳಿದೆ. "ನನಗೂ ದಿನವೂ ಹೋಮ್ ವರ್ಕ್ ಮಾಡಲಾಗುತ್ತಿಲ್ಲ, ಮಶಿಕುಡಿಕೆ ಯಾವಾಗಲೂ ಬರಿದಾಗಿರುತ್ತದೆ".

ಹೀಗೆ, ಇನ್ನೂ ಕೆಲವು ದಿನಗಳು ಮತ್ತು ವಿಪತ್ತುಗಳ ನಂತರ, ನಾವು ಇನ್ನೊಂದು ಹೊಸ ಮನೆಗೆ ಹೋಗಲು ತಯಾರಾದೆವು.

ಪೀಠೋಪಕರಣಗಳು ಮತ್ತು ಭಾರವಾದ ಸಾಮಾನನ್ನು ಹೊತ್ತ ಎರಡು ಎತ್ತಿನ ಗಾಡಿಗಳು ಮುಂದೆ ಕಳಿಸಲ್ಪಟ್ಟವು. ಹಳೆಯ ಕಾರಿನ ಛಾವಣಿಯ ಮೇಲೆ, ಚೀಲಗಳು ಮತ್ತು ಅಡಿಗೆಮನೆ ಪಾತ್ರೆಗಳನ್ನು ಎತ್ತರಕ್ಕೆ ಪೇರಿಸಿಡಲಾಯಿತು. ಎಲ್ಲರೂ ಕಾರಿನಲ್ಲಿ ಸೇರಿಕೊಂಡರು. ಅಜ್ಜ ಚಾಲಕನ ಸ್ಥಾನದಲ್ಲಿ ಕುಳಿತರು.

ನಾವು ಇನ್ನೂ ಗೇಟನ್ನು ದಾಟಿದ್ದೆವೋ ಇಲ್ಲವೋ ಅಷ್ಟರಲ್ಲೇ ಒಂದು ವಿಚಿತ್ರವಾದ ಸದ್ದು, ಯಾರೋ ಕಾರಿನ ಛಾವಣಿಯ ಮೇಲೆ ತನ್ನಷ್ಟಕ್ಕೆ ತಾನೇ ಹಗುರವಾಗಿ ನಗುತ್ತಿರುವಂತೆ ಮತ್ತು ಮಾತನಾಡುತ್ತಿರುವಂತೆ ಕೇಳಿಸಿತು.

"ಗಿಳಿಯು ಸಾಮಾನಿನ ರಾಶಿಯ ಮೇಲೆ ಕುಳಿತಿದೆಯೇ?" ಅಜ್ಜ ಕೇಳಿದರು.

"ಇಲ್ಲ, ಗಿಳಿ ತನ್ನ ಪಂಜರದಲ್ಲಿಯೇ ಎತ್ತಿನಗಾಡಿಯಲ್ಲಿದೆ" ಅಜ್ಜಿ ಹೇಳಿದರು.

ಅಜ್ಜ ಕಾರನ್ನು ನಿಲ್ಲಿಸಿ, ಹೊರಗೆ ಇಳಿದು, ಕಾರಿನ ಮೇಲುಛಾವಣಿ ಮೇಲೆ ಕಣ್ಣು ಹಾಯಿಸಿದರು.

ಮತ್ತೆ ಕಾರಿನಲ್ಲಿ ಕುಳಿತು, ಇಂಜಿನ್ ಚಾಲೂಮಾಡುತ್ತ, "ಮೇಲೆ ಯಾರೂ ಇಲ್ಲ" ಎಂದು ಹೇಳಿದರು. "ಗಿಳಿ ಮಾತನಾಡುವುದು ನನಗೆ ಕೇಳಿಸಿತು ಎಂದು ನನಗೆ ಖಚಿತವಾಗಿ ಅನಿಸುತ್ತದೆ" ಅವರು ಹೇಳಿದರು.

ಅಜ್ಜ ಕಾರನ್ನು ರಸ್ತೆಯ ಮೇಲೆ ಸ್ವಲ್ಪ ದೂರ ನಡೆಸಿದ್ದರು. ಆಗಲೇ ಹಗುರವಾಗಿ ನಗುತ್ತಿರುವ ಮತ್ತು ಅದನ್ನು ಅನುಸರಿಸಿ ಒಂದು ವಿಚಿತ್ರವಾದ ಕೀರಲು ಧ್ವನಿ ಮತ್ತೆ ಪ್ರಾರಂಭವಾಯಿತು.

ನಾವೆಲ್ಲರೂ ಅದನ್ನು ಕೇಳಿದೆವು. ಅದು ತನ್ನಷ್ಟಕ್ಕೇ ತಾನೇ ಮಾತನಾಡಿಕೊಳ್ಳುತ್ತಿದ್ದ ಭೂತದ ಧ್ವನಿಯಾಗಿತ್ತು.

"ಬೇಗ ನಡೆಯಿರಿ, ಬೇಗ ನಡೆಯಿರಿ" ಅದು ಸಂತೋಷಕರವಾಗಿ ಕೀರಲು ಧ್ವನಿಯಲ್ಲಿ ಕೂಗಿತು. "ಹೊಸ ಮನೆ, ಅದನ್ನು ನೋಡುವವರೆಗೂ ನನಗೆ ಕುತೂಹಲ ತಡೆಯಲಾಗುತ್ತಿಲ್ಲ. ಅಲ್ಲಿ ನನಗೆ ಇನ್ನೂ ಎಷ್ಟು ಮಜ ಕಾದಿದೆಯೋ! ಆ ಹ್ಹಹ್ಹಾ ಹ್ಹಾ....." ನಾವೆಲ್ಲ ದಿಗ್ಭ್ರಾಂತರಾದೆವು.

# ಕಣ್ಮರೆಯಾದ ಹೈಡಾ ಜನಾಂಗ

ಅಸಾಮಾನ್ಯ ಧೈರ್ಯ, ಕ್ರೌರ್ಯ ಹಾಗೂ ದೈಹಿಕ ಬಲವನ್ನು ಪರಿಗಣಿಸಿದರೆ ಕೆನಡಾದ ಕ್ವೀನ್ ಚಾರ್ಲೊಟೆ ದ್ವೀಪದ ಹೈಡಾ ಇಂಡಿಯನ್ ಜನಾಂಗಕ್ಕೆ ಸರಿಸಾಟಿಯಾಗಿ ಉತ್ತರ ಅಮೆರಿಕಾದ ಯಾವುದೇ ಇಂಡಿಯನ್ ಜನಾಂಗವೂ ನಿಲ್ಲಲಾರದು. ಬ್ರಿಟಿಷ್ ಕೊಲಂಬಿಯಾದ ಪಶ್ಚಿಮ ಕರಾವಳಿಯಲ್ಲಿ ನೆಲಸಿರುವ ಹೈಡಾ ಇಂಡಿಯನರು ಕ್ರೌರ್ಯವೇ ಮೂರ್ತಿವೆತ್ತಂತಿರುವ ಯೋಧರ ಜನಾಂಗದವರು.

ಬೃಹದಾಕಾರದ ದೇವದಾರು ಮರದ ಹಲಗೆಗಳಿಂದ ತಯಾರಿಸಿದ ದೋಣಿಗಳನ್ನು ಅವರು ಸಮುದ್ರಯಾನದಲ್ಲಿ ಬಳಸುತ್ತಿದ್ದರು. ಅವರು ಕಾಲಿಟ್ಟಲ್ಲೆಲ್ಲಾ ಸಾವು ಮತ್ತು ವಿನಾಶ ತಾಂಡವವಾಡುತ್ತಿತ್ತು. ಹೋರಾಟ ಹಾಗೂ ಹತ್ಯೆಯ ಬಗ್ಗೆ ಹೈಡಾ ಇಂಡಿಯನರಿಗೆ ಯಾಕಿಷ್ಟು ಅಪಾರ ಪ್ರೇಮ? ಅವರ ಪ್ರಮುಖ ಗುರಿಯೇನು? ಈ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಸಿಗುತ್ತಿಲ್ಲ. ಆದರೆ ಪ್ರಾಯಃ ಕೀರ್ತಿ ಮತ್ತು ಧನದಾಹವೇ ಅವರು ಎಸಗುತ್ತಿದ್ದ ರಕ್ತಪಾತಗಳಿಗೆ ಕಾರಣವೆನಿಸುತ್ತದೆ.

ಹೈಡಾ ಯೋಧರು ಉಕ್ಕಿನ ದೇಹ ದಾರ್ಢ್ಯ ಹೊಂದಿರುತ್ತಿದ್ದರು. ಕೆನಡಾದ ಮೇಲೆ ಬಿಳಿಯರ ಆಕ್ರಮಣಕ್ಕಿಂತ ಮುನ್ನವೇ ದಕ್ಷಿಣ ಅಮೇರಿಕಾವನ್ನು ಸಂಶೋಧಿಸಲು ಬಂದ ಅನ್ವೇಷಕರು ಹೈಡಾ ಇಂಡಿಯನರ ಅಸಾಧಾರಣ ದೈಹಿಕ ಶಕ್ತಿಯ ಬಗ್ಗೆ ಬೆರಗಾಗಿದ್ದರು. ಗಂಡಸರು ಆರು ಅಡಿ ಎತ್ತರದ ನೀಳಕಾಯರು. ಅಗಲವಾದ ಎದೆ ಹಾಗೂ ಬಲಿಷ್ಠ ಭುಜ ಹೊಂದಿದ್ದ ಅವರು ನಿಷ್ಣಾತ ಬಿಲ್ಗಾರರಾಗಿದ್ದರು.

ಹೈಡಾ ಮಹಿಳೆಯರೂ ನೀಳಕಾಯದವರಾಗಿದ್ದು ಅತ್ಯಂತ ಚೆಲುವೆಯರು. ಅವರಲ್ಲಿ ಕೆಲವರು ಸ್ಥೂಲಕಾಯರು, ಈ ಜನಾಂಗದಲ್ಲಿ ಸ್ಥೂಲಕಾಯ ಅಕ್ಷಮ್ಯ ಅಪರಾಧವೆಂದು ಪರಿಗಣಿಸಲ್ಪಡುತ್ತಿತ್ತು.

ಹೈಡಾ ಬಾಲಕರಿಗೆ ಬಾಲ್ಯದಿಂದಲೇ ನೋವನ್ನು ಸಹಿಸಿಕೊಳ್ಳುವ ಪ್ರವೃತ್ತಿಯಲ್ಲಿ ತರಬೇತಿ ನೀಡುತ್ತಿದ್ದರು. ದಿನವೂ ಅವರನ್ನು ಎಲ್ಲ ಋತುಗಳಲ್ಲೂ ಸಮುದ್ರದ ಉಪ್ಪು ನೀರಲ್ಲಿ ಮುಳುಗಿಸುತ್ತಿದ್ದರು. ಎರಡು ವರ್ಷದ



ಹೈಡಾ ಜನಾಂಗದ ಯೋಧ

ಬಾಲಕರನ್ನು ದಿನವಿಡೀ ಬತ್ತಲಾಗಿ ಮೈಕೊರೆಯುವ ಹಿಮಪ್ರದೇಶದಲ್ಲಿ ಆಡ್ಡಾಡಲು ಬಿಡುತ್ತಿದ್ದರು. ಹಿಮದಲ್ಲಿ, ಪ್ರತಿಕೂಲ ಹವೆಯಲ್ಲಿ, ತಣ್ಣೀರಿನಲ್ಲಿ ತಾಸುಗಟ್ಟಳೆ ಹೊತ್ತು ಜೀವಿಸುವ ಸಾಮರ್ಥ್ಯ ರೂಢಿಸಿಕಂಡ ಬಳಿಕ, ಬಾಲಕ ಪ್ರಾಯಪ್ರಬುದ್ಧನಾಗುತ್ತಿದ್ದ.

## ಮಕ್ಕಳ ಮಂಟಪ



ಹೈಡಾ ಇಂಡಿಯನರ ಮನೆಯ ವಿನ್ಯಾಸ

ಹೈಡಾ ಜನಾಂಗದ ಯುವಕರ ನಿಜವಾದ ಸತ್ವಪರೀಕ್ಷೆ ಅವರು 13ರ ಹರೆಯಕ್ಕೆ ತಲುಪಿದಾಗ ನಡೆಯುತ್ತಿತ್ತು. ಈ ವಯಸ್ಸಿನಲ್ಲಿ ಅವರಿಗೆ ಯುದ್ಧಕಲೆಗಳಲ್ಲಿ ತರಬೇತಿ ನೀಡುತ್ತಾರೆ.ಹದಿಮೂರರ ಹರೆಯದಲ್ಲಿ ಹೈಡಾ ಇಂಡಿಯನ್ ಜನಾಂಗದ ಯುವಕನನ್ನು ರಹಸ್ಯ ಯೋಧರ ಸಂಘಕ್ಕೆ ಸೇರಿಸುತ್ತಾರೆ. ಅನಂತರ ಅವನ ದೇಹದ ಮೇಲೆಲ್ಲಾ ಹಚ್ಚೆಹಾಕುತ್ತಾರೆ. ಈ ಹಚ್ಚೆ ಹಾಕುವ ಕಾರ್ಯ ಅತ್ಯಂತ ಯಾತನಾಮಯವೂ ಕ್ರೂರವೂ ಆಗಿರುತ್ತಿತ್ತು ಕೆಲವರು ಯಾತನೆ ಸಹಿಸಲಾರದೆ ಸೋಂಕಿನಿಂದ ಸಾಯುತ್ತಿದ್ದರು. ಈ ಹಚ್ಚೆ ಹಾಕುವ ಕಾರ್ಯ ಹೈಡಾ ಜನಾಂಗದ ಯುವಕ ಸಮರ್ಥಯೋಧನಾಗಿದ್ದಾನೆ ಎಂಬುದನ್ನು ಮಾನ್ಯ ಮಾಡುವ ಸಂಕೇತವಾಗಿದ್ದಿತು. ತಿಮಿಂಗಿಲಗಳ ಮೂಳೆಯಿಂದ ತಯಾರಿಸಿದ ಆಯುಧಗಳು, ಚೂಪಾದ ಕಲ್ಲಿನ ಮೊನೆಯ ಆಯುಧಗಳು, ಕಲ್ಲಿನಿಂದ ತಯಾರಿಸಿದ ಹರಿತ ಚಾಕುಗಳು ಮುಂತಾದ ವಿವಿಧ ಆಯುಧಗಳನ್ನು ಹೈಡಾ ಇಂಡಿಯನರು ಬಳಸುತ್ತಿದ್ದರು.

ಬೃಹದಾಕಾರದ ದೋಣಿಗಳ ರಚನೆಯಲ್ಲಿ ಹೈಡಾ ಇಂಡಿಯನರು ಎತ್ತಿದ ಕೈ. ಅವರ ದೋಣಿಗಳು ಏಕಕಾಲದಲ್ಲಿ 150 ಮಂದಿ ಕುಳಿತು ಪ್ರಯಾಣಿಸುವಷ್ಟು ವಿಶಾಲವಾಗಿದ್ದುವು. ಹೈಡಾ ಯೋಧರು ಆಕ್ರಮಣ ಕಾರ್ಯಾಚರಣೆಗಳನ್ನು ಮುಗಿಸಿ, ಹೋರಾಟದಲ್ಲಿ ವಿಜೇತರಾಗಿ ತಮ್ಮ ವಾಸಸ್ಥಾನಕ್ಕೆ ಹಿಂತಿರುಗಿದಾಗ ಅವರ ವಿಜಯೋತ್ಸವವನ್ನು ಆಚರಿಸುವ ವೈಖರಿ ಎದೆ ನಡುಗಿಸುವಂತೆ ಭೀಕರ ಸ್ವರೂಪದ್ದಾಗಿರುತ್ತಿತ್ತು.

ವಿಜಯೋತ್ಸವ ಆಚರಿಸುವ ಸ್ಥಳದಲ್ಲಿ ಆರು ಅಡಿ ಆಳದ ತಗ್ಗನ್ನು ಅಗೆದು ಅದರಲ್ಲಿ ಗುಲಾಮನೊಬ್ಬನನ್ನು ಕೈ ಕಾಲು ಕಟ್ಟಿ ಮಲಗಿಸುತ್ತಿದ್ದರು. ಸಜೀವ ಸಮಾಧಿ ಹೊಂದಿದ ಗುಲಾಮನ ದೇಹದ ಮೇಲೆ ವಿಜಯ ಸ್ತಂಭವನ್ನು ನೆಡುತ್ತಿದ್ದರು. ಇದು ಹೈಡಾ ಜನಾಂಗದ ಮಹಾಯೋಧರ ವಿಜಯ ಸ್ಮಾರಕವಾಗಿತ್ತು.

ಕೆನಡಾದ ಕ್ವೀನ್ಸ್ ಚಾರ್ಲೋಟೆ ದ್ವೀಪಕ್ಕೆ ಬಿಳಿಯರ ಆಕ್ರಮಣ ಮುಂದುವರಿದಂತೆ ಹೈಡಾ ಜನಾಂಗದ ವಿನಾಶ ಆರಂಭವಾಯಿತು. ಮದ್ದುಗುಂಡುಗಳು, ವಿಸ್ಕಿಯ ಆಮಿಷ ತೋರಿಸಿ ಹೈಡಾ ಜನಾಂಗದವರ ಬಳಿ ಇದ್ದ ಅಮೂಲ್ಯ ವಸ್ತುಗಳನ್ನು ಬಿಳಿಯರು ದೋಚಿಕೊಳ್ಳಲು ಆರಂಭಿಸಿದರು. ಇದರೊಂದಿಗೆ ವ್ಯಾಪಕ ಪ್ರಮಾಣದಲ್ಲಿ ಹರಡಿದ ಸಿಡುಬು ವ್ಯಾಧಿಯೂ ಹೈಡಾ ಜನಾಂಗದ ಮೇಲೆ ಸಾವಿನ ಬಲೆ ಬೀಸಿತು. ಅವರ ಜನಸಂಖ್ಯೆ ಒಂದು ಲಕ್ಷದಷ್ಟಿದ್ದುದು, 600 ಕ್ಕೆ ಕುಸಿಯಿತು. ಜಗತ್ತಿನ ಈ ಅಪರೂಪದ ಆದಿವಾಸಿ ಜನಾಂಗ ನಿಧಾನವಾಗಿ ಕೊನೆಯುಸಿರೆಳೆಯಿತು.

-ಸುಮ

ಮಕ್ಕಳ ಮಂಟಪ

ಈ ಬಗ್ಗೆ ನಿಮಗೆ ಗೊತ್ತಿದೆಯೆ?

# ಸಾಲೊಮನ್ ದ್ವೀಪಗಳು

ಸಾಲೋಮನ್ ದ್ವೀಪಗಳು ಪೆಸಿಫಿಕ್ ಮಹಾ ಸಾಗರದ ದಕ್ಷಿಣದಲ್ಲಿ ಆಸ್ಟ್ರೇಲಿಯಾದ ಈಶಾನ್ಯದಲ್ಲಿದೆ. ನೂರಾರು ಚಿಕ್ಕಪುಟ್ಟ ದ್ವೀಪಗಳ ಒಂದು ಸಮುಚ್ಚಯ ಈ ಸಾಲೊಮನ್ ದ್ವೀಪಗಳು. ಗುಡಾಲ್ ಕೆನಾಲ್, ಮಲೈಟಾ, ನ್ಯೂಜಾರ್ಜಿಯ , ಸ್ಯಾನ್ ಕ್ರಿಸ್ಟೊಬಲ್, ಸಾಂತ ಇಸಬೆಲ್, ಛಾಯ್ ಸಿಯಲ್ ಈ ಆರು ಮುಖ್ಯದ್ವೀಪಗಳು ಸಾಲೊಮನ್ ದ್ವೀಪಗಳಲ್ಲಿ ಒಳಗೊಂಡಿವೆ.

ಸುಮಾರು ಆರು ಸಾವಿರ ವರ್ಷಗಳ ಹಿಂದೆ ಪಾಪುವ ನ್ಯೂಗಿನಿ ಜನತೆ ಸಾಲೋಮನ್ ದ್ವೀಪಗಳಲ್ಲಿನೆಲಸಿದ್ದರೆಂದು ಪ್ರತೀತಿ ಇದೆ. 1567 ರಲ್ಲಿ ಆಲ್ಬರೊ ಡಿ. ಮಂಡೋನ ಎಂಬ ಐರೋಪ್ಯ ಅನ್ವೇಷಕನಿಂದ ಈ ದ್ವೀಪಗಳು ಪತ್ತೆಯಾದುವು. ಸುಮಾರು 200 ವರ್ಷಗಳ ಕಾಲ ಈ ದ್ವೀಪದಲ್ಲಿ ಜನ ವಸತಿಯೇ ಇರಲಿಲ್ಲ.

1880 ರಲ್ಲಿ ಬ್ರಿಟನ್ ಮತ್ತು ಜರ್ಮನಿ ಈ ದ್ವೀಪಗಳನ್ನು ಹಂಚಿಕೊಂಡವು. 1890 ರಲ್ಲಿ ಸಾಲೊಮನ್ ದ್ವೀಪ ಸಮುದಾಯದ ಬಹುಭಾಗ ಬ್ರಿಟನ್‌ನ ಆಡಳಿತಕ್ಕೊಳಪಟ್ಟಿತು. ಎರಡನೇ ಮಹಾಯುದ್ಧದ ಕಾಲದಲ್ಲಿ ಈ ದ್ವೀಪಸ್ತೋಮ ಜಪಾನಿಯರ ಕೈ ವಶವಾಯಿತು. ದ್ವೀಪದ ಸ್ವಾಧೀನತೆಗಾಗಿ ಅಮೆರಿಕಾ ಮತ್ತು ಜಪಾನ್ ಮಧ್ಯೆ ಭೀಷಣ ಕದನಗಳು ನಡೆದವು.

1978 ಜುಲೈ 7ರಂದು ಸಾಲೊಮನ್ ದ್ವೀಪಗಳು ಸ್ವತಂತ್ರ ರಾಷ್ಟ್ರವೆನಿಸಿದುವು. ಸಂವೈಧಾನಿಕ ರಾಜ ಪ್ರಭುತ್ವ ಸ್ಥಾಪನೆಯಾಯಿತು.




ಬೆಟ್ಟಗುಡ್ಡಗಳು, ನದಿ ಕಣಿವೆಗಳು, ಹವಳದ ದಿಬ್ಬಗಳಿಂದ ಕೂಡಿದ ಸಾಲೊಮನ್ ದ್ವೀಪಗಳು 28, 370 ಚ.ಕಿ.ಮೀ. ವಿಸ್ತಾರವಾಗಿದೆ. ಬೇಸಾಯ, ಮೀನುಗಾರಿಕೆ, ಗಣಿಗಾರಿಕೆ ಜನರ ಮುಖ್ಯ ವೃತ್ತಿಗಳು. ಹೋನಿಯಾರ ನಗರ ಸಾಲೊಮನ್ ದ್ವೀಪಗಳ ರಾಜಧಾನಿಯಾಗಿದೆ. ಇಲ್ಲಿನ ನಾಣ್ಯ ಸಾಲೊಮನ್ ಐಲ್ಯಾಂಡ್ ಡಾಲರ್ ಎಂದು ಹೆಸರಾಗಿದೆ. ಸಾಲೊಮನ್ ದ್ವೀಪ ಸಮುದಾಯದ ಸಾಂತಾಕ್ರೂಜ್, ಅನಂಟೆ, ಟಕೋಪಿಯಾ ದ್ವೀಪಗಳಲ್ಲಿ ಜ್ವಾಲಾಮುಖಿ ಪರ್ವತಗಳೂ ಇದೆ.

**(ಕೃಪೆ: ದೇಶ ವಿದೇಶಗಳ ಪರಿಚಯ–ನವಕರ್ನಾಟಕ ಪ್ರಕಾಶನ, ಬೆಂಗಳೂರು)**

ಆರೋಗ್ಯದಂಗಳ

# ರುದ್ರ ಸೂಕ್ತದಲ್ಲಿ ಆಯುರ್ವೇದ ಚಿಕಿತ್ಸೆ



ಟಿ. ಬಿ. ಗುರುನಂಜಯ್ಯ

# ರುದ್ರ ಸೂಕ್ತದಲ್ಲಿ ಆಯುರ್ವೇದ ಚಿಕಿತ್ಸೆಗಳು

ಯಜುರ್ವೇದದಲ್ಲಿ ರುದ್ರಾಧ್ಯಾಯವು ಪ್ರಸಿದ್ಧವಾಗಿದೆ. ಶ್ರೀ ರುದ್ರ ಮಹಾ ಪ್ರಶ್ನ-ನಮಕ-ಚಮಕಗಳು ಮಹಾಶಿವನನ್ನು ಒಲಿಸಿಕೊಳ್ಳಲು, ಪೂರಕವಾಗಿರುವ ಸು-ಸ್ವರ ವೇದಮಂತ್ರಗಳಾಗಿವೆ. ಶ್ರೀ ರುದ್ರವು ತೈತ್ತಿರೀಯ ಸಂಹಿತೆಯ ನಾಲ್ಕನೆ ಕಾಂಡ, ಐದನೆಯ ಪ್ರಪಾಠಕದಲ್ಲಿದೆ. ಯಜುರ್ವೇದದ 16ನೇ ಅಧ್ಯಾಯದಲ್ಲಿ 'ನಮಕಗಳು' ಮತ್ತು 18 ರಿಂದ 29ನೇ ಅಧ್ಯಾಯಗಳಲ್ಲಿ 'ಚಮಕ'ಗಳು ಕಾಣಬರುತ್ತವೆ. "ನಮಸ್ತೇ ರುದ್ರಮನ್ಯೇವ..." ಎಂಬುದರಿಂದ.. "ಜಂಬೇದ ಧಾಮಿ" ಎಂಬುವವರೆಗಿನ ಹನ್ನೊಂದು ಅನುವಾಕಗಳಲ್ಲಿ "ನಮಃ" ಎಂದು ಪದೇ ಪದೇ ಬರುವದರಿಂದ ಅದು "ನಮಕ" ವೆಂದೂ, "ಆಗ್ನಾವಿಷ್ಣು....." ಎಂಬುದರಿಂದ... ವಿತರೋಽನುಮದಂತೆ" ಎಂಬುವವರೆಗಿನ ಹನ್ನೊಂದು ಅನುವಾಕಗಳಲ್ಲಿ "ಚಮೆ" ಎಂದು ಮತ್ತೆ ಮತ್ತೆ ಪ್ರಯೋಗವಾಗಿರುವದರಿಂದ ಅದು "ಚಮಕ" ವೆಂದೂ ಕರೆಯಲ್ಪಟ್ಟಿದೆ.

ವೇದಗಳೆಂಬ ಸಮುದ್ರವನ್ನು ಮಂಥನ ಮಾಡಿದಾಗ, ಉಕ್ಕಿ ಬಂದ ಅಮೃತ ಬಿಂದುಗಳೇ ಶ್ರೀರುದ್ರ ನಮಕ-ಚಮಕಗಳು. ಮಾರಕವಾದುದನ್ನು ತಾರಕವನ್ನಾಗಿ ಸುವುದೇ ಶ್ರೀ ರುದ್ರ ಸೂಕ್ತ ಪಠಣದ ಉದ್ದೇಶ. ನಮಕದ ಮೊದಲನೆಯ ಅನುವಾಕದಲ್ಲಿ ಶ್ರೀ ರುದ್ರನ ಅನುಗ್ರಹಕ್ಕಾಗಿ ನಮಸ್ಕಾರವು ಉಕ್ತವಾಗಿದೆ. ಎರಡರಿಂದ ನಾಲ್ಕನೆಯ ಅನುವಾಕ ಪೂರ್ತಿ ಪರಶಿವನ ಸರ್ವೇಶ್ವರತ್ವ, ಸರ್ವಾತ್ಮಕತ್ವ ಮತ್ತು ಸರ್ವಾಂತರ್ಯಾಮಿತ್ವ ಪ್ರತಿಪಾದಕವಾದ ಊರ್ಧ್ವ ಮತ್ತು ಅದೋಭುವನ ರಕ್ಷಕರಾದ ಇಪ್ಪತ್ತು ಮಂದಿ ರುದ್ರರು ಮತ್ತು ಮಧ್ಯಭುವನ ರಕ್ಷಕರಾದ ಶಿವನ ಪಂಚವಿಂಶತಿ (25) ಲೀಲಾ ಮೂರ್ತಿಗಳನ್ನು, ಮುಂದೆ, ಐದನೆಯ ಅನುವಾಕದಿಂದ, ಒಂಭತ್ತನೆಯ ಅನುವಾಕ ಪೂರ್ತಿ ಇಂದ್ರಾದಿ ದಿಕ್ಪಾಲಕರಿಂದ ಪೂಜಿಸಲ್ಪಟ್ಟ ಒಟ್ಟು ಎಂಬತ್ತು ಮಂದಿ ರುದ್ರರನ್ನು ನಮಸ್ಕರಿಸುತ್ತಾನೆ. ತರುವಾಯ ಮುಂದಿನ ಎರಡು ಅನುವಾಕಗಳಲ್ಲಿ, ಭಕ್ತನ ಇಷ್ಟ ಪ್ರಾಪ್ತಿ, ಮತ್ತು ಅನಿಷ್ಟ ಪರಿಹಾರಕ್ಕಾಗಿ ಪರಶಿವನ ಅಂಶೀ ಭೂತರಾದ ಶತರುದ್ರರನ್ನು ಸ್ತುತಿಸಲಾಗಿದೆ. ಆದುದರಿಂದಲೇ ಇದಕ್ಕೆ ಶತರುದ್ರೀಯವೆಂದು ವಿದ್ವಾಂಸರು ತಿಳಿಯಪಡಿಸಿದ್ದಾರೆ.

# ರುದ್ರಾಧ್ಯಯನದ ಮಹತ್ವ

"ಪುರುಷ ಏವೇದಂ ಸರ್ವಂ" ಎಂದು ಪುರುಷ ಸೂಕ್ತವು ಸೂಚಿಸಿದರೆ, ಉಪನಿಷತ್ತುಗಳು ನೇಹನಾನಾಸ್ತಿ ಕಿಂಚನ 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಮುಂತಾಗಿ ಹೇಳುತ್ತವೆ. ಅಂದರೆ, ಒಬ್ಬನಿಂದಲೇ ಈ ಪಂಚಭೂತಗಳೆಲ್ಲವೂ ರೂಪುಗೊಳ್ಳುತ್ತವೆ. ಅವೆಲ್ಲವೂ, ಅವನಿಂದಲೇ ಬಾಳುತ್ತದೆ ಹಾಗೂ ಬೆಳೆಯುತ್ತವೆ. ಕೊನೆಗೊಮ್ಮೆ ಅವನಿಂದಲೇ, ಅವನಲ್ಲಿಯೇ ಅವೆಲ್ಲವೂ ಮರೆಯಾಗುತ್ತವೆ. ಅವನೇ ಬ್ರಹ್ಮ. ಇಲ್ಲಿಯ ಬ್ರಹ್ಮ ಎಂದರೆ "ರುದ್ರ" ಎಂದೂ ಅವನಿಗೆ ಹೇಳಿದೆ. 'ರುದ್ರ' ಎಂಬ ಎರಡು ಅಕ್ಷರಗಳ ಪೂರ್ಣಶಬ್ದವೂ, ಅದರ ಅರ್ಥವೂ "ಶಬ್ದೈಕ ದೇಶಗ್ರಹಣಿ ಶಬ್ದಾರ್ಥಗ್ರಹಣಂ" ಎಂಬ ಸೂತ್ರದಂತೆ, 'ರು' ರುದಂ ರೋದನವನ್ನು, 'ದ್ರ' ದ್ರಾವಯತಿ ಕರಗಿಸುತ್ತಾನೆ. ದ್ರವೀಕರಿಸಿ, ಕರಗಿಸಿ, ಕಡಿಮೆ ಮಾಡುತ್ತಾನೆ. ಅಳುವಿನಿಂದ, ಅಳಿವುದನ್ನು, ಉಳಿಸಿ ಬಾಳಿಸುವವನೇ "ರುದ್ರ". ಒಟ್ಟಿನಲ್ಲಿ ರುದಂ ದ್ರಾವಯತೀತಿ ರುದ್ರಃ ಎಂಬುದು ಸುಸ್ಪಷ್ಟ ಶಿವ ಅಭಿಷೇಕ ಪ್ರಿಯ. ಅಭಿಷೇಕವು ರುದ್ರಾಧ್ಯಾಯ ಪಠಣ ಪೂರ್ವಕವಾಗಿ ನಡೆಯುವುದು ಮತ್ತೂ ವಿಶೇಷ.

ರುದ್ರಾಧ್ಯಾಯನ ಮಾಡುತ್ತಾ, ತನ್ನನ್ನು ಪೂಜಿಸುವ ಭಕ್ತರ ರುದಂ (ಆಕ್ರಂದನವನ್ನು), ದ್ರವೀಕರಿಸಿ, ಅಂದರೆ ಉಪಾಸಕರ ರೋದನವನ್ನು ನಿವಾರಿಸುವ ಸಮರ್ಥ ದೇವನೆ ರುದ್ರ. ಅವನೇ ಶಿವನು. ಶಿವನೇ-ಅವನು. ಅವನೇ ಸಾರ್ವತ್ರಿಕವಾಗಿಯೂ ರೋದನವನ್ನು ನಿರೋಧಿಸಲು ಸರ್ವ ಸಮರ್ಥನಾದ ರುದ್ರನು.

ರುದ್ರನು ಸ್ತೇನಾನಾಂಪತಿಯೂ, ತಸ್ಕರಾಣಾಂ ಪತಿಯೂ ನಮಕದಲ್ಲಿ ಆಗಿರುವಂತೆ, ಅವನೇ ಔಷಧೀನಾಂ ಪತಿಯೂ ಸತ್ವನಾಂ ಪತಿಯೂ ಆಗಿದ್ದಾನೆ. ಭಕ್ತರ ಎಲ್ಲಾ ಪಾಪ ರೋಗಾದಿಗಳನ್ನೂ ಮತ್ತು ಅಪಮೃತ್ಯು ಭಯವನ್ನೂ ಹೋಗಲಾಡಿಸುತ್ತಾನೆಂಬುದು ಎಲ್ಲರ ದೃಢ ನಂಬಿಕೆ.

ಶ್ರೀ ರುದ್ರದ ಒಂದೊಂದು ಋಕ್ಕಿಗೂ, ಒಬ್ಬೊಬ್ಬ ಋಷಿಗಳು ನಿರ್ಮಾಪಕರಾಗಿದ್ದಾರೆ. ಆದರೂ, ಮುಖ್ಯವಾಗಿ ಇಬ್ಬರು ಋಷಿಗಳ ಹೆಸರುಗಳು ಉಕ್ತವಾಗಿವೆ. ಒಬ್ಬರ ಹೆಸರು 'ಅಘೋರ ಋಷಿ' ಅಂದರೆ ಶಿವನು. ಇನ್ನೊಬ್ಬರ ಹೆಸರು "ಪರಮೇಷ್ಠಿ ಋಷಿ". ಅಂದರೆ ಬ್ರಹ್ಮ ಇಲ್ಲಿ ಶಿವನು ನಿರ್ಮಾಪಕನು ಮತ್ತು ಬ್ರಹ್ಮನು ಪ್ರಚಾರಕನು. ಶ್ರೀ ರುದ್ರಕ್ಕೆ 'ಅನುಷ್ಟುಪ್ ಛಂದಸ್ಸು ಮತ್ತು ಗಾಯತ್ರಿ ಛಂದಸ್ಸು ಎಂಬ ಎರಡು ರೀತಿಯ ಛಂದಸ್ಸುಗಳಿವೆ. ಶ್ರೀ ರುದ್ರಸೂಕ್ತಕ್ಕೆ ಶ್ರೀ ರುದ್ರನೇ ಆದಿ ದೇವನು. ಇವನು ಸಂಕರ್ಷಣಾಮೂರ್ತಿ. ಇವನೇ ಪರಮ ಪುರುಷನು. ಇವೆಲ್ಲವೂ, ಶ್ರೀ ರುದ್ರ ಸೂಕ್ತದ ಸಂಕಲ್ಪ ಮಂತ್ರದಲ್ಲಿ ವ್ಯಕ್ತವಾಗಿವೆ.

ವೇದ ಮಂತ್ರಗಳಿಗೆ ಅರ್ಥ ಬರೆಯುವುದು ಸುಲಭವಲ್ಲ. ಕೇವಲ ಪಾಂಡಿತ್ಯ ಬಲದಿಂದ ವೇದಗಳಿಗೆ ವ್ಯಾಖ್ಯಾನ ನೀಡುವುದು ಅಪಾಯಕರ. ಇದಕ್ಕೆ ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯ, ಇತಿಹಾಸ ಪುರಾಣಗಳ ಬಗ್ಗೆ ಆಳವಾದ ಪರಿಶ್ರಮವಿರಬೇಕು.

ವೇದ-ವೇದಾಂಗ ಪಾರಂಗತರಾದ, ಕೆಳಕಂಡ ಪೂರ್ವಾಚಾರ್ಯರು ಶ್ರೀ ರುದ್ರ ಪ್ರಶ್ನವನ್ನು ಅರ್ಥೈಸಿ, ಭಾಷ್ಯ ನೀಡಿದ್ದಾರೆ.

1) ಶ್ರೀ ಶಂಕರಾಚಾರ್ಯ ವಿರಚಿತ- ಶ್ರೀರುದ್ರಭಾಷ್ಯ

2) ಶ್ರೀ ಸಾಯಣ ಭಾಷ್ಯ

3) ಶ್ರೀ ಭಟ್ಟಬಾಸ್ಕರ ಭಾಷ್ಯ

4) ಶ್ರೀ ವಿಷ್ಣುಸೂರಿಕೃತ ಶ್ರೀ ರುದ್ರಭಾಷ್ಯ (ಆನಂದಾಶ್ರಮ-ಪೂನಾ)

5) ಶ್ರೀ ಹರದತ್ತಾಚಾರ್ಯರ ಭಾಷ್ಯ

6) ಶ್ರೀ ಸೋಸಲೆ ರೇವಣಾರಾಧ್ಯರು

7) ಶ್ರೀ ಧಾರವಾಡದ ಚಿತ್ರಹಳ್ಳಿ ವೇ. ಚಂದ್ರಶೇಖರ ಶಾಸ್ತ್ರಿಗಳ ರುದ್ರ ಟೀಕೆ.

ಆದರೆ, ಇಪ್ಪತ್ತನೇ ಶತಮಾನದ ಅಂತ್ಯದ ವರ್ಷಗಳಲ್ಲಿ ದೆಹಲಿಯಲ್ಲಿರುವ ಕೆ.ಟಿ. ಶುಭಕರನ್ ಎಂಬ ವಿದ್ವಾಂಸರು ಶ್ರೀ ರುದ್ರ ನಮಕಗಳಿಗೆ ವಿಶೇಷ ಅರ್ಥ ಹಾಗೂ ವ್ಯಾಖ್ಯಾನ ನೀಡಿ, ಆ ಮಂತ್ರಗಳಲ್ಲಿ, ಮಾನವನು ಅನುಭವಿಸುತ್ತಿರುವ ನಾನಾರೋಗಗಳನ್ನು ಗುರುತಿಸಿದ್ದಾರೆ. ಅವುಗಳಿಗೆ ಆಯುರ್ವೇದ ಗಿಡ ಮೂಲಿಕೆಗಳಿಂದ ಔಷಧಿ ತಯಾರಿಕೆ ಕ್ರಮ, ಉಪಯೋಗ ಹಾಗೂ ಅವು ಹೇಗೆ ವಾಸಿಯಾಗುತ್ತವೆ ಎಂಬುದನ್ನು ವಿವರವಾಗಿ ತಿಳಿಸಿದ್ದಾರೆ. ಇಂಥ ಒಂದು ಪರಿಶ್ರಮ, ನೊಂದ ರೋಗಿಗಳಿಗೆ ವರದಾನವೇ ಸರಿ.

**1) ಶ್ರೀ ರುದ್ರ ಮೂರನೆ ನಮದಲ್ಲಿ, ಆಸ್ತಮಾ ಮತ್ತು ಹೃದಯರೋಗಗಳಿಗೆ ಆಯುರ್ವೇದ ಚಿಕಿತ್ಸೆ. ಮಂತ್ರ-**

**ಯಾತೇ ರುದ್ರ ಶಿವಾತನೂರ ಘೋರಽ ಪಾಪಕಾಶಿನೀ|**
**ತಯಾನಸ್ತನು ವಾ ಶಂತಮಯಾಗಿರೀಶಂ ತಾ ಭಿ ಚಾಕಶೀಹಿ||**

ಸಾಮಾನ್ಯ ಅರ್ಥದಲ್ಲಿ, ಭಕ್ತನು ಮೋಕ್ಷಕ್ಕೆ ಕಾರಣನಾದ ಶಿವಜ್ಞಾನವನ್ನು ಇಲ್ಲಿ ಬೇಡುತ್ತಾನೆ.

ಹೇ ರುದ್ರನೇ ನೀನು ವಿಷಮತಾರ ಹಿತ, ಶಾಂತ-ಮಂಗಳ ರೂಪನಾಗಿ, ಅತ್ಯಂತ ಸೌಮ್ಯ ರೂಪದ ಪಾಪಫಲ ಸಹ ಕೊಡದೆ, ಪುಣ್ಯ ಫಲಗಳನ್ನೇ ಅನುಗ್ರಹಿಸತಕ್ಕಂತವನು. ನಿನ್ನ ಸುಖ-ಸಂಪೂರ್ಣದಿಂದ, ನಿನ್ನನ್ನು ಜಪಿಸುವವರಿಗೆ, ಇಹ-ಪರ ಸೌಖ್ಯವನ್ನು ದಯಪಾಲಿಸುವವನೇ ನಮ್ಮನ್ನು ಅನುಗ್ರಹಿಸು.

ಮತ್ತೊಂದು ಅರ್ಥದಲ್ಲಿ (ಯಾ) ಮತ್ತು (ತೇ) ನಿನ್ನ (ರುದ್ರ-ಶಿವಾ) ರುದ್ರ ಅರ್ಧಾಂಗಿಯಾದ ಸರ್ವಮಂಗಳೆಯೇ, (ತನೂರ) ಸೌಂದರ್ಯಭರಿತಳೇ (ಘೋರ) ಅತ್ಯಂತ, (ಪಾಪ) ಪಾಪ (ನಾಶಿನೀ) ನಾಶ ಪಡಿಸುವವಳೇ, (ತಯಾ) ನಿನ್ನ (ನಸ್ತ-ನಥ), ಮೂಗುಬೊಟ್ಟು (ತನ್ವಾ) ಅತಿಸುಂದರವಾದ (ಶಾಂತಮಯಾ) ಶಾಂತಮನಸ್ಕಳೇ, (ಗಿರಿಶಂತಾಭಿ), ಉದಾರಮನಸ್ಸಿನಿಂದ, (ಚಾಕಶೀಹಿ) ಅನುಗ್ರಹಿಸು.

**ಭಾವಾರ್ಥ:** ಓ ರುದ್ರನೇ ನಿನ್ನ ಅತ್ಯಂತ ಶಾಂತ ಹಾಗೂ ಪವಿತ್ರ ರೂಪದರ್ಶನ ಮಾತ್ರದಿಂದಲೇ ನಮ್ಮ ಪಾಪಗಳೆಲ್ಲವೂ ನಾಶವಾಗಿ ಬಿಡುತ್ತವೆ. ಓ ಜಗನ್ಮಾತೆ ಹಾಗೂ ಸರ್ವಾಭರಣ ಸುಂದರಿಯಾದ ಸರ್ವಮಂಗಳೆಯೇ, ನಿನ್ನ ಕರುಣಾಮಯ ದೃಷ್ಟಿ ನಮ್ಮ ಮೇಲೆ,

ಅವಲೋಕಿತವಾಗಲಿ.

ಇಲ್ಲಿ ಭಕ್ತನು, ಶಿವ-ಶಿವೆ (ಶಿವಾ) ಯರನ್ನು, ಒಂದೇ ರೂಪದಲ್ಲಿ ಆಹ್ವಾನಿಸುತ್ತಾನೆ. ಏಕೆಂದರೆ, ಶಿವೇ (ಶಿವಾ) ಇಲ್ಲದ ಶಿವನಿಲ್ಲ. ಹಾಗೂ ಶಕ್ತಿಯನ್ನು, ಶಿವನಿಂದ ಬೇರ್ಪಡಿಸಲು ಸಾಧ್ಯವೇ ಇಲ್ಲ. ಈ ಮಂತ್ರದಲ್ಲಿ ಭಕ್ತ ಪರಶಿವನ ಶಕ್ತಿರೂಪಿಯಾದ, ಪಾರ್ವತಿಗೂ ಮಹತ್ವ ನೀಡಿದ್ದಾನೆಂಬುದನ್ನು ಅರಿಯಬಹುದು.

## ಚಿಕಿತ್ಸೆಗಳು

ಅಸ್ತಮಾ ಮತ್ತು ಹೃದಯ ರೋಗಿಗಳಿಗೆ

ಗೂಢಾರ್ಥದಲ್ಲಿ ಔಷಧೀಯ ಉಪಯೋಗ

(ಯಾತಾ) ಎದೆ, (ರುದ್ರ) ಅಗ್ನಿ (ಶಿವಾ) ಕೆಳಕಂಡ ಗಿಡ ಮೂಲಿಕೆಗಳು

1) ಶಮೀ 2) ಹೇಡ (ಹರತು) (ಚೆಬುಲ).

3) ಜಾತಿ ಮಲ್ಲಿಗೆ, 4) ಹಳದಿ (ಅರಿಶಿಣ) 5) ದರ್ಭೆ (ದೂರ್ವಾ) (ಬಿಪಿನ್ನಾಕಟ). 6) ಪಿಪ್ಪಲಿ ಬೇರು (ಪೀ ಪಲ್ ತಿಪ್ಪಲಿ) 7) ಗೋರೋಚನ. (ತನೂರ) ನಿನ್ನ ದೇಹ (ಅಘೋರಾನ್ವ) ಕೃಷ್ಣಪಕ್ಷದ ಚತುರ್ದಶಿದಿನ (ಪಾಪಕಾಶಿನಿ) ರೋಗನಿವಾರಕ (ತಯಾ) ನಿನ್ನ (ನಸ್ತ) ಮೂಗು (ಸ್ಥನ) ಎದೆ (ಶಂತಮಯಾ) ಹಚ್ಚು (ಸವರಿ ಶಮನಗೊಳಿಸು) ಅಥವಾ ಉಸಿರು ಕಟ್ಟುವ (ಗಿರಿಶಂತ) ಎದೆಯನ್ನು ಕ್ರಮಬದ್ಧವಾಗಿ ತಿದಿಯಂತೆ ಒತ್ತುವುದು. (ಎದೆಯನ್ನು ಒತ್ತಿದಾಗ ಶ್ವಾಸಕೋಶದಿಂದ ಗಾಳಿ ಹೊರಗೆ ಹೋಗುತ್ತದೆ (ರೇಚಕ) ಹಾಗೂ ಕೈಗಳನ್ನು ಸಡಿಲಿಸಿದಾಗ ಹೊರಗಿನ ಶುಭ್ರಗಾಳಿ, ಶ್ವಾಸಕೋಶಕ್ಕೆ ಹೋಗುತ್ತದೆ (ಪೂರಕ) (ಅಭಿ) ಅದರಂತೆ (ಚ) ಅಲ್ಲದೆ (ಅಶ್) ತಿನ್ನುವುದು (ಇಹಿ) ಪ್ರಯತ್ನಿಸು.

ಮೇಲೆ ಕಾಣಸಿರುವ ಗಿಡಮೂಲಿಕೆಗಳನ್ನು ಕೆಳಕಂಡಂತೆ ಆಯ್ದುಕೊಳ್ಳಬೇಕು.

1) ಶಮೀ 10 ದಳಗಳು 2) ಹೇಡಾ ಪುಡಿ 20 ಗ್ರಾಂ 3) ಜಾಜಿ 30 ಎಲೆಗಳು 4) ಅರಿಶಿಣ ಬೇರು 5) ದರ್ಭೆ-21 6) ಪಿಪ್ಪಾಲಿ ಬೇರು-10 ಗ್ರಾಂ 7) ಗೋರೋಚನ-2 ಗ್ರಾಂ 8) ನೀರು 500 ಮೀ. ಲೀ.

ಈ ಮೂಲ ವಸ್ತುಗಳನ್ನು ಸೇರಿಸಿ, 200 ಮಿ.ಲೀ. ಆಗುವತನಕ ಚೆನ್ನಾಗಿ ಕುದಿಸಬೇಕು. ನಂತರ ಶೋಧಿಸಬೇಕು. ಇದೇ ಉಪಯೋಗಿಸಲು ತಯಾರಾದ ಸಿದ್ಧೌಷಧ.

ಉಪಯೋಗಕ್ರಮ: ಹೀಗೆ ತಯಾರಾದ ಔಷಧಿಯನ್ನು ರೋಗಿಯ (ಪುಪ್ಪುಸ ಹಾಗೂ) ಎದೆ (ಮೇಲೆ ಭಾಗ ಮತ್ತು ಹೃದಯದ ಭಾಗದ ಮೇಲೆ) ಹಚ್ಚಬೇಕು. ನಂತರ ಬಲಗೈನಿಂದ ಆ ಭಾಗಗಳನ್ನು ಗಸಗಸನೆ ಬಿಸಿಯಾಗುವಂತೆ ಉಜ್ಜಬೇಕು. ನಂತರ ಶುಭ್ರ ಹತ್ತಿಯ ತುಂಡನ್ನು. ತಯಾರಿಸಿದ ಔಷಧಿಯಲ್ಲಿ ಅದ್ದಿ, ಅದನ್ನು ರೋಗಿಯ ಮೂಗಿನ ಹೊಳ್ಳೆಯೊಂದರಲ್ಲಿ ತುರುಕಿಡಬೇಕು. ರೋಗಿ ಅದರ ವಾಸನೆಯನ್ನು ಆಘ್ರಾಣಿಸಬೇಕು. ಎರಡೂ ಅಂಗೈಗಳನ್ನೂ ಉಪಯೋಗಿಸಿ ನಿಧಾನವಾಗಿ ಪುಪ್ಪುಸ ಭಾಗವನ್ನು ಒತ್ತುತ್ತಾ ಶ್ವಾಸಕೋಶದಿಂದ ಗಾಳಿ ಹೊರಕ್ಕೆ ಹೋಗುವಂತೆ (ರೇಚಕ) ಮಾಡುವುದು.

ಟಿಪ್ಪಣಿ 1) ಮಂತ್ರದಲ್ಲಿರುವ ಪದಗಳಿಗೆ ವಿಶೇಷಾರ್ಥ ಕಂಡುಕೊಂಡು, ಈ ಪರಿಹಾರ ಸೂಚಿಸಲಾಗಿದೆ. (ಯಾತಾ) ಎನ್ನುವ ಪದಕ್ಕೆ ಎದೆ ಪಕ್ಕೆಯಿಂದೂ (ನಸ್) ಮೂಗು, (ಸ್ಥನ) ಹೃದಯಭಾಗ (ಅಘೋರ) ಅಂದರೆ, ಅಮವಾಸ್ಯೆಯ ಮುಂದೆ ಅಸ್ತಮಾ ಹಾಗೂ ಹೃದಯರೋಗಗಳು ಉಲ್ಬಣಗೊಳ್ಳುತ್ತವೆ ಎಂಬುದು ತಿಳಿದ ವಿಷಯ. ಇದರಿಂದ ಅಸ್ತಮಾ ಮತ್ತು ಹೃದಯರೋಗವೆಂದು ತಿಳಿಯಲು ಆಧಾರವಾಗಿವೆ.

2) ರುದ್ರ ಅಂದರೆ ಇಲ್ಲಿ ಅಗ್ನಿ ಎಂದು ಅರ್ಥೈಸಿ, ಶಿವಾ ಎಂಬ ಪದ ಇರುವ ಕಾರಣ, ಮೇಲೆ ಕಾಣಿಸಿದ ಗಿಡಮೂಲಿಕೆಗಳನ್ನು ನೀರಿನಲ್ಲಿ ಸೇರಿಸಿ, ಕುದಿಸಿ, ಶುಭ್ರ ಬಟ್ಟೆಯಿಂದ ಶೋಧಿಸಿ ನಂತರ ಶಮನಕ್ಕಾಗಿ ಉಪಯೋಗಿಸಬೇಕೆಂದು ಅಭಿಪ್ರಾಯವಿದೆ.

3) ಮೇಲೆ ಹೇಳಿರುವ ನಮಕ ಮಂತ್ರವನ್ನು ಕನಿಷ್ಠ 40 ದಿನಗಳ ಕಾಲ (ಪ್ರಾತಃಕಾಲ ಔಷಧಿ ಉಪಚಾರದ ಸಂಗಡವೇ) ಪಠಣ ಮಾಡಬೇಕು. ದಿನಾ 11 ಸಾರಿಯಾದರೂ ಪುನರುಚ್ಚರಿಸಬೇಕು.

4) ಅರಿಶಿಣಪುಡಿಯನ್ನು ಬಿಸಿ ಹಾಲಿಗೆ ಸೇರಿಸಿ 21 ದಿನ ತಪ್ಪದೆ ಸೇವಿಸಬೇಕು.

5) ನಾಲ್ಕು ನಿಂಬೆ ಹಣ್ಣಿನ ಸಿಪ್ಪೆಯನ್ನು ಬೇರ್ಪಡಿಸಿ, ಅವುಗಳನ್ನು ಒಣಗಿಸಿ ಪುಡಿ ಮಾಡಿ. ಈ ತೆಳ್ಳನೆಯ ಪುಡಿಗೆ ಕೋಲ್ಬಾಸ್, ಅಜವಾನ ಮತ್ತು ಫಂಟೋಲ ಪುಡಿಗಳನ್ನು ಸೇರಿಸಿ ಈ ಮಿಶ್ರಣ ಪುಡಿಯನ್ನು ಒಂದು ಚಮಚದಷ್ಟನ್ನು ಬಾಯಲ್ಲಿಟ್ಟುಕೊಂಡು ಪೆಪ್ಪರ್ ಮಿಂಟ್‌ನಂತೆ ಚೀಪಬೇಕು.

6) ಔಷಧಿ ತಯಾರಿಕೆಯಲ್ಲಿ ವೈದ್ಯರ (ಆಯುರ್ವೇದ) ಸಲಹೆ ಪಡೆಯುವುದು ಸೂಕ್ತ.

**2) ಶ್ರೀ ರುದ್ರಪ್ರಶ್ನೆ ಪ್ರಥಮ ಅನುವಾಕದ ನಾಲ್ಕನೇ ಮಂತ್ರ ಅರ್ಶಾಸ್ ಅಥವಾ ಪೈಲ್ಸ್ (ಮೂಲವ್ಯಾಧಿ) ರೋಗಕ್ಕೆ ಆಯುರ್ವೇದ ಚಿಕಿತ್ಸೆ.**

**ಮಂತ್ರ-''ಯಾಮಿಷಂ ಗಿರಿಶಂತ ಹಸ್ತೆ ಭಿಭರ್ಷ್ಯಸ್ತವೇ**
**ಶಿವಾಂ ಗಿರಿತ್ರ ತಾಂ ಕುರು ಮಾಹಿಗಂ ಸಿ-**
**ಪುರುಷಂಜಗತ್''**

ಸಾಮಾನ್ಯ ಅರ್ಥದಲ್ಲಿ : (ಯಾಮಿಷ) ಯಾವ ಬಾಣವನ್ನು (ಹಸ್ತೇ) ಕೈಯಲ್ಲಿ (ಭಿಭರ್ಷ) ಹಿಡಿದಿರುವೆಯೋ, (ತಾಂ) ಆ ಬಾಣವನ್ನು (ಶಿವಾಂಕುರು) ಕಲ್ಯಾಣಕ್ಕಾಗಿ ಉಪಯೋಗಿಸು. (ಹೇ ಗಿರಿತ್ರ) ಉನ್ನತ ಮಂತ್ರ ರುದ್ರಪ್ರಶ್ನ, ಜಪಿಸುವವರರನ್ನು, (ತ್ರ) ರಕ್ಷಿಸುವವನೆ (ನಃ) ನಮ್ಮ (ಪುರುಷಂ ಜಗತ್) ಮಾನವಕುಲವನ್ನು (ಮಾ ಹಿಂಸಿ) ಹಿಂಸಿಸಬೇಡ.

ಭಾವಾರ್ಥ: ಜ್ಞಾನವೆಂಬ ಕೈಲಾಸದಲ್ಲಿದ್ದು ಭಕ್ತರಿಗೆ ಕಲ್ಯಾಣವನ್ನುಂಟು ಮಾಡುವ ಸರ್ವಜ್ಞನಾದ ಶಿವನು ಭಕ್ತರ ದುಃಖವನ್ನು ಪರಿಹರಿಸಬಲ್ಲ.

ಮತ್ತೊಂದು ಅರ್ಥದಲ್ಲಿ: ಓ ಗಿರೀಶ ರುದ್ರನೇ, ಚಲಿಸುತ್ತಿರುವ ಘನೀಕೃತ ಮಹಾಮೇಘಗಳನ್ನು ಪರ್ವತ ಶ್ರೇಣಿಗಳು ತಡೆದಿಡುವಂತೆ, ಮಹಾಪುರುಷನಾದ ನೀನು, ಶತ್ರುಗಳಿಂದ ಚಿಮ್ಮಿ ಬರುತ್ತಿರುವ ಬಾಣಗಳನ್ನು ಪರ್ವತದಂಥ ನಿನ್ನ ಕೈಗಳಿಂದ

ತಡೆಹಿಡಿದು ನಿಲ್ಲಿಸು. ಮುಗ್ಧರನ್ನು ಹಿಂಸೆಯಿಂದ ಕಾಪಾಡಿ, ಕರುಣೆ ತೋರಿ ನಮಗೆ ದಾರಿ ತೋರು.

**ಗೂಢಾರ್ಥದಲ್ಲಿ ಔಷಧಿ ಉಪಯೋಗ:** (ಯಾಮಿಷಂ)-ಹೊರಚಾಚಿರುವ (ಪುರುಷಂ ಜಗತ್) ಗುದಭಾಗಕ್ಕೆ (ಪೈಲ್ಸ್ ಭಾದೆ), (ಗಿರಿಶಂತ) ಕೆಳಕಂಡ ಪರ್ವತ ಪ್ರದೇಶದ ಕೆಳಕಂಡ ಗಿಡ ಮೂಲಿಕೆಗಳಾದ 1) ಕರ್ಪೂರ ಹರಿದ್ರ, ಅಥವಾ ವನಹರಿದ್ರ 2) ಜಂಗಲಿ ಹಳದಿ 3) ಕಸ್ತೂರಿ 4) ಕಾಡು ಅರಿಶಿಣ 5) ಇಂಗು.

'(ಹಸ್ತೇ) ಕೈಯಲ್ಲಿ (ಭಿಭರ್ಷ್ಯ) ಹಿಡಿದುಕೋ, (ಆಶ್ರೋಪ್) ಒಂದು ಭಾಗ ಮಜ್ಜಿಗೆಗೆ ಮೂರು ಭಾಗ ನೀರನ್ನು ಸೇರಿಸಿ, ಡೆಟಾಲ್ ಸೇರಿಸಿ ಗುದದ್ವಾರ ತೊಳೆದು,

(ಶಿವಾಂ) ಶಾಂತಮಾಡು, (ಗಿರಿತ್ರಾಂ) ಪರ್ವತ ಪ್ರದೇಶದ (ಕುರುಮಾ) ಲಿಂಬೂ, ಜೆರುನಾರಂಗ. ಸಿಟ್ರಸ್‌ರಸ, ಬೀಜ ತೆಗೆದ ನಿಂಬೆಹಣ್ಣು (ಹಿಂ) ತೊಲಗಿಸು (ಸೀ) ಸುಲಭವಾಗಿ ಮಾಯವಾಗಿ ಬಿಡುತ್ತದೆ.

ಈ ಮಂತ್ರದಲ್ಲಿ ಮಲಬಾಧೆ ಪೈಲ್ಸ್ ಭಾದೆಗೆ ನಿವಾರಣೋಪಾಯ ತಿಳಿದು ಬರುತ್ತದೆ.

**ಔಷಧಿ ತಯಾರಿಕೆಯ ವಿಧಾನ ಮತ್ತು ಉಪಯೋಗ:** 1) 10 ಗ್ರಾಂ (ಹಸೀ) ಸಿಪ್ಪೆತೆಗೆದ ಅರಿಸಿನ ಬೇರನ್ನು ಸ್ವಲ್ಪ ಕಸ್ತೂರಿ ಸಂಗಡ ರುಬ್ಬಿ ಅದಕ್ಕೆ 2 ಲೋಟನೀರು ಸೇರಿಸಿ, ನಂತರ ಕುದಿಸಿ ಒಂದು ಲೋಟ ಗಾತ್ರಕ್ಕೆ ಇಳಿಸಿ. ಇದಕ್ಕೆ ಒಂದು ಲೋಟ ಹಾಲು ಸೇರಿಸಿ, ಮತ್ತೊಮ್ಮೆ ಕುದಿಸಿ, ಒಂದು ಲೋಟ ಗಾತ್ರಕ್ಕೆ ಇಳಿಸಿ. ನಂತರ ಶೋಧಿಸಿ, ಬಿಸಿಯಾಗಿರುವಾಗಲೇ, ಅದನ್ನು ರೋಗಿ ಸೇವಿಸಬೇಕು.

2) ಮಾರನೆಯ ದಿನ ಪ್ರಾತಃಕಾಲ, ಡೆಟಾಲ್ ಹಾಕಿದ ನೀರು ಸೇರಿಸಿದ ಮಜ್ಜಿಗೆಯಿಂದ ಗುದದ್ವಾರವನ್ನು ತೊಳೆಯಬೇಕು.

3) ಕೆಳಗಿನ ರಸಾಯನ ವಸ್ತುಗಳಿಂದ ಪೇಸ್ಟ್ ತಯಾರಿಸಿ, ಅದನ್ನು ಗುದದ್ವಾರಕ್ಕೆ ಹಚ್ಚಬೇಕು. 1) ಕರ್ಪೂರ ಹರಿದ್ರ 20 ಗ್ರಾಂ. 2) ಇಂಗು 2ಗ್ರಾಂ. 3)ನಿಂಬೇರಸ (ಬೀಜ ತೆಗೆದದ್ದು) ಒಂದು ಹಣ್ಣು ಟಿಪ್ಪಣಿ (ಆಶ್ರೋಪ್) ಎಂದರೆ ಆಶ್ರಫ್ನ ಎಂದು ಮತ್ತೊಂದು ಅರ್ಥದಲ್ಲಿ ಹೇಳುತ್ತಾರೆ. ಕಾರಣ, ಪ್ರತಿದಿನಾ ಅಶ್ರಫ್ನ (ಜಮಿಕಂದ, ಜೇನು) ಸೇವಿಸಬಹುದು.

2) ನಮಕ ಮಂತ್ರಗಳನ್ನು ದಿನಕ್ಕೆ ಒಮ್ಮೆಯಂತೆ 43 ದಿನ ಪಠಣ ಮಾಡಬೇಕು. ನಮಕಗಳ ಪಠಣದ ನಂತರ ನಾಲ್ಕನೇ (ಮಂತ್ರ) ನಮಕವನ್ನು 11 ಬಾರಿ ಪ್ರತಿದಿನ ಜಪಿಸಬೇಕು.

3) ಸಣ್ಣ ಗಾತ್ರದ ಒಣಗಿದ ನೀರುಳ್ಳಿ ಸಿಪ್ಪೆಯ ಪದರುಗಳಿಂದ ತುಂಬಿದ ಒಂದು ದಿಂಬೂ (ಕುಷನ್) ತಯಾರಿಸಿ, ಅದರ ಮೇಲೆ ಪೈಲ್ಸ್ ನಿಂದ ನರಳುತ್ತಿರುವ ರೋಗಿ, ಪ್ರತಿದಿನಾ ಕುಳಿತುಕೊಳ್ಳುವ ಅಭ್ಯಾಸ ಮಾಡಿದಲ್ಲಿ ನೋವು ಶಮನಗೊಳ್ಳುತ್ತದೆ.

4) ಔಷಧಿ ತಯಾರಿಕೆಯಲ್ಲಿ ವೈದ್ಯರಿಂದ ಮತ್ತೊಮ್ಮೆ ಸಲಹೆ ಪಡೆದುಕೊಳ್ಳುವುದು ಸೂಕ್ತ.

## ಕ್ಷಯರೋಗಕ್ಕೆ-ಮದ್ದು

**ಒಂದನೆ ನಮಕದ-5ನೇ ಮಂತ್ರ**

**"ಶಿವೇನ ವಚಸಾತ್ವಾ ಗಿರಿ- ಶಾಚ್ಛಾವ ದಾಮಸಿ|**
**ಯಥಾ ನಸ್ಸರ್ವ ಮಿಜ್ಜಗದ ಯಕ್ಷ್ಮಗಂ ಸುಮನಾ ಅಸತ್||**

**ಸಾಮಾನ್ಯ ಅರ್ಥದಲ್ಲಿ**

ಈ ಮಂತ್ರದಲ್ಲಿ, ಭಕ್ತ ತನ್ನ ಇಷ್ಟಪ್ರಾಪ್ತಿ ಮತ್ತು ಅನಿಷ್ಟ ಪರಿಹಾರಗಳನ್ನು ಬೇಡುತ್ತಾನೆ.

ಹೇ ಗಿರೀಷ (ಗಿರಿಷು ಶೇತ-ಇತಿ, ಗಿರಿಷಃ) ಎಂದರೆ, ವೇದಗಳ ಪ್ರತಿಪಾದಕನಾಗಿ, ಪುಣ್ಯಾರಣ್ಯ ಕ್ಷೇತ್ರ ಅಥವಾ ಪ್ರಕೃತಿ ಪುರುಷನೆ, (ಅಚ್ಛಾ)- ನಿರ್ಮಲವಾದ (ತ್ವಾ)- ನಿನ್ನನ್ನು, (ಶಿವೇನ ವಜಸಾ), ಪರಿಶುದ್ಧ ವಾಣಿಯಿಂದ (ವದಾಮಸಿ) ಪ್ರಾರ್ಥಿಸುವೆವು. (ಯಥಾ) ಯಾವ ನಮ್ಮ ಸ್ತುತಿಯಿಂದ ಸುಪ್ರೀತನಾದ ನೀನು (ನಃ)-ನಮ್ಮ (ಸರ್ವಮಿತ್)- (ಎಲ್ಲ) ಜಗತ್- ಪ್ರಪಂಚದಲ್ಲಿ ಎಲ್ಲಾ ಪ್ರಾಣಿ ಜೀವಿಗಳನ್ನು (ಅಯಕ್ಷ್ಮಂ)- ರೋಗ ರುಜಿನಗಳಿಲ್ಲದೆ, (ಸುಮನಾ)- ಪ್ರಸನ್ನನಾಗಿ (ಸುಪ್ರೀತನಾಗಿ) (ಅಸತ್- ಸ್ಯಾತ್)- ಅದರಂತೆಯೆ ಮಾಡು.

**ಭಾವಾರ್ಥ:** ಹೇ ಪರಶಿವನೇ, ನಿನ್ನ ಪ್ರಾಪ್ತಿಯಾಗಿ ಮಂಗಲ ಸ್ತುತಿರೂಪವಾದ ವಚನಗಳಿಂದಲೂ, ಪದ-ಪದ್ಯಗಳಿಂದಲೂ, ಪ್ರಾರ್ಥನೆ ಮಾಡುತ್ತೇನೆ. ನನ್ನ ಸಮಸ್ತ ಪರಿವಾರವು ಸದಾ ರೋಗರಹಿತವೂ, ಸಂತೋಷ ಚಿತ್ತವುಳ್ಳವುಗಳೂ ಆಗಲಿ.-

ಅ) ಮತ್ತೊಂದು ಅರ್ಥದಲ್ಲಿ

(ಶಿವೇನ ವಚಸಾತ್ವಾ) ಹೇ ಶಿವನೇ ನಿನ್ನ ವಾಣಿಯ ಅಣತಿಯಂತೆ, (ಗಿರೀಶಾಚ್ಛಾ)- ಗಿರೀಶನು ಬಯಸಿದಂತೆ, (ವದಾಮಿಸ) ನಾವು ಪ್ರಾರ್ಥಿಸುತ್ತೇವೆ. (ಯಥಾ ನ) ಅದೇ ಮಾದರಿಯಲ್ಲಿ (ಸರ್ವಮಿಜ್ಜಗತ್) ಈ ಜಗತ್ತಿನ ಎಲ್ಲವನ್ನು (ಕ್ಷಮಗಂ) ಕ್ಷಮಿಸುವ ಮಾತಾಪಾರ್ವತಿ (ಕ್ಷಮಾ ಎನ್ನುವುದು 'ಸತಿ'ಗೆ ಮತ್ತೊಂದು ಹೆಸರಿದೆ).

(ಸುಮನಾಂ)- ಸುಂದರ ಮನಸ್ಸಿನವಳು. (ಸತ್) ಸತ್ಯವಾಗಿದೆ. ಹೇ ಪರಶಿವನೇ, ನಿನ್ನ ವಾಣಿಯಂತೆ, 'ಕ್ಷಮಾ' -ದೇವಿ ಪಾರ್ವತಿಯೇ ಜಗತ್ತಿನ ಮೂಲಾಧಾರ ಶಕ್ತಿ. ಆದ್ದರಿಂದ, ನಿನ್ನ ಅಣತಿಯಂತೆ, ಜಗನ್ಮಾತೆಯಾದ ಪಾರ್ವತಿಯು ನಮ್ಮನ್ನು ಕಾಪಾಡಲೆಂದು ಪ್ರಾರ್ಥಿಸುತ್ತೇವೆ.

**ವಿಶೇಷಾರ್ಥದಲ್ಲಿ -ಕ್ಷಯರೋಗಕ್ಕೆ ಮದ್ದು**

(ಶಿವೇನ ವಚಸಾ)- ಪರಶಿವನು ತಿಳಿಸಿದಂತೆ, (ತ್ವಾ) ನಿನ್ನ - (ವದಾಮ)- ಬಾದಾಮಿ ಮತ್ತು ಖದಿರ (ಗಿರೀಶ)- ವನಶ್ರೀ-ಕಾಡು. (ಅಚ್ಛಾ)- ಚಿಪ್ಪಿನಿಂದ ಬಿಡಿಸಿ, (ಮಸಿ)/ಮಷಿ) ಮಸಿ/ಎಣ್ಣೆ/ಹಾಲು/ರಸ (ಯಥಾನ)- ಆ ರೀತಿಯಲ್ಲದ. (ಸರ್ವ-) ಬೇವು (ಮಿ) ಅಳತೆ,

(ಜಗತ್)- ಸೇವಿಸುವುದು. (ಅ ಯಕ್ಷಮಂ) ಕ್ಷಯರೋಗ (ಸುಮನಾ)- ಬೇವಿನ ಎಲೆ. (ಸತ್) ರಸ/ಎಣ್ಣೆ

'ಪರಶಿವನ ಅಣತಿಯಂತೆ, ಬಾದಾಮಿ ಎಣ್ಣೆ, ಖದಿರಾ ಹಾಲು, ಬೇವಿನಮರದ ಕೆಂಪು ತೊಗಟೆಯ ರಸ ಇವುಗಳಿಗೆ ಬೇವಿನ ಎಲೆಯ ರಸವನ್ನು ಸಮಾನ ಪ್ರಮಾಣದಲ್ಲಿ ಮಿಶ್ರಣಮಾಡಿ ಈ ಮಿಶ್ರಣಕ್ಕೆ ಅರಿಶಿಣ ಸೇರಿಸಿ ಅದನ್ನು ಕೃಷ್ಣಪಕ್ಷದ 15 ದಿನಗಳೂ ಸೇವನೆ ಮಾಡಿದರೆ, ಕ್ಷಯರೋಗ ನಿವಾರಣೆ ಯಾಗುತ್ತದೆ.

## ಔಷಧಿಯ-ತಯಾರಿಕಾ ವಿಧಾನ

| | | |
|---|---|---|
| 1) | ಬಾದಾಮಿ ಎಣ್ಣೆ | - 100 ಮಿ.ಲೀ. |
| 2) | ಖದಿರಾ ಹಾಲು | - 300 ಗ್ರಾಂ |
| 3) | ಬೇವಿನ ಮರದ ಚಕ್ಕೆ ಒಳಭಾಗದಕೆಂಪು ಭಾಗ) | - 1 ಕೆ.ಜಿ. |
| 4) | ಬೇವಿನ ಎಲೆ | - 21 ಎಲೆಗಳು |
| 5) | ನೀರು | - 6 ಲೀಟರ್ |
| 6) | ಸ್ವಲ್ಪ ಅರಿಶಿಣ. | |

ಇವೆಲ್ಲವನ್ನೂ ಸೇರಿಸಿ, ಒಂದು ಪಾತ್ರೆಯಲ್ಲಿ ಎರಡು ಲೀಟರ್ ಆಗುವ ವರೆಗೆ ಕುದಿಸಿ, ಶೋಧಿಸಿದ ನಂತರ, ಅದನ್ನು ಕ್ಷಯ ರೋಗಿಯು, ದಿನಾ, ಆರು ಟೇಬಲ್ ಸ್ಪೂನಿನ ಅಳತೆಯಲ್ಲಿ 21 ದಿನ, ಊಟವಾದ ಮೇಲೆ ಪ್ರತಿದಿನಾ ಸೇವಿಸಬೇಕು.

**ಟಿಪ್ಪಣಿ:** ಇಲ್ಲಿ ಕ್ಷಮಾ ಅಂದರೆ - ಶಿವಾ ಎಂಬ ಅರ್ಥದಲ್ಲಿ ಪರಿಗಣಿಸಲಾಗಿದೆ. ಶಿವಾ ಎಂಬುದು ಮೇಲೆ ಉಲ್ಲೇಖಿಸಿದ ಗಿಡ ಮೂಲಿಕೆಗಳು ಎಂದು ತಿಳಿಯುವುದು.

## ಎರಡನೆ ವಿಧಾನ

| | | |
|---|---|---|
| 1) | ಶಮೀ | - 10 ಎಲೆಗಳು |
| 2) | ಹೇಡಾ-ಪುಡಿ (ಹರದ್) | - 20 ಗ್ರಾಂ |
| 3) | ನೆಲ್ಲಿಕಾಯಿ ರಸ ಅಥವಾ ಪುಡಿ | - 20 ಗ್ರಾಂ |
| 4) | ಜಾಜಿ ಮಲ್ಲಿಗೆ ಎಲೆ | - 21 ಎಲೆಗಳು |
| 5) | ಹರಿದ್ರ, (ಹಳದಿ) ಕೊನೆ | - 20 ಗ್ರಾಂ |
| 6) | ದರ್ಭೆ | - 10 ಎಲೆಗಳು |
| 7) | ಪಿಪ್ಪಲಿ ಬೇರು | - 10 ಗ್ರಾಂ |
| 8) | ಖದಿರಾಹಾಲು | - 300 ಗ್ರಾಂ |
| 9) | ಬಾದಾಮಿ ಎಣ್ಣೆ | - 200 ಮಿ.ಲಿ |

| | | |
|---|---|---|
| 10) | ಬೇವಿನ ಮರದ ತೊಗಟೆ ಕೆಂಪು ಭಾಗ | - 1 ಕೆ.ಜಿ. |
| 11) | ನೀರು | - 9 ಲೀಟರು |

ಇವೆಲ್ಲವನ್ನೂ ಸೇರಿಸಿ, ಪಾತ್ರೆಯಲ್ಲಿ ಮೂರು ಲೀಟರ್ ಗಾತ್ರಕ್ಕೆ ಬರುವಷ್ಟು ಕುದಿಸಿ ಶೋಧಿಸಿ ಬಾಟಲಿಯಲ್ಲಿಟ್ಟುಕೊಂಡು, ಪ್ರತಿದಿನಾ ಎರಡು ಹೊತ್ತು ಒಂದು ಸಲಕ್ಕೆ ಆರು ಚಮಚಾದಷ್ಟು ಮಿಶ್ರಣವನ್ನು ಬೇವಿನ ಎಲೆಯ ರಸ (21 ಎಲೆಗಳು) ಮಿಶ್ರಮಾಡಿ ಬೆಳಿಗ್ಗೆ ಖಾಲಿ ಹೊಟ್ಟೆಯಲ್ಲಿಯೂ, ಮತ್ತು ರಾತ್ರಿ ಊಟವಾದ ನಂತರ 21 ದಿನ ನಿರಂತರವಾಗಿ ಸೇವಿಸಬೇಕು.

**ಟಿಪ್ಪಣಿ-2**: ಋಗ್ವೇದ ಮತ್ತು ಅಥರ್ವ ವೇದಗಳಲ್ಲಿ ಒಂದು ವಿಧವಾದ 'ಅಜ್ಞಾತ ಯಕ್ಷ್ಮಾ' ಅರಿಯಲಾಗದ ಕ್ಷಯರೋಗದ ಬಗ್ಗೆ ವಿವರಗಳಿರುವುದು ತಿಳಿದು ಬಂದಿದೆ. ಇದನ್ನೆ ಈಗಿನ ವೈದ್ಯರು 'ಕ್ಯಾನ್ಸರ್' ಎಂಬ ಮಹಾ ವ್ಯಾಧಿಯೆಂದು ಗುರುತಿಸಿದ್ದಾರೆ. ಬಹುಶಃ ವೇದಗಳ ಕಾಲದಲ್ಲಿ ಕ್ಯಾನ್ಸರ್ ಅಜ್ಞಾತ ವ್ಯಾಧಿಯಾಗಿರಬಹುದೆಂಬ ಅಭಿಪ್ರಾಯವಿದೆ. ಆದಕಾರಣ. ಕ್ಯಾನ್ಸರ್ ವ್ಯಾಧಿಗೂ ಮೇಲಿನ ಔಷಧೀಯ ಪ್ರಯೋಗ ಮಾಡಬಹುದು.

**ಟಿಪ್ಪಣಿ-3**: ಈ ಔಷಧಿಯ ಸೇವನೆಯ ದಿನಗಳಲ್ಲಿ ರೋಗಿ ಪ್ರತಿದಿನಾ 108 ಬಾರಿ ಮೇಲಿನ (5ನೇ)ಮಂತ್ರವನ್ನು ಪಠಿಸಬೇಕು. ಇದು ಅತ್ಯಗತ್ಯ.

4) ಸರ್ವರೋಗ ನಿವಾರಕ ಮದ್ದು

ಪ್ರಥಮ ಅನುವಾಕದ 7 ನೇ ಮಂತ್ರ

**"ಅಸೌ ಯಸ್ತಾಮ್ರೋ ಅರುಣ ಉತ ಬಭ್ರುಸ್ಸುಮಂಗಲ:**
**ಯೇ ಚೇ ಮಾಗಂ ರುದ್ರಾ ಅಭಿತೋ ದಿಕ್ಷುಶ್ರಿತಾ:||"**

(ಯಃ ಅಸೌ) ಹಿಂದೆ ಹೇಳಿದ ಬಾಹ್ಯಾಕಾಶ ಮತ್ತು ದಹರಾಕಾಶ (ಹೃದಯ)ಗಳಲ್ಲಿನ ಸೂರ್ಯನ ಕಿರಣಗಳಲ್ಲಿರುವ ಯಾವ ಪರಶಿವನು, (ತಾಮ್ರ:) ಉದಯಕಾಲದಲ್ಲಿ ಕೆಂಪಾಗಿಯೂ, ತರುವಾಯ ಅಸ್ತಕಾಲದಲ್ಲಿ ರಕ್ತ ವರ್ಣದವನಾಗಿಯೂ (ಉತ) ಮತ್ತು (ಬಭ್ರು:) ಮಧ್ಯಾಹ್ನದಲ್ಲಿ ಹೊಂಬಣ್ಣದವನಾಗಿಯೂ ಇದ್ದು ಬಳಿಕ (ಸುಮಂಗಲ:) ಮಂಗಲ ಸ್ವರೂಪನಾಗಿಯೂ ಇದ್ದು ಸರ್ವಕಾರ್ಯಗಳನ್ನು ವೃದ್ಧಿಪಡಿಸತಕ್ಕವನಾಗಿದ್ದಾನೆ.

ಹೃದಯಾಕಾಶಗತ ಸೂರ್ಯನ ಪರವಾಗಿ, ಹೃದಯ ಕಮಲದಲ್ಲಿರುವ ಸೂರ್ಯ ಮಂಡಲ-ಕೆಂಪು ಅದರ ಮೇಲಿರುವ ಚಂದ್ರಮಂಡಲವು ಪಚ್ಚೆಗೆಂಪುಳ್ಳದ್ದು ಅದರ ಮೇಲಿರುವ ಅಗ್ನಿಮಂಡಲವು ಪಿಂಗಲವರ್ಣವುಳ್ಳದ್ದು (ಯೇಚರುದ್ರಾ:) ಈ ಆದಿತ್ಯನೊಂದಿಗೆ ಕೂಡಿದ ರುದ್ರರು, (ಸಹಸ್ರಶಃ) ಸಾವಿರಾರು ಮಂದಿ (ಇಮಾಮ ಭಿತಃ) ಈ ಭೂಮಿಯ ಹಾಗೂ ಶಿವಶಕ್ತಿಗಳಿಗೆ ಪೀಠನಾಗಿರುವ ಸಾವಿರಾರು ಮಂದಿ (ಇಮಾಮಭಿತಃ ಈ ಭೂಮಿಯ ಮತ್ತು ಶಿವಶಕ್ತಿಗಳಿಗೆ ಪೀಠವಾಗಿರುವ) ಆ ಪರ

ಬಿಂದುವಿನ ಸುತ್ತಲೂ (ದಿಕ್ನು) ದಿಕ್ಕುಗಳಲ್ಲಿ (ಶ್ರಿತಾಃ) ಆಶ್ರಯಿಸಿಕೊಂಡಿದ್ದಾರೆಯೋ, (ಯೇಷಾಂ) ಇವರು (ಹೇಡಃ) ಗೌರವದಿಂದ (ಅವೇ ಮಹೇ) ಸ್ತುತಿ ಪೂಜಾದಿಗಳಿಂದ ಕಳೆಯೋಣ ಎಂದು ಭಕ್ತನು ನುಡಿಯುತ್ತಾನೆ.

**ಮತ್ತೊಂದು ಅರ್ಥದಲ್ಲಿ**

(ಅಸೌ) ಮತ್ತು (ಆಯಸ **ಲೋಹಭಸ್ಮ**) ಲೋಹಭಸ್ಮ ಅಂದರೆ ಕಬ್ಬಿಣದ ಪುಡಿ, (ಸ್ವರ್ಣ, ಭಸ್ಮ)- ಸ್ವರ್ಣ (ಚಿನ್ನದ) ಭಸ್ಮ (ತಾಮ್ರೋ)- ತಾಮ್ರಭಸ್ಮ (ಅರುಣ) ಒಂದು ತರಹ ಕೆಂಪು ಚುಕ್ಕಿಗಳನ್ನೊಳಗೊಂಡ ತೊನ್ನುರೋಗ- (ಅಥವಾ ಯಾವುದೇ ತರಹ ಚರ್ಮ ರೋಗಗಳು) (ಉತಃ- ಸಮನಾದ) (ಬಭ್ರು)-ಬೋಳುತಲೆ (ಸಂಖಪುಷ್ಪಿ)- ಶಂಖಪುಷ್ಪಂ (ಸು)- ಭಟ್ಟಿ ಇಳಿಸು (ಮಂಜಲಃ) ಮಂಗಲ ಅಂದರೆ ಹಳದಿ ಅರಿಶಿನ (ಮ) ಮಂತ್ರಭರಿತ ಅಳತೆಯಲ್ಲಿ (ಗಲ್) ಶೋಧಿಸು (ಯೇ)- ಈ ಎಲ್ಲವನ್ನೂ ಚೆ- (ಮಾಗಮ್) ತಕ್ಕಂತೆ ಅಳತೆಮಾಡಿ.

(ರುದ್ರಾ) ಅಗ್ನಿ (ಹೆಡಾ) ಹಳದಿ (ಅಭಿತೋ)- ಎಲ್ಲಾಕಡೆ ದಿಕ್ಕು (ದಿಕ್ನು)- ತಯಾರಿಸಿ (ಶ್ರಿತಾ) ತುಂಬಿಸಿದ ಅಥವಾ ಸೇರಿಸಿದ (ಸಹಸ್ರಾಕ್ಸೋ) ಸಾವಿರಾರು (ಅಶಮರೀ) ಮೂತ್ರ ಕೋಶದಲ್ಲಿ ಅಥವಾ ಪಿತ್ತನಾಳದಲ್ಲಿ ಕಲ್ಲು ಬೆಳೆಯುವುದು (ಅಶೋ) ಸೇವಿಸು (ಇಲ್ಲ) ಏಲಕ್ಕಿಯನ್ನು (ಏಷ)- ಏಳು (ಈ) ಎಲ್ಲವನ್ನೂ (ಮಹೀ)- ಬುದ್ಧಿ (ಮಷೀ)- ಮಸಿ ಅಥವಾ ಎಣ್ಣೆ ಅಥವಾ ರಸ.

ಈ ಮಂತ್ರ ಬಹಳ ಅರ್ಥಗರ್ಭಿತವಾಗಿ ನಾನಾ ಅರ್ಥಗಳನ್ನು ತುಂಬಿಕೊಂಡಿದೆ. ಅವುಗಳಲ್ಲಿ ಮುಖ್ಯವಾಗಿ ಮೂರು ರೋಗಗಳಿಗೆ ಚಿಕಿತ್ಸೆ ಕಂಡುಬರುತ್ತದೆ.

**1) ಮೂತ್ರಜನಕಾಂಗದ ನಾಳದಲ್ಲಿ ಕಲ್ಲು ಬೆಳೆದುದಕ್ಕೆ 2) ತೊನ್ನು ರೋಗಕ್ಕೆ ಮತ್ತು 3) ಬೋಳುತಲೆ ಇವುಗಳನ್ನು ನಿವಾರಿಸಲು ಕೆಳಕಂಡಂತೆ ಔಷಧಿ ತಯಾರಿಸಬೇಕು.**

| | | | |
|---|---|---|---|
| 1) | ಲೋಹಭಸ್ಮ | -ಕಬ್ಬಿಣದ ಪುಡಿ | -10 ಗ್ರಾಂ |
| 2) | ಸ್ವರ್ಣಭಸ್ಮ | -ಚಿನ್ನದ ಪುಡಿ | -2 ಗ್ರಾಂ |
| 3) | ತಾಮ್ರ ಭಸ್ಮ | - | 10ಗ್ರಾಂ |
| 4) | ಏಲಕ್ಕಿ ಪುಡಿ | | 5 ಗ್ರಾಂ |
| 5) | ಹಳದಿ (ಕೊನೆಗಳು) | | -50 ಗ್ರಾಂ |
| 6) | ಹೆಡ-ಪುಡಿ | | -200 ಗ್ರಾಂ |
| 7) | ಶಂಖಪುಷ್ಪದ ರಸ | | -20 ಮಿ.ಲೀ. |
| 8) | ನೀರು | | -9 ಲೀಟರ್ |

ಈ ಎಲ್ಲಾ ಗಿಡ ಮೂಲಿಕೆಗಳನ್ನು ಮತ್ತು ಭಸ್ಮಗಳನ್ನು ಕುದಿಸಿ- ಭಟ್ಟಿ ಇಳಿಸಬಹುದು. ಇಲ್ಲವೆ. 3 ಲೀಟರ್ ಗಾತ್ರಕ್ಕೆ ಬರುವವರೆಗೂ ಕುದಿಸಿ, ಆರಿಸಿ, ನಂತರ ಶೋಧಿಸಿ ಕೆಳಕಂಡಂತೆ ಉಪಯೋಗಿಸಬೇಕು.

## ಆರೋಗ್ಯದರ್ಶಿ

ಈ ಎಲ್ಲಾ ಗಿಡ ಮೂಲಿಕೆಗಳನ್ನು ಮತ್ತು ಭಸ್ಮಗಳನ್ನು ಕುದಿಸಿ- ಭಟ್ಟಿ ಇಳಿಸಬಹುದು. ಇಲ್ಲವೆ. 3 ಲೀಟರ್ ಗಾತ್ರಕ್ಕೆ ಬರುವವರೆಗೂ ಕುದಿಸಿ, ಆರಿಸಿ, ನಂತರ ಶೋಧಿಸಿ ಕೆಳಕಂಡಂತೆ ಉಪಯೋಗಿಸಬೇಕು.

1) ಮೂತ್ರಕೋಶದಲ್ಲಿನ ಕಲ್ಲು ನಿವಾರಿಸಲು- ಮೇಲೆ ತಯಾರಿಸಿದ ಔಷಧಿಯನ್ನು 25 ರಿಂದ 30 ಮಿ.ಲೀ. ರಷ್ಟನ್ನು ದಿನಕ್ಕೆ ಎರಡರಿಂದ ಮೂರು ಬಾರಿ, ಊಟವಾದ ನಂತರ, ಕೋಶದಲ್ಲಿನ ಕಲ್ಲು ಕರಗುನವರೆಗೂ ಸೇವಿಸಬೇಕು.

2) ತೊನ್ನು-ಚರ್ಮರೋಗಗಳಿಗೆ: ರೋಗಿಗಳು ಮೇಲಿನ ಔಷಧಿಯನ್ನು ತೊನ್ನಿರುವ ಚರ್ಮದ ಮೇಲೆ ಪ್ರತಿದಿನಾ ಹಚ್ಚಿಕೊಳ್ಳಬೇಕು. ಇದಲ್ಲದೆ, ಪ್ರತಿದಿನಾ 25 ರಿಂದ 30 ಮಿ.ಲೀ. ಔಷಧಿಯನ್ನು ದಿನಕ್ಕೆ ಎರಡು ಅಥವಾ ಮೂರು ಬಾರಿ ಸೇವಿಸಬೇಕು.

3) ಬೋಳು ತಲೆ ನಿವಾರಣೆಗೆ: ಮೇಲೆ ತಯಾರಿಸಿದ ಔಷಧಿಯನ್ನು ತಲೆಯ ತುಂಬಾ ದಿನಕ್ಕೆ 2 ಬಾರಿ ಮೀರದಂತೆ ಹಚ್ಚಿಕೊಳ್ಳಬೇಕಾಗುತ್ತದೆ. ಅಲ್ಲದೆ, 25 ರಿಂದ 30 ಮಿ.ಲೀ. ಔಷಧಿಯನ್ನು ದಿನಕ್ಕೆ ಎರಡು ಬಾರಿಯಂತೆ ಸೇವಿಸಬೇಕು.

ಇದರಿಂದ ಕೂದಲು ಉದುರುವುದನ್ನು ತಡೆಗಟ್ಟಬಹುದು.

4) ಸುಟ್ಟಗಾಯ-ಚರ್ಮಕ್ಕೆ: ಮೇಲಿನ ಔಷಧಿಯನ್ನು ಸುಟ್ಟ ಜಾಗದ ಮೇಲೆ ಮೂರು ನಾಲ್ಕು ಬಾರಿ ಉಪಯೋಗಿಸಿದಲ್ಲಿ ಸುಟ್ಟಚರ್ಮದ ಬಣ್ಣ ಬದಲಾಯಿಸುತ್ತದೆ.

ಇದೊಂದು ಅತಿ ಉತ್ತಮ ಔಷಧಿಯಾಗಿದೆ. ಇದರ ಸಂಗಡ, ಮೇಲೆ ತಿಳಿಸಿರುವ ಮಂತ್ರವನ್ನು ಪ್ರತಿದಿನಾ 108 ಬಾರಿ ಪಠಣ ಮಾಡಬೇಕು.

5) ಕುತ್ತಿಗೆಗೆ ಸಂಬಂಧಿಸಿದ ನೋವಿನ ರೋಗಗಳಿಗೆ

ಮೊದಲನೆಯ ನಮಕದ 10 ನೇ ಮಂತ್ರ.

''ನಮೋ ಅಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ಮೀಢುಷೇ ಅಥೋಯೆ ಅಸ್ಯಸತ್ವಾನೋಽಹಂ ತೇಭ್ಯೋಽ ಕರಂ ನಮಃ

### ಸಾಮಾನ್ಯ ಅರ್ಥದಲ್ಲಿ

ನೀಲವಾದ ಕಂಠವುಳ್ಳವನೂ, ಸಾವಿರ ಕಣ್ಣುಗಳುಳ್ಳವನೂ, ಸರ್ವ ಪ್ರಪಂಚವನ್ನು ಅವಲೋಕಿಸುವವನೂ, ಇಂದ್ರ ಸ್ವರೂಪನೂ, ಕೋಟಿ ಸೂರ್ಯರಿಗೆ ಸಮಾನನೂ, ವೃಷ್ಟಿಕರ್ತನೂ, ಆದ ಶ್ರೀರುದ್ರನಿಗೆ ನಮಸ್ಕಾರವು.

ಇಲ್ಲಿ ಭಕ್ತ, ತನ್ನ ಇಷ್ಟ ಪ್ರಾಪ್ತಿ ಮತ್ತು ಅನಿಷ್ಟ ಪರಿಹಾರರೂಪವಾದ ಪರಮ ಸುಖ ಸಂಪತ್ತುಗಳಿಗೆ ಪ್ರಾರ್ಥಿಸುತ್ತಾನೆ. ಲೋಕ ಕಂಟಕವಾದ ಕಾಲಕೂಟ ವಿಷವನ್ನು ಕಂಠದಲ್ಲಿ ಧರಿಸಿ, ಜಗತ್ತನ್ನು ಕಾಪಾಡಿದ ಪರಶಿವನು ನಮ್ಮ ಪಾಪವನ್ನು ಕಳೆದು ಕಾಪಾಡುತ್ತಾನೆ ಎಂದು ತಾತ್ಪರ್ಯ.

### ವಿಶೇಷಾರ್ಥದಲ್ಲಿ

(ನಮೋನ್ ಅಸ್ತು)- ಪರಿಹರಿಸು (ನೀಲಗ್ರೀವಾಯ) ಕುತ್ತಿಗೆಯ ಊತ (ಸಹಸ್ರ)- ಸಾವಿರ (ಅಕ್ಷ)- ರುದ್ರಾಕ್ಷಿಸರ (ವಿಭೀತಕ)- ಬಹೇಡ (ಹಿಂದಿ)-

## ಆರೋಗ್ಯದಂಗಳ

(ಮೀಢ)- ಅನುಭವಿಸು (ಉಷೆ)- ಉದಯರವಿಯ ರಶ್ಮಿಗಳು ಬಿಸಿಲು ಸ್ನಾನ (ಅಥೋ)- ಮುಂದಿನ (ಎನ್-ಆಸ್ಯ) ಆ ಮಾರ್ಗದಲ್ಲಿ (ಆ ರೀತಿಯಲ್ಲಿ), (ಸತ್)- ಮುಖ್ಯಾಂಶ ಅಂದರೆ ಎಣ್ಣೆ, (ವಾನ)- ಒಣಗಿಸದ ಹಣ್ಣುಗಳು.

(ಆಹುಂ)-ಖಚಿತವಾಗಿ
(ಆಮ್ಲಾ)- ನೆಲ್ಲಿಕಾಯಿ
(ಅಭ್ಯಂಜನ)- ಎಣ್ಣೆ ಸ್ನಾನ
ನ್ನವ, (ಕರಂ)-ಕೈಗಳಿಂದ
(ಅಭ್ಯೋನ್ನವಕರಮ್)
(ಸತ್)-

(ಆಕರಮ್)- (ಧಾತ್ರಿ)
(ನಮಃ)ಯೋಗಲಾಡಿಸು
(ತೇಭ್ಯೋ)- ನಿಮ್ಮವೇ

ಎಣ್ಣೆಯಿಂದ ತಿಕ್ಕಿಸಿಕೊಳ್ಳುವುದು
ಎಣ್ಣೆ (ಸತ್ವ)

ಕುತ್ತಿಗೆಯಲ್ಲಿ ಊತ, ನೋವುಗಳ ಶಮನಕ್ಕಾಗಿ, ಆ ವ್ಯಕ್ತಿ ಒಂದು ಸಾವಿರ ಮಣಿಗಳ ರುದ್ರಾಕ್ಷಿ ಮಾಲೆಯನ್ನು ಕುತ್ತಿಗೆಯಲ್ಲಿ ಧರಿಸಿಕೊಳ್ಳಬೇಕು. ಅಲ್ಲದೆ, ನೋವಿನ ಭಾಗಕ್ಕೆ ಮತ್ತು ಭುಜದ ಮೂಳೆಗಳಿಗೆ ವಿಭೂತಿಕದಿಂದ ತಯಾರಿಸಿದ ಎಣ್ಣೆಯಿಂದ ಉಜ್ಜಿ ಬೆಳಗಿನ ಸೂರ್ಯರಶ್ಮಿಗೆ ಮೈಯೊಡ್ಡಿ ಕಾಯಿಸಿಕೊಳ್ಳಬೇಕು. ನಂತರ ಇಡೀ ದೇಹವನ್ನು ನೆಲ್ಲಿಕಾಯಿ ಎಣ್ಣೆಯಿಂದ ಉಜ್ಜಿಕೊಂಡು ಸ್ವಲ್ಪ ಕಾಲದ ನಂತರ ಬಿಸಿ ನೀರಿನ ಸ್ನಾನ ಮಾಡಬೇಕು.

**ಟಿಪ್ಪಣಿ:** 1) ಇಲ್ಲಿ ''ಸಹಸ್ರಾಕ್ಷಯ ಮೀಢುಷೆ''- ಎಂಬುದಕ್ಕೆ ಹಲವಾರು ಅರ್ಥಗಳನ್ನು ನೀಡಲಾಗಿದೆ. ಅವುಗಳು 1) ಒಂದು ಸಾವಿರ 2) ರುದ್ರಾಕ್ಷಿ ಸರಮಾಲೆ 3) ಭುಜದ ಮೂಳೆಗಳು, 4) ವಿಭೂತಿಕಾ, 5) ಉದಯ ಸೂರ್ಯನ ರಶ್ಮಿಗಳ ಸ್ನಾನ.

**ಟಿಪ್ಪಣಿ-2:** ರುದ್ರಾಕ್ಷಿ ಮಾಲೆ- ಧರಿಸುವ ಮುನ್ನ ಪರೀಕ್ಷಿಸಿ ಧರಿಸುವುದು ಸೂಕ್ತ, ಏಕೆಂದರೆ, ಋಣಮುಖದ (ನೆಗೆಟಿವ್) ರುದ್ರಾಕ್ಷಿಗಳು ನೋವನ್ನು ವೃದ್ಧಿಸುತ್ತವೆ. ಧ್ರುವ (ಪಾಸಿಟಿವ್) ಮುಖದ ರುದ್ರಾಕ್ಷಿಗಳು ನೋವನ್ನು ಶಮನಮಾಡುತ್ತವೆ.

ಇದರ ಸಂಗಡವೇ ಮೇಲಿನ ಮಂತ್ರವನ್ನು ಪ್ರತಿ ದಿನಾ 108 ಬಾರಿ ಪಠನ ಮಾಡುವುದನ್ನು ಮರೆಯಬಾರದು. ಇಲ್ಲವೆ ಇಡೀ ನಮಕಗಳನ್ನಾದರೂ ಪಠಣಮಾಡಬೇಕು.

**6) ಅಧ್ಯವೋಚ ದಧಿವಕ್ತಾ ಪ್ರಥಮೋದೈವ್ಯೋಭಿಷಕ್।**
**ಅಹೀಗಂ ಶ್ಚ ಸರ್ವಾನ್ ಜಂಭಯನ್ ಸರ್ವಾಶ್ಚಯಾತು ಧಾನ್ಯ:।**

(ಅಧಿವಕ್ತಾ) ಭಕ್ತರ ಪಕ್ಷ ಪಾತಿಗಳಲ್ಲಿ (ಪ್ರಥಮಃ) ಮೊದಲಿಗನಾದ ನೀನು (ದೈವ್ಯೋಭಿಷಕ್) ದೇವ ವೈದ್ಯನು. ಎಂದರೆ ಸ್ಮರಣ ಮಾತ್ರದಿಂದಲೇ ಭಕ್ತರ ಪಾಪ ಮತ್ತು ದಾರಿದ್ರ್ಯಗಳನ್ನು ಕಳೆಯುವವನು. ಆದ್ದರಿಂದ, ನೀನು (ಸರ್ವಾನ್ ಅಹೀಂಗ್‌ಶ್ಚ)- ಎಲ್ಲಾ ವಿಷಜಂತುಗಳನ್ನು ಮತ್ತು (ಸರ್ವಾಂಶ್ಚಯಾತು ಧಾನ್ಯಃ) ಎಲ್ಲಾ ರಕ್ಷ: ಭೂತ-ಪಿಶಾಚಾದಿ ದುಷ್ಟಶಕ್ತಿಗಳನ್ನು (ಜಂಭಯನ್) ನಾಶಮಾಡುವೆಯೆಂದು, (ಅಧ್ಯವೋಚಕ) ಹೇಳಿರುವುದರಿಂದ ನನಗೆ ಯಾವ ಭಯವೂ ಇಲ್ಲ.

ಎಂದರೆ, ನಿನ್ನನ್ನು ಸ್ತುತಿಸುವದರಿಂದ ಸರ್ಪ-ಚೋರಾದಿಗಳ ಬಾಧೆ ಮತ್ತು ಗ್ರಹಪೀಡೆ ದುಷ್ಟಶಕ್ತಿಗಳ ಮತ್ತು ಆಧಿ ವ್ಯಾಧಿಗಳ ಭಾದೆ ಪರಿಹಾರವಾಗುವದರಿಂದ ಶಿವಜ್ಞಾನವು ಸಿದ್ಧಿಸುತ್ತದೆ.

ಎಂದರೆ, ನಿನ್ನನ್ನು ಸ್ತುತಿಸುವದರಿಂದ ಸರ್ಪ-ಚೋರಾದಿಗಳ ಬಾಧೆ ಮತ್ತು ಗ್ರಹಪೀಡೆ ದುಷ್ಟಶಕ್ತಿಗಳ ಮತ್ತು ಆಧಿ ವ್ಯಾಧಿಗಳ ಭಾದೆ ಪರಿಹಾರವಾಗುವದರಿಂದ ಶಿವಜ್ಞಾನವು ಸಿದ್ಧಿಸುತ್ತದೆ.

ಮತ್ತೊಂದು ಅರ್ಥದಲ್ಲಿ: (ಅಧ್ಯ)- ಪ್ರತಿದಿನಾ (ವೋಚಾ) ಪಠಿಸು (ಅಧಿವಕ್ತಾ)- ಕ್ರಮ ಹಾಗೂ ವ್ಯಾಕರಣ ಬದ್ಧವಾಗಿ ಉಚ್ಚಾರಣೆ ಮಾಡಿದರೆ, (ಪ್ರಥಮೋ)- ನೀನೇ ಮೊದಲಿಗ ಅಥವಾ ಆದ್ಯ ದೇವತೆ (ಭಿಷಕ್) ವೈದ್ಯನಾದ ದೇವನೇ, (ಅಹಿ)- ನಾಭಿಯಲ್ಲಿ (ಅಹೀನ)- ಬಹಳದಿನಗಳಿಂದಿದ್ದ (ಸರ್ವಾನಿ)- (ಸರ್ವಾಂಜ) ಪ್ರತಿದಿನಾ ಎಲ್ಲಾದಿಕ್ಕುಗಳಲ್ಲೂ (ಜಂಭ) ಬಾಯಿ (ಯಾತು ಧಾನ್ಯಯನ್) ಭೂತ ಪ್ರೇತ ದುಷ್ಟ ಶಕ್ತಿಗಳು (ಅಧರಾಚಿ) ತೆಪ್ಪಗಾಗುತ್ತವೆ. (ಪರಾ)- ದೂರವಾಗು/ಸರಿಸು (ಸುವ)- ಸೆಳೆದುಕೊ- ದೂರಮಾಡು.

ಪರಶಿವನ ವಾಣಿಯಂತೆ, ಮಾನವನ ನಾಭಿ (ಮಣಿಪುರ)ಯಿಂದ ಪ್ರವೇಶಿಸುವ ನಾನಾ ದುಷ್ಟ ಶಕ್ತಿಗಳೇ, ನಾನಾ ರೋಗಗಳಿಗೆ ಮೂಲ. ಈ ದುಷ್ಟ ಶಕ್ತಿಗಳನ್ನೂ ಹೊರದೂಡಿಸಲು, ದೇವನ ಮಹಿಮೆಯ ಈ ಮಂತ್ರವನ್ನು ಸ್ವಚ್ಛವಾಗಿ ಅನೇಕಬಾರಿ ಉಚ್ಚಾರಣೆ ಮಾಡಬೇಕು. ಇಡೀ ನಮಕಗಳ ಪಠನದ ನಂತರ, 6ನೇ ಮಂತ್ರವನ್ನು ಪ್ರತಿದಿನಾ ಹನ್ನೊಂದು ಬಾರಿ ಪಠಿಸಬೇಕು.

7) ಮೊದಲನೆ ನಮಕದ -2ನೇ ಮಂತ್ರ- ಗಾಯಗಳಿಗೆ ಉಪಚಾರ

**"ಯಾತ ಇಷುಶ್ಶಿವ ತಮಾ ಶಿವಂ ಬಭೂವತೇ ಧನು:|**
**ಶಿವಾ ಶರವ್ಯಾಯಾತವತಯೋನೋ ರುದ್ರ ಮೃಡಯ||"**

ಇಲ್ಲಿ ಭಕ್ತನು ತನ್ನನ್ನು ರಕ್ಷಿಸಲು ಬೇಡುತ್ತಾನೆ.

(ರುದ್ರ)- ಎಲೈ ರುದ್ರನೆ, ನನ್ನ ಭಕ್ತಿ ಪೂರ್ವಕವಾದ ನಮಸ್ಕಾರದಿಂದ (ತೇ) ನಿನ್ನ, (ಯಾ ಇಷುಃ (ಧನು:) ಯಾವ ಧನಸ್ಸು (ಶಿವಬಭುರ) ಶಾಂತವಾಯಿತೋ (ತೇ) ನಿನ್ನ ಯಾ ಯಾವ ಬಾಣವು (ಶಿವತಮಾಬಭೂವ)- ಪ್ರಶಾಂತವಾಯಿತೋ, (ತೇ) ನಿನ್ನ (ಧನು:) ಯಾವ ಧನಸ್ಸು (ಶಿವ ಬಭೂವ) ಶಾಂತವಾಯಿತೋ, (ತೇ) ನಿನ್ನ (ಯಾ ಶರವ್ಯಾ) ಯಾವ ಬತ್ತಳಿಕೆಯು, (ಶಿವಬಭೂವ)- ಉಪಶಾಂತವಾಯಿತೋ (ತಯಾ) ಆ ನಿನ್ನ ಬಾಣ, ಬಿಲ್ಲು ಮತ್ತು ಬತ್ತಳಿಕೆಗಳಿಂದ (ನ:) ನಮ್ಮನ್ನು (ಮೃಡಯಾ) ರಕ್ಷಿಸು.

**ಇನ್ನೊಂದು ಅರ್ಥದಲ್ಲಿ**

(ಯಾ) ನಾವು ನಿನ್ನನ್ನು ಪ್ರಾರ್ಥಿಸುತ್ತೇವೆ. (ತ)- ನಿನ್ನ (ಇಷು:) ಬಾಣಗಳು (ಶಿವತಮಾ) -ಪರಶಿವ ಅರ್ಧಾಂಗಿ ಶಿವಾ (ಶಿವಂ)- ಕಾಪಾಡು (ಭೂವ)- ಬರುತ್ತಿರುವ-ಹೊರಹೊಮ್ಮುತ್ತಿರುವ, (ತೇ)- ನಿನ್ನ, (ಧನು:) -ಧನುಸ್ಸು (ಶಿವಾ) ಮಾತೆ ಪಾರ್ವತಿ, (ಶರವ್ಯಾ)- ಗಾಯಗೊಳಿಸಬಲ್ಲೆ, (ಯಾ) ಬರುತ್ತಿವೆ. (ತವ) ನಿನ್ನ (ತಯಾ)- ಕಾಪಾಡು (ನೋ)- ಇಲ್ಲ/ಅಲ್ಲ (ರುದ್ರ)-ಕೋಪ, (ಮೃಡಯ)- ಕರುಣೆ ತೋರು.

ಭಾವಾರ್ಥ: ಪರಶಿವನ ಅರ್ಧಾಂಗಿಯಾದ ಕರುಣಾಮಯಿ ಪಾರ್ವತಿ, ಕೋಪಗೊಂಡ ರುದ್ರನು ತನ್ನ ಬಿಲ್ಲಿನಿಂದ ಬಿಡಲ್ಪಟ್ಟ ಬಾಣಗಳು, ನಮ್ಮನ್ನು ತಾಕದಿರುವಂತೆ ಕಾಪಾಡಲಿ ಎಂದು ಪ್ರಾರ್ಥಿಸುತ್ತೇವೆ.

ಹಾಗೆಯೇ, ಪರಶಿವನೇ ಕರುಣಾಮೂರ್ತಿಯಾಗಿ, ಉಗ್ರರೂಪಿಗಳಾದ ನಿನ್ನ ಬಿಲ್ಲು, ಬಾಣ,ಬತ್ತಳಿಕೆಗಳು, ನನ್ನ ನಮಸ್ಕಾರದಿಂದ ಶಾಂತವಾಗಿ ನಮ್ಮ ಸಾಂಸಾರಿಕ ಹಾಗೂ ಪಾರಮಾರ್ಥಿಕ ಸುಖ ಕೊಡಲಿ.

ವಿಶೇಷ ಅರ್ಥದಲ್ಲಿ (ಯಾತ)- ಪ್ರಾತಃಕಾಲ ಎಚ್ಚರಗೊಂಡನಂತರ (ಇಷು)- ಸೂರ್ಯ ರಶ್ಮಿಗಳು (ತೆರೆದ ಮೈದಾನದಲ್ಲಿ) (ಶಿವಾತಮಾ ಶಿವಂ) ಪರಶಿವ ಮತ್ತು ಜಗನ್ಮಾತೆ ಪಾರ್ವತಿಯರ ನೆನೆಯುತ್ತಾ (ತಮಾ)- ಕಾಲಿನಿಂದ ತುದಿ (ತಮ-ಪ್ರಾಣಯಾಮ), ಪ್ರಾಣಯಾಮದಲ್ಲಿ- ಪೂರಕ, ಕುಂಭಕ ಮತ್ತು ರೇಚಕಗಳನ್ನು ಮಾಡುತ್ತಾ (ಶಿವಂ)- ಕಲ್ಯಾಣಕರ (ಬಿಭೂವ)- ಪ್ರತಿದಿನಾ (ತೇ)- ನೀನು (ಧನುಃ) ಧನುರಾಸನದಲ್ಲಿ (ಶಿವಾ)- ಪರಶಕ್ತಿಯಾದ ಶಿವೆಯೇ (ಶರವ್ಯಾಯಾ)- ಬಿಲ್ಲಿನಿಂದ ಮಾಡುತ್ತಿರು (ತವ) ನಿನ್ನ (ತಯಾ) ಒಂದೇ ಸಮನೇ (ನೊ) ನಿಲ್ಲಿಸಬೇಡ (ರುದ್ರ)- ನೋವು ಅಳು ಬಂದರೆ, (ಮೃಡಯ)- ಕರುಣೆ ತೋರಿಸು.

**ಭಾವಾರ್ಥ:** ಪ್ರತಿದಿನಾ ಮುಂಜಾನೆ ಎದ್ದು ಜಗತ್ತಿಗೆ ಮಾತಾ ಪಿತರಾದ ಪಾರ್ವತಿ ಪರಮೇಶ್ವರನ್ನು ಧ್ಯಾನಿಸುತ್ತಾ, ಮೈದಾನದಲ್ಲಿ ಧನುರಾಸನ ಮಾಡುತ್ತಾ ನಿಮ್ಮ ತೋರುಬೆರಳು ನಿಮ್ಮ ಕಾಲಿನ ಹೆಬ್ಬೆರಳನ್ನು ಮುಟ್ಟಲಿ ಸಂಗಡವೇ ಪ್ರಾತಃಕಾಲದ ಸೂರ್ಯನ ರಶ್ಮಿಗಳಿಗೆ ಮೈಯೊಡ್ಡುತ್ತಾ, ಪ್ರಾಣಯಾಮ್ಮಮಾಡಬೇಕು. ಧನುರಾಸನ ಮಾಡುವಾಗ ನೋವೇನಾದರೂ ಕಂಡರೂ, ನಿಲ್ಲಿಸದೇ ಮುಂದುವರೆಸುವುದು.

**2) ಗಾಯಗಳಿಗೆ ಔಷಧಿ**

(ಯಾ)ಒಂದು ವೇಳೆ, (ತ) ನೀನು (ಇಷು)-ಬಾಣ ಮತ್ತು ಇತರೆ ಆಯುಧಗಳಿಂದ, (ಶಿವತಮಾ) ದೇವದಾರು ಗಿಡಮೂಲಿಕೆಗಳು- (ಶಿವ) ವಾಸಿಯಾಗುವಿಕೆ, (ಬಭೂವ)- ಯಾವಾಗ ಕಾಣಬರುತ್ತದೆಯೋ (ತೇ) ನೀನು. (ಧನು:)/ಭಲ್ಲಾತಕ-ಬೇಲದ ಮರದಹಣ್ಣು(ಶಿವಾ)-ಶಿವನ ಶಕ್ತಿ- ಶಿವೆ ಅಂದರೆ ಕೆಳಕಂಡ ಗಿಡಮೂಲಿಕೆಗಳು.

1) ಶಮಿ- ಬನ್ನಿ ಮರದ ಪತ್ರೆ
2) ಹೇಡ- (ಹರತು)
3) ಕನ್- ಜಾಜಿಮಲ್ಲಿಗೆ ಎಲೆಯ ರಸ
4) ಅರಶಿನ
5) ದರ್ಭೆ (ದೂರ್ವಾ)
6) ಪಿಪ್ಪಲಿ ಮರದ ಬೇರು
7) ಗೋರೋಚನ- (ಹಸುಗಳಿಂದ ತಯಾರಾಗುತ್ತದೆ)
8) ದೇವದಾರು (ಶರವ್ಯಾಯಾ) ಆಯುಧದಿಂದಾದ ಗಾಯಗಳು (ತವ) ನಿನ್ನ (ತಯಾ) ಕಾಪಾಡಲು (ನೊ) ನೋವು (ರುದ್ರ) ಅಗ್ನಿ (ಮೃಡಯ)- ಕರುಣೆಯಿಂದ ಔಷಧಿ ನೀಡು.

## ಆರೋಗ್ಯದಂಗಳ

**ಔಷಧಿ ತಯಾರಿಕೆಯ ವಿಧಾನ**

| | | | |
|---|---|---|---|
| 1) | ಭಲ್ಲಾತಕ ಬೇಲದ ಹಣ್ಣು | (ನೋವು ನಿವಾರಕ) | 5 |
| 2) | ಶಮಿ-ಎಲೆಗಳು | (ಊತಕಡಿಮೆಮಾಡುತ್ತದೆ) | 10 |
| 3) | ಹೇಡಾ-ಒಣಗಿದ ಹಣ್ಣಿನ ಪುಡಿ<br>(ವಾಸಿಮಾಡುವ ಶಕ್ತಿ ಇದೆ (ಹೂ ಮತ್ತು ಬೀಜ ತೆಗೆದು) | | 50 ಗ್ರಾಂ |
| 4) | ಕನ್ | -ಹೂಗಳು- | 5 |
| 5) | ಹಳದಿ- ಅರಿಶಿನದ ಬೇರು- | | 50 ಗ್ರಾಂ |
| 6) | ದರ್ಭೆ- ಹುಲ್ಲು- | | 5 ಗ್ರಾಂ |
| 7) | ಪಿಪ್ಪಲಿ ಬೇರು | | 10ಗ್ರಾಂ |
| 8) | ಗೋರೋಚನ- | | 5 ಗ್ರಾಂ |
| 9) | ದೇವದಾರು ಮರದ ಬೇರು- | | 5 ಗ್ರಾಂ |
| 10) | ನೀರು- ಪೇಸ್ಟ್ ಮಾಡುವಷ್ಟು | | |

ಮೇಲಿನ ಗಿಡಮೂಲಿಕೆಗಳನ್ನು ಚೆನ್ನಾಗಿ ಅರೆದು, ನಂತರ 30 ನಿಮಿಷಗಳ ಕಾಲ ಕುದಿಸಬೇಕು. ಇದಕ್ಕೆ 20 ಗ್ರಾಂ ಅರಿಶಿನ ಪುಡಿ ಸೇರಿಸಿ- ಪ್ರತಿದಿನ ಎರಡು ಬಾರಿ ಮೂರು ಚಮಚದಷ್ಟು ಸೇವಿಸಬೇಕು. ಇದು ಶೀಘ್ರ ಶಮನಕ್ಕೆ ಮಾತ್ರ ದೀರ್ಘಕಾಲಕ್ಕಾದರೆ, ಮೇಲಿನ ಪೇಸ್ಟಿಗೆ 2 ಲೀಟರ್ ಸೇರಿಸಿ ಕುದಿಸಿ, ಅದನ್ನು ಮೂರನೇ ಒಂದು ಭಾಗಕ್ಕೆ ಇಳಿಸಬೇಕು. ಖಾಲಿಹೊಟ್ಟೆಯಲ್ಲಿ ಈ ಔಷಧಿ ಸೇವಿಸಬೇಕು.

**ಟಿಪ್ಪಣಿ:** ಈ ಮಂತ್ರದಲ್ಲಿ ವೇದಕಾಲದಲ್ಲಿ ಬಾಣ ಮತ್ತು ಇತರೆ ಆಯುಧಗಳಿಂದ ಉಂಟಾಗುತ್ತಿದ್ದ ಗಾಯಗಳಿಗೆ ಹೇಗೆ ಔಷಧೋಪಚಾರವಾಗುತ್ತಿತ್ತು ಎಂಬುದನ್ನು ಸೂಚಿಸುತ್ತದೆ.

ಈಗಿನ ಆಧುನಿಕ ಯುಗದಲ್ಲೂ ಈ ಔಷಧಿಯನ್ನು, ಯಾವುದೇ ತರಹ ಗಾಯಕ್ಕೆ ಹಚ್ಚಬಹುದು, ಪರಿಹಾರ ಶತಸಿದ್ಧ, ತಪ್ಪದೆ ಪ್ರಯತ್ನಿಸಿ.

ಇದಲ್ಲದೆ, ಮೇಲಿನ ನಮಕ ಮಂತ್ರವನ್ನು ಪ್ರತಿ ದಿನಾ ತಪ್ಪದೆ ಜಪಿಸತಕ್ಕದ್ದು.

*Printed & Published by* **S.K. KATOTE** *on behalf of Loka Shikshana Trust at Samyukta Karnataka Press, Koppikar Road, Hubli - 580020 ( Ph. 364303 )*
***Managing Editor :*** **K. SHAMARAO** ***Editor:*** **N.V. JOSHI**
RNI. Regd No. 3633/57